# ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಸ್ಥಾಯಿಸಮಿತಿಗಳ ಪಾತ್ರ

## (ಚಿತ್ರದುರ್ಗ ಜಿಲ್ಲೆಯನ್ನು ಅನುಲಕ್ಷಿಸಿ)

(ರಾಜ್ಯಶಾಸ್ತ್ರ ವಿಷಯಕ್ಕೆ ಸಂಬಂಧಿಸಿದ ಪಿಎಚ್.ಡಿ.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
ಟಿ.ಗಿರೀಶ ನಾಯಕ

ಮಾರ್ಗದರ್ಶಕರು
ಡಾ.ಎ.ಶ್ರೀಧರ
ಸಹ ಪ್ರಾಧ್ಯಾಪಕರು

587



ಅಭಿವೃದ್ಧಿ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೪

587

# ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಸ್ಥಾಯಿಸಮಿತಿಗಳ ಪಾತ್ರ

## (ಚಿತ್ರದುರ್ಗ ಜಿಲ್ಲೆಯನ್ನು ಅನುಲಕ್ಷಿಸಿ)

(ರಾಜ್ಯಶಾಸ್ತ್ರ ವಿಷಯಕ್ಕೆ ಸಂಬಂಧಿಸಿದ ಪಿಎಚ್.ಡಿ.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

ಟಿ.ಗಿರೀಶ ನಾಯಕ

ಮಾರ್ಗದರ್ಶಕರು

ಡಾ.ಎ.ಶ್ರೀಧರ

ಸಹ ಪ್ರಾಧ್ಯಾಪಕರು




ಅಭಿವೃದ್ಧಿ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೮

# ಘೋಷಣಾ ಪತ್ರ

**ಡಾ.ಎ.ಶ್ರೀಧರ** ಅವರ ಮಾರ್ಗದರ್ಶನದಲ್ಲಿ **ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಸ್ಥಾಯಿ ಸಮಿತಿಗಳ ಪಾತ್ರ(ಚಿತ್ರದುರ್ಗ ಜಿಲ್ಲೆಯನ್ನು ಅನುಲಕ್ಷಿಸಿ)**ಎಂಬ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿ, ಪಿಎಚ್.ಡಿ.ಪದವಿಗಾಗಿ **ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ** ಸಾದರಪಡಿಸುತ್ತಿದ್ದೇನೆ. ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಗೊಳಿಸಿಲ್ಲ. ಇದು ನನ್ನ ಸ್ವತಂತ್ರವಾದ ಸಂಶೋಧನಾ ಅಧ್ಯಯನವಾಗಿದೆ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ
ದಿನಾಂಕ: ೨೬-೦೫-೨೦೧೪

Girishanaika

**ಟಿ.ಗಿರೀಶ ನಾಯಕ**
ಸಂಶೋಧಕರು
**ಅಭಿವೃದ್ಧಿ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

# ಮಾರ್ಗದರ್ಶಕರ ಪ್ರಮಾಣ ಪತ್ರ

**ಟಿ.ಗಿರೀಶ ನಾಯಕ** ಅವರು ನನ್ನ ಮಾರ್ಗದರ್ಶನದಲ್ಲಿ **ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಸ್ಥಾಯಿ ಸಮಿತಿಗಳ ಪಾತ್ರ(ಚಿತ್ರದುರ್ಗ ಜಿಲ್ಲೆಯನ್ನು ಅನುಲಕ್ಷಿಸಿ)**ಎಂಬ ಸಂಶೋಧನಾ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ** ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಮೂಲ ವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲ ವೆಂದು ದೃಢೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ
ದಿನಾಂಕ: ೨೬-೦೫-೨೦೧೪

**ಡಾ. ಎ.ಶ್ರೀಧರ**
ಮಾರ್ಗದರ್ಶಕರು
ಸಹ ಪ್ರಾಧ್ಯಾಪಕರು
**ಅಭಿವೃದ್ಧಿ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

# ಪರಿವಿಡಿ

## ಅಧ್ಯಾಯ ಒಂದು

# ಪ್ರಸ್ತಾವನೆ

**1.1. ಸ್ಥಾಯಿ ಸಮಿತಿಗಳು**

**1.2. ಅಧ್ಯಯನದ ಸಮಸ್ಯೀಕರಣ**

**1.3. ಅಧ್ಯಯನದ ಉದ್ದೇಶಗಳು**

**1.4. ಅಧ್ಯಯನದ ಪ್ರಾಕ್‌ಕಲ್ಪನೆ**

**1.5. ಅಧ್ಯಯನದ ವಿಧಾನ**

**1.6. ಅಧ್ಯಯನದ ಮಹತ್ವ**

**1.7. ಅಧ್ಯಯನದ ಮಿತಿಗಳು**

**1.8. ಸಾಹಿತ್ಯ ಸಮೀಕ್ಷೆ**

**1.9 ಅಧ್ಯಾಯಗಳ ವಿನ್ಯಾಸ**

# ಅಧ್ಯಾಯ ಒಂದು

# ಪ್ರಸ್ತಾವನೆ

ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಸ್ಥಾಯಿಸಮಿತಿಗಳ ಮಹತ್ವ, ಕಾರ್ಯಕ್ಷಮತೆ ಮತ್ತು ಹೊಣೆಗಾರಿಕೆಗಳನ್ನು ಗುರುತಿಸುವುದು ಹಾಗೂ ಗ್ರಾಮಪಂಚಾಯತಿ, ತಾಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿ ಈ ಮೂರು ಹಂತದ ಸಂಸ್ಥೆಗಳಲ್ಲಿ ಸ್ಥಾಯಿಸಮಿತಿಗಳನ್ನು ತುಲನಾತ್ಮಕವಾಗಿ ಅಧ್ಯಯನ ಮಾಡುವುದು ಪಿಎಚ್.ಡಿ ಮಹಾಪ್ರಬಂಧದ ಮುಖ್ಯ ಉದ್ದೇಶವಾಗಿದೆ. ಭಾರತದ ಒಕ್ಕೂಟ ವ್ಯವಸ್ಥೆಯಲ್ಲಿ ಆಡಳಿತವು ಕೇಂದ್ರ, ರಾಜ್ಯ ಹಾಗೂ ಪಂಚಾಯತ್ ಸಂಸ್ಥೆಗಳ ನಡುವೆ ಅಧಿಕಾರ ವಿಭಜನೆ ಆಗಿರುವುದು ಕಾಣುತ್ತೇವೆ. ಕೇಂದ್ರ ಮತ್ತು ರಾಜ್ಯ ಶಾಸಕಾಂಗಗಳು ಇಂದು ಅಪಾರ ಕಾರ್ಯನಿರ್ವಹಣಾ ಜವಾಬ್ದಾರಿಯನ್ನು ಹೊಂದಿರುವ ಕಾರಣ ದಿನೇ ದಿನೇ ಸಂಸತ್ತು ಹಾಗೂ ರಾಜ್ಯ ಶಾಸಕಾಂಗಗಳ ಮೇಲೆ ಕಾರ್ಯಭಾರ ಹೆಚ್ಚುತ್ತಲೇ ಇದೆ. ಹಾಗಾಗಿ ಸರ್ಕಾರದ ಚಟುವಟಿಕೆಗಳನ್ನು ಅಧಿವೇಶನ ಸಂದರ್ಭಗಳಲ್ಲಿ ಪರಿಶೀಲಿಸಲು ಸಾಕಷ್ಟು ಸಮಯ ವಿರುವುದಿಲ್ಲ. ಜೊತೆಗೆ ಶಾಸಕಾಂಗದ ಅಧಿವೇಶನವು ವರ್ಷದ ಕೆಲವು ತಿಂಗಳುಗಳು ಮಾತ್ರ ನಡೆಯುವ ಕಾರಣ, ಶಾಸಕಾಂಗದ ಕಾರ್ಯಭಾರವನ್ನು ಮತ್ತು ಶಾಸಕಾಂಗದ ದೈನಂದಿನ ಆಡಳಿತ ವ್ಯವಹಾರಗಳನ್ನು ನಿರಂತರವಾಗಿ ನಡೆಸಲು ಹಾಗೂ ಕೆಲವು ಮುಖ್ಯ ವಿಷಯಗಳ ಬಗ್ಗೆ ನೀತಿಗಳನ್ನು ರೂಪಿಸಿ ನಿರ್ಧಾರಗಳನ್ನು ದಕ್ಷಯುತವಾಗಿ ಹಾಗೂ ಪರಿಣಾಮಕಾರಿಯಾಗಿ ಕೈಗೊಳ್ಳಲು ಕೇಂದ್ರ, ರಾಜ್ಯ ಸರ್ಕಾರಗಳಲ್ಲಿ ಸ್ಥಾಯಿಸಮಿತಿಗಳನ್ನು ರಚಿಸಲು ಸಂವಿಧಾನದ ಅನುಚ್ಛೇದ 88 ಮತ್ತು 105ರಲ್ಲಿ ವಿವರಿಸಲಾಗಿದೆ.[1] ಇಂದು ಸದನ ಸಮಿತಿಗಳು ರಾಷ್ಟ್ರ ಮತ್ತು ರಾಜ್ಯ ಸರ್ಕಾರಗಳಲ್ಲಿ ಹೆಚ್ಚು ಮಹತ್ವವನ್ನು ಹೊಂದಿದ್ದು ಆಡಳಿತದ ಪ್ರಕ್ರಿಯೆಗಳಲ್ಲಿ ಭಾಗವಹಿಸುತ್ತವೆ. ಅದರಂತೆ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರಲ್ಲಿ ಸ್ಥಾಯಿಸಮಿತಿಗಳನ್ನು ಗ್ರಾಮ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಮತ್ತು ಜಿಲ್ಲಾ ಪಂಚಾಯಿತಿ ಮಟ್ಟಗಳಲ್ಲಿ ರಚಿಸಲು

ಅವಕಾಶವನ್ನು ಕಲ್ಪಿಸಿಕೊಡಲಾಗಿದೆ. ಈ ಸಮಿತಿಗಳ ಮೂಲಕ ಗ್ರಾಮಮಟ್ಟದಲ್ಲಿ ಮೂಲಭೂತ ಅವಶ್ಯಕತೆಗಳನ್ನು ಮತ್ತು ಗ್ರಾಮೀಣಾಭಿವೃದ್ಧಿ ಯೋಜನೆಗಳನ್ನು ಸಮರ್ಪಕವಾಗಿ ಪೂರೈಸುವ ಉದ್ದೇಶವನ್ನು ಹೊಂದಿವೆ.

ಸ್ಥಾಯಿ ಸಮಿತಿಗಳು ಇಂದು ಸಾಂವಿಧಾನಿಕ ಶಾಶ್ವತ ಸಂಸ್ಥೆಗಳಾಗಿದ್ದು, ಅದರಲ್ಲೂ ಮುಖ್ಯವಾಗಿ ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಮಹತ್ವದ ಸಮಿತಿಗಳಾಗಿ ನಿರಂತರವಾಗಿ ಆಡಳಿತದಲ್ಲಿ ಕ್ರಿಯಾಶೀಲತೆ ಮೂಡಿಸುವ ಸಂಸ್ಥೆಗಳಾಗಿ ಕಾರ್ಯನಿರ್ವಹಿಸುತ್ತವೆ. ಈ ಸಮಿತಿಗಳು ತಮ್ಮದೆ ಆದ ಮಹತ್ವದ ಅಧಿಕಾರಗಳನ್ನು ಹೊಂದಿದ್ದು ದೈನಂದಿನ ಕಾರ್ಯನಿರ್ವಹಿಸಲು ಪ್ರತಿ ಹಂತದಲ್ಲೂ ವಿವಿಧ ಸ್ಥಾಯಿಸಮಿತಿಗಳನ್ನು ರಚಿಸಿದ್ದು, ಪ್ರತಿ ಸಮಿತಿಯು ಚುನಾಯಿತ ಸದಸ್ಯರಲ್ಲೆ ಒಬ್ಬರನ್ನು ಅಧ್ಯಕ್ಷ, ಉಪಾಧ್ಯಕ್ಷ, ಹಾಗೂ ಸದಸ್ಯರನ್ನು ಒಳಗೊಂಡಿರುತ್ತದೆ. ಈ ಸಮಿತಿಗಳು ದೈನಂದಿನ ಕಾರ್ಯಗಳನ್ನು ನಿರ್ವಹಿಸುತ್ತವೆ. ಇಂತಹ ಸ್ಥಾಯಿ ಸಮಿತಿಗಳ ಮೂಲ ಉದ್ದೇಶವೇನೆಂದರೆ, ಜನತೆಯ ಮೂಲಭೂತ ಬೇಡಿಕೆಗಳನ್ನು ಪರಿಣಾಮಕಾರಿಯಾಗಿ ಕಾರ್ಯಗತಗೊಳಿಸುವುದು ಹಾಗೂ ಪಂಚಾಯತ್ ಸಂಸ್ಥೆಗಳ ಕಾರ್ಯಕ್ಷಮತೆಯನ್ನು ಹೆಚ್ಚಿಸುವುದೇ ಆಗಿದೆ. ಭಾರತ ಸ್ವಾತಂತ್ರ್ಯ ಪಡೆದ ನಂತರ ಗ್ರಾಮೀಣಾಭಿವೃದ್ಧಿಗಾಗಿ ಮತ್ತು ನಾಗರಿಕರ ಮೂಲಭೂತ ಅಗತ್ಯಗಳನ್ನು ಪೂರೈಸುವ ಸಲುವಾಗಿ ಅನೇಕ ಕಾರ್ಯಕ್ರಮಗಳನ್ನು ಜಾರಿಗೆ ತರಲಾಯಿತು. ಈ ಕಾರ್ಯಕ್ರಮಗಳ ಮುಖ್ಯ ಉದ್ದೇಶ ಗ್ರಾಮಗಳ ಅಭಿವೃದ್ಧಿ. ಮಾನವನ ಮೂಲಭೂತ ಅಗತ್ಯಗಳ ಪೂರೈಕೆ ಮತ್ತು ಸಾಮಾಜಿಕ ಪರಿವರ್ತನೆ ಆಗಿದೆ.[2] ಆದರೂ ಸಹ ಇಂತಹ ಉದ್ದೇಶಗಳು ನಿರೀಕ್ಷಿತ ಫಲವನ್ನು ನೀಡಲಿಲ್ಲ. ಪರಿಣಾಮವಾಗಿ ಗ್ರಾಮಗಳ ಅಭಿವೃದ್ಧಿಗಾಗಿ ಕೆಳಮಟ್ಟದಲ್ಲಿ ಪರಿಣಾಮಕಾರಿಯಾದ ಚುನಾಯಿತ ಸಂಸ್ಥೆಗಳ ಅಗತ್ಯದ ದೃಷ್ಟಿಯಿಂದ ಪಂಚಾಯತ್‌ರಾಜ್ ಸಂಸ್ಥೆಗಳನ್ನು ಸ್ಥಾಪಿಸಲಾಯಿತು. ಗ್ರಾಮೀಣ ಜನತೆಯ ಜೀವನಮಟ್ಟವನ್ನು ಸುಧಾರಿಸಲು ಗ್ರಾಮೀಣ ಭಾಗದ ಉತ್ಪಾದನಾ ಚಟುವಟಿಕೆಗಳಾದ ಕೃಷಿ, ಕೈಗಾರಿಕೆಗಳ ಅಭಿವೃದ್ಧಿ, ಮೂಲಭೂತ ಅವಶ್ಯಕತೆಗಳಾದ ಕುಡಿಯುವ ನೀರು, ನೈರ್ಮಲ್ಯೀಕರಣ, ಶಿಕ್ಷಣ, ವಸತಿಗಳನ್ನು ಪೂರೈಸುವಲ್ಲಿ, ಸಾಮಾಜಿಕ ಅನ್ಯಾಯಗಳನ್ನು ಸರಿಪಡಿಸುವಲ್ಲಿ ಹಾಗೂ ಇನ್ನಿತರ ವಲಯಗಳಲ್ಲಿ ಗಣನೀಯವಾದ ಅಭಿವೃದ್ಧಿ ಸಾಧಿಸುವಲ್ಲಿ ಈ ಪಂಚಾಯತ್‌ರಾಜ್ ಸಂಸ್ಥೆಗಳ ಪಾತ್ರ ಮಹತ್ವದ್ದಾಗಿದೆ.[3] ಹಾಗಾಗಿ ಭಾರತ ಸ್ವಾತಂತ್ರ್ಯ ಪಡೆದ ನಂತರ ಅನೇಕ ಪ್ರಯತ್ನಗಳು, ಹಲವಾರು ಸಮಿತಿಗಳ ಶಿಫಾರಸ್ಸುಗಳು ಹಾಗೂ ಸರ್ಕಾರದ ಹಲವಾರು ನೀತಿ ಹಾಗೂ ಯೋಜನೆಗಳನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಜಾರಿಗೆ ತಂದಿವೆ. ಪರಿಣಾಮವಾಗಿ ಗ್ರಾಮಗಳ ಅಭಿವೃದ್ಧಿಗಾಗಿ ತಳಮಟ್ಟದಲ್ಲಿ ಪರಿಣಾಮಕಾರಿಯಾದ ಚುನಾಯಿತ ಸಂಸ್ಥೆಗಳ ಅಗತ್ಯದ ದೃಷ್ಟಿಯಿಂದ ಪಂಚಾಯತ್‌ರಾಜ್ ಸಂಸ್ಥೆಗಳನ್ನು ಬಲಪಡಿಸಲು

ಕೇಂದ್ರ ಸರ್ಕಾರ 1957ರಲ್ಲಿ ಬಲವಂತರಾಯ್ ಮೆಹ್ತಾ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ನೇಮಕ ಮಾಡಲಾಯಿತು.[4] ಈ ಸಮಿತಿಯು ಕೆಲವು ದೋಷಗಳನ್ನು ಪಟ್ಟಿ ಮಾಡಿತು. ಗ್ರಾಮಗಳ ಆಡಳಿತ ಇನ್ನೂ ಊಳಿಗಮಾನ್ಯದಿಂದ ಕೂಡಿದೆ. ಸರ್ಕಾರ ಜಾರಿಗೆ ತಂದ ಅಭಿವೃದ್ಧಿ ಕಾರ್ಯಕ್ರಮಗಳ ಲಾಭಗಳು ಸ್ಥಳೀಯ ಮೇಲ್ವರ್ಗಗಳ ಮೂಲಕವೆ ಹಾದು ಹೋಗಬೇಕಾಗಿದೆ. ಯೋಜನೆಯ ಫಲಗಳು ಬಡವರಿಗೆ ತಲುಪುತ್ತಿಲ್ಲ ಹಾಗಾಗಿ ಮೂರು ಹಂತದ ಪಂಚಾಯತ್‌ರಾಜ್ ಪದ್ಧತಿಯನ್ನು ಜಾರಿಗೆ ತರುವಂತೆ ಶಿಫಾರಸ್ಸು ಮಾಡಿತು. ಈ ಸಂಸ್ಥೆಗಳ ಮೂಲಕ ಅಭಿವೃದ್ಧಿ ಯೋಜನೆಗಳು ಜನತೆಗೆ ತಲುಪಬೇಕು ಎಂದು ಸಮಿತಿ ಹೇಳಿತು.[5] ನಂತರದಲ್ಲಿ ದೇಶಾದ್ಯಂತ ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆ ಜಾರಿಗೆ ಬಂದಿತು. ಈ ಸಂಸ್ಥೆಗಳ ಮೂಲಕ ಗ್ರಾಮೀಣಾಭಿವೃದ್ಧಿ ಮತ್ತು ಗ್ರಾಮೀಣ ಜನರ ಮೂಲಭೂತ ಅಗತ್ಯಗಳನ್ನು ಪೂರೈಸುವ ಜವಬ್ದಾರಿಯನ್ನು ನೀಡಲಾಯಿತು. ಅದರೂ ಸಹ ಈ ಸಂಸ್ಥೆಗಳು ಸರಿಯಾಗಿ ಕಾರ್ಯನಿರ್ವಹಿಸಲಿಲ್ಲ. ಇದರೊಂದಿಗೆ ಅನೇಕ ಸಂಸ್ಥೆಗಳು ಭಾರತದಲ್ಲಿ ಇಪ್ಪತ್ತು ವರ್ಷಗಳ ಕಾಲ ಕಾರ್ಯ ನಿರ್ವಹಿಸಿದವು.

ಕೇಂದ್ರದಲ್ಲಿ ಮೊತ್ತಮೊದಲ ಬಾರಿ ಬಂದ ಕಾಂಗ್ರೆಸ್ಸೇತರ ಸರ್ಕಾರ ಪುನಃ ಈ ಸಂಸ್ಥೆಗಳನ್ನು ಬಲಪಡಿಸಲು ಅಶೋಕ ಮೆಹ್ತಾ ಅವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ನೇಮಕ ಮಾಡಿತು. ಸಮಿತಿಯ ಅಧ್ಯಯನ ನಡೆಸಿ ಎರಡು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ತರುವಂತೆ ಶಿಫಾರಸ್ಸು ಮಾಡಿತು. ಪಂಚಾಯತ್ ಸಂಸ್ಥೆಗಳಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸಾಕಷ್ಟು ಅನುದಾನಗಳನ್ನು ಒದಗಿಸಬೇಕೆಂದು ಸಮಿತಿ ಹೇಳಿತು. ಈ ಶಿಫಾರಸ್ಸುಗಳನ್ನು ಇಟ್ಟುಕೊಂಡು ದೇಶದಲ್ಲಿ ಎರಡು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಜಾರಿಗೆ ತರಲಾಯಿತು. 1983ರಲ್ಲಿ ಕರ್ನಾಟಕದಲ್ಲಿ ಎರಡು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಜಾರಿಗೆ ತರಲಾಯಿತು. ಈ ಕಾಯ್ದೆಯಲ್ಲಿ ಸ್ಥಾಯಿಸಮಿತಿಗಳನ್ನು ಪರಿಚಯಿಸಿತು. ಸ್ಥಾಯಿ ಸಮಿತಿಗಳಿಗೆ ಅನೇಕ ಜವಾಬ್ದಾರಿಗಳನ್ನು ಮತ್ತು ಅಧಿಕಾರಗಳನ್ನು ನೀಡಿತು.[6] ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಮೂರು ಸ್ಥಾಯಿಸಮಿತಿಗಳನ್ನು ರಚಿಸಿತು. 1. ಉತ್ಪಾದನಾ ಸಮಿತಿ, 2. ಗ್ರಾಮೀಣ ನೀರು ಮತ್ತು ನೈರ್ಮಲ್ಯ ಸಮಿತಿ, 3. ಸಾಮಾಜಿಕ ನ್ಯಾಯಸಮಿತಿ, ಈ ಸಮಿತಿಗಳಿಗೆ ಸಂಬಂಧಪಟ್ಟ ಅಂಶಗಳ ಬಗ್ಗೆ ಕ್ರಮ ಕೈಗೊಳ್ಳುವ ಅಧಿಕಾರ ನೀಡಲಾಯಿತು. ಆದರೆ ಸ್ಥಾಯಿಸಮಿತಿಗಳು ಸಾಮಾಜಿಕ ವ್ಯವಸ್ಥೆಗೆ ಮಾತ್ರ ರಚನೆಗೊಂಡವು. ಆದರೆ ಈ ಸಮಿತಿಗಳ ಮೂಲ ಉದ್ದೇಶ ಈಡೇರಲಿಲ್ಲ. ಹಾಗಾಗಿ ಕಾಯ್ದೆಯಲ್ಲಿ ಮಾತ್ರ ಈ ಸಮಿತಿಗಳು ಉಳಿದುಕೊಂಡವು. ದೇಶದಲ್ಲಿ ಏಕರೂಪ ಪಂಚಾಯತ್‌ರಾಜ್ ವ್ಯವಸ್ಥೆ ಮತ್ತು ಇವುಗಳಿಗೆ ಸಾಂವಿಧಾನಿಕ ಸ್ಥಾನಮಾನಗಳನ್ನು ನೀಡುವ ದೃಷ್ಟಿಯಿಂದ 1992ರಲ್ಲಿ ಕೇಂದ್ರದಲ್ಲಿರುವ ಕಾಂಗ್ರೆಸ್ ಸರ್ಕಾರ ಸಂವಿಧಾನದ 73ನೇ ತಿದ್ದುಪಡಿಯನ್ನು ಜಾರಿಗೆ ತಂದಿತು.[7] ಆಗ ಪುನಃ ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ದೇಶಾದ್ಯಂತ ಜಾರಿಗೊಳಿಸಿತು.

73ನೇ ತಿದ್ದುಪಡಿ ಕಾಯ್ದೆಯ ನಿಯಮಗಳಿಗನುಗುಣವಾಗಿ ಕರ್ನಾಟಕ ಸರ್ಕಾರವು 1993ರಲ್ಲಿ ರಾಜ್ಯದಲ್ಲಿ ಪಂಚಾಯತ್‌ರಾಜ್ ಕಾಯ್ದೆ–1993ಯನ್ನು ಜಾರಿಗೆ ತಂದಿತು. ಈ ಕಾಯ್ದೆಯನ್ವಯ ಪಂಚಾಯತ್ ಸಂಸ್ಥೆಗಳು ಸಾಂವಿಧಾನಿಕ ಸ್ಥಾನ ಪಡೆದವು. ಇಂದು ಪಂಚಾಯತ್ ಸಂಸ್ಥೆಗಳು ಹೆಚ್ಚು ಅಧಿಕಾರವನ್ನು ಪಡೆದಿವೆ. ಗ್ರಾಮ ಮಟ್ಟದಲ್ಲಿ ಗ್ರಾಮ ಪಂಚಾಯಿತಿಗಳು, ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಪಂಚಾಯಿತಿಗಳು ಮತ್ತು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪಂಚಾಯಿತಿಗಳನ್ನು ಸ್ಥಾಪಿಸಲಾಗಿದೆ. 1993ರ ಕಾಯ್ದೆಯ ಮುಖ್ಯಾಂಶಗಳು ಇಂತಿವೆ; ಜನತೆಗೆ ಅಧಿಕಾರ, ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆ ಪರಿಶಿಷ್ಟಜಾತಿ/ಪಂಗಡದವರಿಗೆ ಮೀಸಲಾತಿ, ಮಹಿಳೆಯರಿಗೆ ಶೇಕಡ 50ರಷ್ಟು ಮೀಸಲಾತಿ, ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸಾಕಷ್ಟು ಅನುದಾನಗಳು, ಗ್ರಾಮಸಭೆಯ ಸಂಘಟನೆ, 29 ಗ್ರಾಮೀಣಾಭಿವೃದ್ಧಿ ಅಂಶಗಳ ಜಾರಿ, ಜಿಲ್ಲಾ ಯೋಜನಾ ಸಮಿತಿಗಳ ರಚನೆ. ಸ್ಥಳೀಯ ಸಂಪನ್ಮೂಲ ಕ್ರೋಡೀಕರಣಕ್ಕೆ ಒತ್ತು ಹಾಗೂ ಪ್ರತಿ ಹಂತದಲ್ಲೂ ಸ್ಥಾಯಿಸಮಿತಿಗಳ ರಚನೆ ಈ ಮುಖ್ಯಾಂಶಗಳೊಂದಿಗೆ ಪಂಚಾಯತ್ ಸಂಸ್ಥೆಗಳನ್ನು ಬಲಪಡಿಸಲಾಗಿದೆ.[8] ಇದರಂತೆ ಕೆಳ ಹಂತದಿಂದ ಅಭಿವೃದ್ಧಿ ಯೋಜನೆಗಳನ್ನು ವಿಸ್ತೃತಗೊಳಿಸುವ ಪ್ರಯತ್ನಗಳು ನಡೆದರೆ ಮತ್ತೊಂದು ಕಡೆ ಪ್ರಜಾಸತ್ತಾತ್ಮಕ ವಿಕೇಂದ್ರೀಕರಣದ ಮೂಲಕ ಗ್ರಾಮೀಣಾಭಿವೃದ್ಧಿ ಸಾಧಿಸುವ ಪ್ರಕ್ರಿಯೆ ನಡೆಯಿತು. ಈ ಅಭಿವೃದ್ಧಿ ಪ್ರಕ್ರಿಯೆಯು ನಿರಂತರತೆಯನ್ನು ಹೊಂದುವ ಧ್ಯೇಯೋದ್ದೇಶದಿಂದ ಸ್ಥಾಯಿಸಮಿತಿಗಳನ್ನು ರಚಿಸಲಾಯಿತು. ಈ ಸ್ಥಾಯಿಸಮಿತಿಗಳು ಕಾರ್ಯ ನಿರ್ವಹಿಸುವಲ್ಲಿ ಎಷ್ಟರ ಮಟ್ಟಿಗೆ ಯಶಸ್ವಿಯಾಗಿವೆ ಎಂಬುದರ ಬಗ್ಗೆ ವಿಮರ್ಶಾತ್ಮಕವಾಗಿ ಅಧ್ಯಯನ ಮಾಡುವುದು ಹಾಗೂ ವಿಶ್ಲೇಷಣೆ ಮಾಡುವುದರ ಅಗತ್ಯವಿದೆ. ಸಂವಿಧಾನದ 73ನೇ ತಿದ್ದುಪಡಿಯನ್ವಯ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಜಿಲ್ಲಾ ಪಂಚಾಯತ್, ತಾಲ್ಲೂಕು ಪಂಚಾಯತ್ ಮತ್ತು ಗ್ರಾಮಪಂಚಾಯತ್ ಎಂದು ಮೂರು ಹಂತಗಳಲ್ಲಿ ರಚಿಸಲಾಯಿತು. ಪ್ರತಿ ಸಮಿತಿಗಳಿಗೂ ನಿರ್ದಿಷ್ಟವಾದ ಅಧಿಕಾರ ಪ್ರಕಾರ್ಯಗಳನ್ನು ನೀಡುವುದರ ಜೊತೆಗೆ ಸ್ಥಾಯಿ ಸಮಿತಿಗಳನ್ನು ಕೆಳಕಂಡಂತೆ ರಚಿಸಲಾಗಿದೆ.

## 1.1. ಸ್ಥಾಯಿ ಸಮಿತಿಗಳು

1993ರ ಅಧಿನಿಯಮವು ಪಂಚಾಯತಿ ವ್ಯವಸ್ಥೆಯ ಮೂರು ಹಂತಗಳಲ್ಲಿ ವಿವಿಧ ಸ್ಥಾಯಿ ಸಮಿತಿಗಳನ್ನು ರಚಿಸಿಕೊಳ್ಳಲು ಅವಕಾಶ ನೀಡಿದೆ. ಏಕೆಂದರೆ ಪ್ರತಿ ಪಂಚಾಯಿತಿಯು ನಿರ್ದಿಷ್ಟ ವಿಷಯಗಳನ್ನು ಕೂಲಂಕಷವಾಗಿ ಚರ್ಚಿಸಿ ಅವುಗಳ ಸಾಧಕ ಬಾಧಕಗಳನ್ನು ಪರಿಶೀಲಿಸಿ ಸೂಕ್ತ ನಿರ್ಣಯಗಳನ್ನು ತೆಗೆದುಕೊಳ್ಳಲು ಅವಕಾಶ ಕಲ್ಪಿಸಿದೆ. ಮತ್ತು ಆಯಾ ಪಂಚಾಯಿತಿಗೆ ವಹಿಸಿಕೊಟ್ಟಿರುವ ಕಾರ್ಯಗಳನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಮತ್ತು ಅಭಿವೃದ್ಧಿ ಕಾರ್ಯಗಳನ್ನು ಅನುಷ್ಠಾನಗೊಳಿಸಲು ಸಾದ್ಯವಾಗಲಿ ಎಂಬ ಉದ್ದೇಶದಿಂದ ಮೂರು ಹಂತಗಳಲ್ಲಿ

ವಿವಿಧ ಸ್ಥಾಯಿ ಸಮಿತಿಗಳನ್ನು ರಚಿಸಲು ಅವಕಾಶ ನೀಡಿದೆ. ಚುನಾಯಿತ ಸದಸ್ಯರ ಅನುಭವ ಮತ್ತು ಪರಿಣಿತಿಯನ್ನು ಅವಲಂಬಿಸಿ ಆಯಾ ಸ್ಥಾಯಿಸಮಿತಿಯ ಸದಸ್ಯರನ್ನಾಗಿ ಮಾಡುವುದರಿಂದ ಪ್ರತಿ ವಿಷಯಗಳನ್ನು ವಿವರವಾಗಿ ಚರ್ಚಿಸಿ ಗುಣಾವಗುಣಗಳನ್ನು ವಿಮರ್ಶಿಸಿ ಸೂಕ್ತ ತೀರ್ಮಾನ ಕೈಗೊಂಡು ಜನಪರ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲು ಸಾಧ್ಯವಾಗುತ್ತದೆ. ಸಾಮಾನ್ಯವಾಗಿ ಸ್ಥಾಯಿ ಸಮಿತಿಗಳ ಸಭೆಗಳನ್ನು ಪ್ರತಿಯೊಂದು ಪಂಚಾಯಿತಿಯ ಕೇಂದ್ರ ಕಾರ್ಯಸ್ಥಾನದಲ್ಲಿ ನಡೆಸತಕ್ಕದ್ದು ಎಂದು ಹೇಳಲಾಗಿದೆ. ಪಂಚಾಯತ್‌ರಾಜ್ ಸಂಸ್ಥೆಗಳ ಮೂರು ಹಂತಗಳಲ್ಲಿ ಈ ಕೆಳಗಿನಂತೆ ಸ್ಥಾಯಿ ಸಮಿತಿಗಳನ್ನು ರಚಿಸಲಾಗಿದೆ.[9]

**ಅ. ಜಿಲ್ಲಾ ಪಂಚಾಯಿತಿಯ ಸ್ಥಾಯಿ ಸಮಿತಿಗಳ ರಚನೆ**

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 186ರ ಪ್ರಕಾರ ಜಿಲ್ಲಾ ಪಂಚಾಯತಿಯು ಈ ಕೆಳಕಂಡ ಐದು ಸ್ಥಾಯಿ ಸಮಿತಿಗಳನ್ನು ಹೊಂದಿರಬೇಕು.

1. ಸಾಮಾನ್ಯ ಸ್ಥಾಯಿ ಸಮಿತಿ.
2. ಹಣಕಾಸು, ಲೆಕ್ಕ ಪರಿಶೋಧನೆ ಮತ್ತು ಯೋಜನಾ ಸಮಿತಿ.
3. ಸಾಮಾಜಿಕ ನ್ಯಾಯ ಸಮಿತಿ.
4. ಶಿಕ್ಷಣ ಮತ್ತು ಆರೋಗ್ಯ ಸಮಿತಿ
5. ಕೃಷಿ ಮತ್ತು ಕೈಗಾರಿಕಾ ಸಮಿತಿ.

**1. ಸಾಮಾನ್ಯ ಸ್ಥಾಯಿ ಸಮಿತಿ**

ಈ ಸಮಿತಿಯು ಸಿಬ್ಬಂದಿ ವಿಷಯಗಳು, ಸಂಪರ್ಕ, ಕಟ್ಟಡಗಳು, ಗ್ರಾಮೀಣ ಗೃಹ ನಿರ್ಮಾಣ ಮತ್ತು ಗ್ರಾಮ ವಿಸ್ತರಣಾ ಕಾರ್ಯಗಳು, ಪ್ರಕೃತಿ ವಿಕೋಪಗಳಿಗಾಗಿ ಪರಿಹಾರ ಹಾಗೂ ಉಳಿದಂತೆ ಎಲ್ಲಾ ಸಂಕೀರ್ಣ ವಿಷಯಗಳಿಗೆ ಸಂಬಂಧಪಟ್ಟಂತೆ ಕಾರ್ಯಗಳನ್ನು ನಿರ್ವಹಿಸಬೇಕು.[10]

**2. ಹಣಕಾಸು, ಲೆಕ್ಕ ಪರಿಶೋಧನ ಹಾಗೂ ಯೋಜನೆ ಸಮಿತಿ**

ಈ ಸಮಿತಿಯು ಜಿಲ್ಲಾ ಪಂಚಾಯತಿಯ ಹಣಕಾಸು ಹಾಗೂ ಬಜೆಟ್ ರೂಪಿಸುವುದು, ಆದಾಯ ಹೆಚ್ಚಿಸುವುದಕ್ಕಾಗಿ ಪ್ರಸ್ತಾವನೆಗಳನ್ನು ಹಾಗೂ ಜಮಾ ಮತ್ತು ಖರ್ಚುಗಳ ವಿವರಗಳನ್ನು ಪರಿಶೀಲಿಸುವುದು. ಜಿಲ್ಲಾ ಪಂಚಾಯಿತಿಯ ಹಣಕಾಸಿನ ಮೇಲೆ ಪ್ರಭಾವ ಬೀರುವ ಪ್ರಸ್ತಾವನೆಗಳ

ಪರ್ಯಾಯಲೋಚನೆ, ಆದಾಯ ಹಾಗೂ ವೆಚ್ಚದ ಸಾಮಾನ್ಯ ಮೇಲ್ವಿಚಾರಣೆಗೆ ಸಂಬಂಧಪಟ್ಟ ಕಾರ್ಯಗಳನ್ನು ನಿಗದಿಪಡಿಸಲಾಗಿದೆ.

**3. ಸಾಮಾಜಿಕ ನ್ಯಾಯ ಸಮಿತಿ**

ಈ ಸಮಿತಿಯು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳು ಮತ್ತು ಹಿಂದುಳಿದ ವರ್ಗಗಳ ಶೈಕ್ಷಣಿಕ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಹಿತಾಸಕ್ತಿಗಳ ಸಂರಕ್ಷಣೆ, ಸಾಮಾಜಿಕ ಅನ್ಯಾಯ ಹಾಗೂ ಎಲ್ಲಾ ರೀತಿಯ ಶೋಷಣೆಯಿಂದ ಅವರನ್ನು ಸಂರಕ್ಷಿಸುವುದು, ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಮತ್ತು ಹಿಂದುಳಿದ ವರ್ಗಗಳ ಏಳಿಗೆ ಮತ್ತು ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳಿಗೆ ಇತರ ದುರ್ಬಲರಿಗೆ ಮತ್ತು ಮಹಿಳೆಯರಿಗೆ ಸಾಮಾಜಿಕ ನ್ಯಾಯ ದೊರಕಿಸಿಕೊಡುವ ಕಾರ್ಯಗಳನ್ನು ಮಾಡಬೇಕು.

**4. ಶಿಕ್ಷಣ ಮತ್ತು ಆರೋಗ್ಯ ಸಮಿತಿ**

ಈ ಸಮಿತಿಯು ಜಿಲ್ಲಾ ಪಂಚಾಯತಿಯ ಎಲ್ಲಾ ಶೈಕ್ಷಣಿಕ ಚಟುವಟಿಕೆಗಳ ಹೊಣೆಗಾರಿಕೆ ಹೊಂದಿರುವುದು ರಾಷ್ಟ್ರೀಯ ಶಿಕ್ಷಣ ನೀತಿ ಮತ್ತು ರಾಷ್ಟ್ರೀಯ ಮತ್ತು ರಾಜ್ಯ ಯೋಜನೆಗಳ ಚೌಕಟ್ಟಿನೊಳಗೆ ಜಿಲ್ಲೆಯಲ್ಲಿ ಶಿಕ್ಷಣ ಯೋಜನೆಗಳನ್ನು ಕೈಗೂಳ್ಳುವುದು, ಶೈಕ್ಷಣಿಕ ಚಟುವಟಿಕೆಗಳ ಸಮೀಕ್ಷೆ ಮತ್ತು ನಿರ್ಣಯ ಮಾಡುವುದು. ಜಿಲ್ಲಾ ಪಂಚಾಯತಿಯು ವಹಿಸಿಕೊಡಬಹುದಾದ ಶಿಕ್ಷಣ, ವಯಸ್ಕರ ಶಿಕ್ಷಣ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ಸಂಬಂಧಿಸಿದ ಕಾರ್ಯಗಳನ್ನು ನೆರವೇರಿಸುವುದು, ಆರೋಗ್ಯ ಸೇವೆಗಳು, ನೀರು ಸರಬರಾಜು, ಕುಟುಂಬಕಲ್ಯಾಣ ಮತ್ತು ಇತರೆ ಕಾರ್ಯಗಳನ್ನು ನಿರ್ವಹಿಸಬೇಕು.

**5. ಕೃಷಿ ಮತ್ತು ಕೈಗಾರಿಕಾ ಸಮಿತಿ**

ಈ ಸಮಿತಿಯು ಕೃಷಿ ಉತ್ಪಾದನೆ, ಭೂಮಿಯನ್ನು ಕೃಷಿಯೋಗ್ಯವನ್ನಾಗಿ ಮಾಡುವುದು. ಪಶು ಸಂಗೋಪನೆ ಸಹಕಾರಗಳಿಗೆ ಸಂಬಂಧಿತ ಕಾರ್ಯ ನೆರವೇರಿಸುವುದು, ಗ್ರಾಮ ಹಾಗೂ ಗುಡಿ ಕೈಗಾರಿಕೆಗಳು ಸೇರಿದಂತೆ ಜಿಲ್ಲೆಯಲ್ಲಿ ಕೈಗಾರಿಕಾ ಅಭಿವೃದ್ಧಿಯನ್ನು ಉತ್ತೇಜಿಸುವಂತಹ ಕಾರ್ಯಗಳನ್ನು ನೆರವೇರಿಸಬೇಕು.

**ಆ. ತಾಲ್ಲೂಕು ಪಂಚಾಯತಿಯ ಸ್ಥಾಯಿ ಸಮಿತಿಗಳ ರಚನೆ**

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 148ರ ಪ್ರಕಾರ ಪ್ರತಿಯೊಂದು ತಾಲ್ಲೂಕು ಪಂಚಾಯಿತಿಯು ಈ ಕೆಳಕಂಡ ಸ್ಥಾಯಿ ಸಮಿತಿಗಳನ್ನು ಹೊಂದಿರಬೇಕು.[11]

1. ಸಾಮಾನ್ಯ ಸ್ಥಾಯಿ ಸಮಿತಿ.

2. ಹಣಕಾಸು, ಲೆಕ್ಕ ಪರಿಶೋಧನೆ ಮತ್ತು ಯೋಜನಾ ಸಮಿತಿ.

3. ಸಾಮಾಜಿಕ ನ್ಯಾಯ ಸಮಿತಿ.

**1. ಸಾಮಾನ್ಯ ಸ್ಥಾಯಿ ಸಮಿತಿ**

ಈ ಸಮಿತಿಯು ಸಿಬ್ಬಂದಿ ವಿಷಯಗಳು, ಸಂಪರ್ಕಗಳು, ಕಟ್ಟಡಗಳು, ಗ್ರಾಮೀಣ ಗೃಹ ನಿರ್ಮಾಣ, ಗ್ರಾಮ ವಿಸ್ತರಣಾ ಕಾರ್ಯಗಳು, ನೈಸರ್ಗಿಕ ವಿಪತ್ತುಗಳು, ಪರಿಸರ, ನೀರುಸರಬರಾಜು ಮತ್ತು ಎಲ್ಲಾ ಉಳಿದ ಸಂಕೀರ್ಣ ವಿಷಯಗಳಿಗೆ ಸಂಬಂಧಪಟ್ಟ ಕಾರ್ಯಗಳನ್ನು ನೆರವೇರಿಸಬೇಕು.

**2. ಹಣಕಾಸು, ಲೆಕ್ಕ ಪರಿಶೋಧನೆ ಮತ್ತು ಯೋಜನಾ ಸಮಿತಿ**

ಹಣಕಾಸು ಲೆಕ್ಕ ಪರಿಶೋಧನಾ ಮತ್ತು ಯೋಜನಾ ಸಮಿತಿಯು ತಾಲ್ಲೂಕು ಪಂಚಾಯಿತಿಯ ಹಣಕಾಸು ಮತ್ತು ಬಜೆಟ್ ರೂಪಿಸುವುದು ಆದಾಯ ಹೆಚ್ಚಿಸುವುದಕ್ಕಾಗಿ ಪ್ರಸ್ತಾವಗಳ ಪರಿಶೀಲನೆ, ಜಮಾ ಮತ್ತು ಖರ್ಚುಗಳ ವಿವರಣೆಯನ್ನು ಪರಿಶೀಲಿಸುವುದು. ತಾಲ್ಲೂಕು ಪಂಚಾಯತಿಯ ಹಣಕಾಸಿನ ಮೇಲೆ ಪ್ರಭಾವವನ್ನು ಬೀರುವ ಎಲ್ಲಾ ಪ್ರಸ್ತಾವಗಳ ಪರ್ಯಾಯಲೋಚನೆ ಮತ್ತು ತಾಲ್ಲೂಕು ಪಂಚಾಯಿತಿಯ ಆದಾಯ ಮತ್ತು ವೆಚ್ಚದ ಸಾಮಾನ್ಯ ಮೇಲ್ವಿಚಾರಣೆ ಮತ್ತು ಸಹಕಾರ, ಸಣ್ಣ ಉಳಿತಾಯ ಮತ್ತು ತಾಲ್ಲೂಕಿನ ಅಭಿವೃದ್ಧಿ ಯೋಜನೆಗೆ ಸಂಬಂಧಿಸಿದ ಇತರ ಯಾವುದೇ ಕಾರ್ಯಗಳನ್ನು ನೆರವೇರಿಸಬೇಕು.

**3. ಸಾಮಾಜಿಕ ನ್ಯಾಯ ಸಮಿತಿ**

ಈ ಸಮಿತಿಯು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಮತ್ತು ಹಿಂದುಳಿದ ವರ್ಗಗಳ ಶೈಕ್ಷಣಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಇತರ ವಿಷಯಗಳ ಸಂವರ್ಧನೆ, ಸಾಮಾಜಿಕ ಮತ್ತು ಇತರೆ ರೀತಿಯ ಅನ್ಯಾಯ ಅಥವಾ ಶೋಷಣೆಗಳಿಂದ ಅವರನ್ನು ಸಂರಕ್ಷಿಸುವುದು, ಮಹಿಳೆಯರಿಗೆ ಮತ್ತು ಸಮಾಜದ ದುರ್ಬಲ ವರ್ಗದವರಿಗೆ ಸಾಮಾಜಿಕ ನ್ಯಾಯವನ್ನು ದೊರಕಿಸಿ ಕೊಡುವ ಕಾರ್ಯಗಳನ್ನು ಮಾಡಬೇಕು.

**ಇ. ಗ್ರಾಮಪಂಚಾಯಿತಿ ಮತ್ತು ಸ್ಥಾಯಿ ಸಮಿತಿಗಳು**

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993 ರ ಪ್ರಕರಣ 61 ಮತ್ತು 61–ಎ ರಲ್ಲಿ ಸ್ಥಾಯಿಸಮಿತಿಗಳ ರಚನೆಗೆ ಅವಕಾಶ ಕಲ್ಪಿಸಿಕೊಡಲಾಗಿದೆ.[12] ಚುನಾಯಿತ ಸದಸ್ಯರ ಅನುಭವ ಮತ್ತು ಪರಿಣತಿಯನ್ನು ಪರಿಗಣಿಸಿ ಪ್ರತಿ ಸ್ಥಾಯಿಸಮಿತಿಗಳಿಗೆ ಸದಸ್ಯರನ್ನಾಗಿ ಮಾಡುವುದರಿಂದ

ಆಯಾ ಸಮಿತಿಯು ಸಂಬಂಧಪಟ್ಟ ವಿಷಯಗಳನ್ನು ವಿವರವಾಗಿ ಚರ್ಚಿಸಿ ಗುಣಾವಗುಣಗಳನ್ನು ವಿಮರ್ಶಿಸಿ ಅದರ ಬಗ್ಗೆ ಸೂಕ್ತ ನಿರ್ಣಯ ಕೈಗೊಳ್ಳಲು ಹಾಗೂ ಜನಪರ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲು ಸಾಧ್ಯವಾಗುತ್ತದೆ. ಗ್ರಾಮ ಪಂಚಾಯತಿಯ ಸ್ಥಾಯಿ ಸಮಿತಿಗಳ ರಚನೆಯನ್ನು ಈ ಕೆಳಕಂಡಂತೆ ನೋಡಬಹುದು. ಪ್ರತಿಯೊಂದು ಗ್ರಾಮ ಪಂಚಾಯತಿಯು ಮೂರು ಸಮಿತಿಗಳನ್ನು ಹೊಂದಿರುತ್ತದೆ.

1. ಉತ್ಪಾದನಾ ಸಮಿತಿ
2. ಸೌಕರ್ಯಗಳ ಸಮಿತಿ
3. ಸಾಮಾಜಿಕ ನ್ಯಾಯ ಸಮಿತಿ

**1. ಉತ್ಪಾದನಾ ಸಮಿತಿ**

ಕೃಷಿ ಉತ್ಪಾದನೆ, ಪಶುಪಾಲನೆ, ಗುಡಿ ಕೈಗಾರಿಕೆಗಳು ಮತ್ತು ಬಡತನ ನಿವಾರಣಾ ಕಾರ್ಯಕ್ರಮಗಳಿಗೆ ಸಂಬಂಧಿಸಿದ ಕಾರ್ಯಗಳನ್ನು ನಿರ್ವಹಿಸಲು ಉತ್ಪಾದನಾ ಸಮಿತಿಯನ್ನು ರಚಿಸಲಾಗಿದೆ.

**2. ಸಾಮಾಜಿಕ ನ್ಯಾಯ ಸಮಿತಿ**

ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳು ಮತ್ತು ಹಿಂದುಳಿದ ವರ್ಗಗಳ ಶೈಕ್ಷಣಿಕ, ಆರ್ಥಿಕ, ಸಾಂಸ್ಕೃತಿಕ ಹಾಗೂ ಸಾಮಾಜಿಕ ಹಿತಕ್ಕಾಗಿ ಪ್ರೋತ್ಸಾಹ ನೀಡುವುದು. ಸಾಮಾಜಿಕ ಅನ್ಯಾಯ ಮತ್ತು ಯಾವುದೇ ರೀತಿಯ ಶೋಷಣೆಗೆ ಒಳಗಾಗಿರುವಂತಹ ಜಾತಿಗಳಿಗೆ ಮತ್ತು ವರ್ಗಗಳಿಗೆ ರಕ್ಷಣೆ ಕೊಡುವುದು. ಮಹಿಳೆ ಮತ್ತು ಮಕ್ಕಳ ಏಳಿಗೆಗೆ ಸಂಬಂಧಿಸಿದ ಕಾರ್ಯಗಳನ್ನು ನೆರವೇರಿಸಲು ಸಾಮಾಜಿಕ ನ್ಯಾಯ ಸಮಿತಿಯನ್ನು ರಚಿಸಲಾಗಿದೆ.

**3. ಸೌಕರ್ಯಗಳ ಸಮಿತಿ**

ಶಿಕ್ಷಣ, ಸಾರ್ವಜನಿಕ ಆರೋಗ್ಯ, ಕುಡಿಯುವ ನೀರು ಹಾಗೂ ಲೋಕೋಪಯೋಗಿ ಕಾಮಗಾರಿಗಳಿಗೆ ಸಂಬಂಧಿಸಿದ ಕಾರ್ಯಗಳನ್ನು ಮತ್ತು ಗ್ರಾಮ ಪಂಚಾಯತಿಯ ಇತರ ಕಾರ್ಯಗಳನ್ನು ನಿರ್ವಹಿಸಲು ಸೌಕರ್ಯಗಳ ಸಮಿತಿಯನ್ನು ರಚಿಸಲಾಗಿದೆ.

**ಇತರ ಸಮಿತಿಗಳು**

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮದ ಪ್ರಕರಣ 61(ಎ)ರಲ್ಲಿ ಗ್ರಾಮ ಪಂಚಾಯತಿಯ ಇತರ ಉದ್ದೇಶಗಳಿಗಾಗಿ ಅದು ನಿಗದಿಪಡಿಸಬಹುದಾದ ಸದಸ್ಯರನ್ನೊಳಗೊಂಡ

ಒಂದು ಅಥವಾ ಹೆಚ್ಚಿನ ಸಂಖ್ಯೆಯ ಸಮಿತಿಗಳನ್ನು ನೇಮಕ ಮಾಡಬಹುದು. ಆ ಉದ್ದೇಶಕ್ಕಾಗಿ ಅಗತ್ಯವಿರುವ ಅಧಿಕಾರ ಮತ್ತು ಕಾರ್ಯಗಳನ್ನು ವಹಿಸಲಾಗಿದೆ.[13]

## 1.2. ಅಧ್ಯಯನದ ಸಮಸ್ಯೀಕರಣ

ಪಂಚಾಯತ್‌ರಾಜ್ ಸಂಸ್ಥೆಗಳ ಪರಿಣಾಮಕಾರಿ ನಿರ್ವಹಣೆ ಹಾಗೂ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳ ಸರಿಯಾದ ಅನುಷ್ಠಾನದ ಉದ್ದೇಶದಿಂದ ಪಂಚಾಯತ್ ಸಂಸ್ಥೆಗಳ ಮೂರು ಸ್ತರಗಳಲ್ಲಿ ಸ್ಥಾಯಿಸಮಿತಿಗಳನ್ನು ರಚಿಸಲಾಗಿದೆ. ಈ ಸಮಿತಿಗಳಿಗೆ ಹೆಚ್ಚಿನ ಅಧಿಕಾರಗಳನ್ನು ಸಂವಿಧಾನದ 73ನೇ ತಿದ್ದುಪಡಿಯಲ್ಲಿ ತಿಳಿಸಲಾಗಿದೆ. ಗ್ರಾಮೀಣ ಜನರ ಮೂಲಭೂತ ಅಗತ್ಯಗಳನ್ನು ಪೂರೈಸುವಲ್ಲಿ ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಸ್ಥಾಯಿಸಮಿತಿಗಳನ್ನು ರಚಿಸುವ ಮೂಲಕ ಅಧಿಕಾರಗಳನ್ನು ಮತ್ತು ಕಾರ್ಯಗಳನ್ನು ತನ್ನ ಸದಸ್ಯರಲ್ಲಿ ಹಂಚುವ ಮೂಲಕ ಜವಾಬ್ದಾರಿಯನ್ನು ಹೆಚ್ಚಿಸಿದೆ. ತಾತ್ವಿಕವಾಗಿ ಸ್ಥಾಯಿಸಮಿತಿಗಳು ಸಾಕಷ್ಟು ಅಧಿಕಾರ ಮತ್ತು ಕಾರ್ಯಗಳನ್ನು ಪಡೆದುಕೊಂಡಿದ್ದು ಈ ಸಮಿತಿಗಳ ಸರಿಯಾದ ಕಾರ್ಯನಿರ್ಹಹಣೆಯಿಂದಾಗಿ ಪಂಚಾಯತ್ ಸಂಸ್ಥೆಗಳ ಗುಣಮಟ್ಟವನ್ನು ಪಾಲನೆ ಮಾಡುವಲ್ಲಿ ಇವುಗಳ ಪಾತ್ರ ಮಹತ್ವದ್ದಾಗಿದೆ. ಇಂದು ವಾಸ್ತವವಾಗಿ ಸ್ಥಾಯಿಸಮಿತಿಗಳು ನಾಮಮಾತ್ರವಾಗಿ ರಚನೆಯಾಗಿರುವುದರಿಂದ ಇವುಗಳು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುವಲ್ಲಿ ಇರುವ ನಿಜವಾದ ಸಮಸ್ಯೆಗಳೇನು? ಈ ಸಮಿತಿಗಳಿಗಿರುವ ಅಧಿಕಾರ ಮತ್ತು ಜವಾಬ್ದಾರಿಗಳಲ್ಲಿ ಏನಾದರೂ ಬದಲಾವಣೆ ಮಾಡಬಹುದೆ? ಇಂದು ಮುಖ್ಯವಾಗಿ ತಳಮಟ್ಟದಲ್ಲಿ ಗ್ರಾಮೀಣ ಜನರು ಎದುರಿಸುವ ಸಮಸ್ಯೆಗಳಾದ ಮೂಲಭೂತ ಅವಶ್ಯಕತೆಗಳನ್ನು ನಿರ್ವಹಿಸುವಲ್ಲಿ ಸ್ಥಾಯಿಸಮಿತಿಗಳ ಜವಾಬ್ದಾರಿ ಮತ್ತು ನಿರ್ವಹಣೆ ಹೇಗಿದೆ? ಜಿಲ್ಲಾ ಪಂಚಾಯತಿ ಮತ್ತು ತಾಲ್ಲೂಕ್ ಪಂಚಾಯತಿ ಸ್ಥಾಯಿಸಮಿತಿಗಳು ಉತ್ತಮವಾಗಿ ಕಾರ್ಯನಿರ್ವಹಿಸುವುದಕ್ಕೆ ಅವುಗಳಿಗೆ ನೀಡಿರುವ ಅಧಿಕಾರಗಳನ್ನು ತಳಮಟ್ಟದ ಗ್ರಾಮ ಪಂಚಾಯತಿಗಳಿಗೆ ಒದಗಿಸಲಾಗಿರುವ ಅಧಿಕಾರಗಳೊಂದಿಗೆ ತೌಲನಿಕವಾಗಿ ಅಧ್ಯಯನ ಮಾಡುವ ಮೂಲಕ ಯಾವ ಹಂತದಲ್ಲಿ ಯಾವ್ಯಾವ ಕಾರಣಗಳಿಂದ ಸಮಿತಿಗಳು ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತವೆ. ಅಥವಾ ಕಾರ್ಯಭಾರವಿದ್ದರೂ ಸಹ ಏಕೆ ಅನುಷ್ಠಾನ ಯೋಗ್ಯವಾಗಿಲ್ಲ ಎಂಬುದರ ಆಯಾಮಗಳನ್ನು ಪರಿಶೀಲಿಸಬೇಕಾದ ಅಗತ್ಯವಿದೆ. ಹಾಗಾಗಿ ತಳಸ್ತರದ ಸಂಸ್ಥೆಯಾದ ಗ್ರಾಮ ಮಟ್ಟದಲ್ಲಿ ಮೊದಲು ಈ ಸಮಿತಿಗಳು ಸರಿಯಾಗಿ ಕಾರ್ಯನಿರ್ವಹಿಸಬೇಕು. ಆದರೆ ಸಾಕಷ್ಟು ಅಧ್ಯಯನಗಳು ತಳಮಟ್ಟದಲ್ಲಿ ಸ್ಥಾಯಿಸಮಿತಿಗಳು ಉತ್ತಮವಾಗಿ ಕಾರ್ಯ ನಿರ್ವಹಿಸುತ್ತಿಲ್ಲ ಎಂಬುದನ್ನು ತಿಳಿಸಿವೆ. ಹಾಗಾಗಿ ಗ್ರಾಮ ಪಂಚಾಯತಿಗಳು ಇಂದು ಅಧಿಕಾರಗಳನ್ನು ಸ್ಥಾಯಿಸಮಿತಿಗಳಿಗೆ ಹಂಚಿದ್ದರೂ ಇವುಗಳ ಕಾರ್ಯಕ್ಷಮತೆಯಲ್ಲಿ ಸುಧಾರಿಸಿಲ್ಲ. ಈ ಹಿನ್ನೆಲೆಯಲ್ಲಿ

ಗ್ರಾಮೀಣ ಜನರ ಮೂಲಭೂತ ಅವಶ್ಯಕತೆಗಳನ್ನು ಪೂರೈಸುವಲ್ಲಿ ಕೃಷಿ, ಕೈಗಾರಿಕಾ, ಶಿಕ್ಷಣಕ್ಕೆ ಒತ್ತು ನೀಡುವ ಮತ್ತು ಸಾಮಾಜಿಕ ಅನ್ಯಾಯಗಳನ್ನು ತಡೆಗಟ್ಟುವಲ್ಲಿ ಸ್ಥಾಯಿಸಮಿತಿಗಳನ್ನು ತಳಮಟ್ಟದಲ್ಲಿ ಎಷ್ಟರಮಟ್ಟಿಗೆ ಸಬಲೀಕರಣ ಮಾಡಬಹುದು ಎಂಬುದರ ಕುರಿತು ಅಧ್ಯಯನ ಬೆಳಕು ಚೆಲ್ಲುತ್ತದೆ.

## 1.3. ಅಧ್ಯಯನದ ಉದ್ದೇಶಗಳು

ಅಧ್ಯಯನದ ಗ್ರಹಿಕೆಗಳ ದೃಷ್ಟಿಯನ್ನು ಇಟ್ಟುಕೊಂಡು ಸ್ಥಾಯಿಸಮಿತಿಗಳ ಕಾರ್ಯಕ್ಷಮತೆಯನ್ನು ಗುರುತಿಸುವ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಉದ್ದೇಶಗಳನ್ನು ಒಳಗೊಂಡಿದೆ. ಸಂವಿಧಾನದ 73ನೇ ತಿದ್ದುಪಡಿಯಿಂದ ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆ 1993ರಲ್ಲಿ ಅಸ್ತಿತ್ವಕ್ಕೆ ಬಂದ ಮೇಲೆ ಸಾಕಷ್ಟು ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೆ ತಂದಿದೆ. ಈ ಅಭಿವೃದ್ಧಿ ಕಾರ್ಯಕ್ರಮಗಳು ಮತ್ತು ಮಾನವನ ಮೂಲಭೂತ ಅಗತ್ಯಗಳನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವ ದೃಷ್ಟಿಯಿಂದ ಸ್ಥಾಯಿಸಮಿತಿಗಳನ್ನು ಪಂಚಾಯತ್‌ರಾಜ್ ಸಂಸ್ಥೆಗಳ ಮೂರು ಸ್ತರಗಳಲ್ಲಿ ಜಿಲ್ಲಾ ಪಂಚಾಯತ್, ತಾಲ್ಲೂಕು ಪಂಚಾಯತ್ ಮತ್ತು ಗ್ರಾಮ ಪಂಚಾಯತಿಗಳ ಮಟ್ಟದಲ್ಲಿ ರಚಿಸಲಾಗಿದೆ. ಈ ಹಿನ್ನೆಲೆಯಲ್ಲಿ ಸ್ಥಾಯಿಸಮಿತಿಗಳ ರಚನೆ, ಉದ್ದೇಶ ಅವುಗಳು ಹೊಂದಿರುವ ಅಧಿಕಾರ ಮತ್ತು ಕಾರ್ಯಗಳನ್ನು ಅಧ್ಯಯನ ಮಾಡುವುದು ಸಮಂಜಸವಾಗಿದೆ. ಜನಪ್ರತಿನಿಧಿಗಳಲ್ಲಿ ಸ್ಥಾಯಿಸಮಿತಿಗಳ ಅಧಿಕಾರ ಮತ್ತು ಕಾರ್ಯಗಳ ಬಗ್ಗೆ ಹೊಂದಿರುವ ಜ್ಞಾನ ಮತ್ತು ಜಾಗೃತಿಯನ್ನು ಅಧ್ಯಯನ ಮಾಡುವುದು. ಸ್ಥಾಯಿಸಮಿತಿಗಳ ರಚನೆ, ಅಧಿಕಾರ ಮತ್ತು ಕಾರ್ಯಗಳನ್ನು ಅಧ್ಯಯನ ಮಾಡುವುದು. ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ಸ್ಥಾಯಿಸಮಿತಿಗಳು ಎಷ್ಟರಮಟ್ಟಿಗೆ ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುತ್ತಿವೆ ಎಂಬುದನ್ನು ತಿಳಿಯುವುದು. ಸ್ಥಾಯಿಸಮಿತಿಗಳ ಜನಪ್ರತಿನಿಧಿಗಳ ಮತ್ತು ಅಧಿಕಾರಿಗಳ ಪಾತ್ರದ ಕಾರ್ಯನಿರ್ವಹಣೆಯನ್ನು ಗುರುತಿಸುವುದು. ಗ್ರಾಮೀಣ ಜನರ ಸಾಮಾಜಿಕ ನ್ಯಾಯ ಮತ್ತು ಆರ್ಥಿಕ ಜೀವನ ಮಟ್ಟವನ್ನು ಸುಧಾರಿಸುವಲ್ಲಿ ಸ್ಥಾಯಿಸಮಿತಿಗಳು ನಿರ್ವಹಿಸುತ್ತಿರುವ ಪಾತ್ರ, ಶಿಕ್ಷಣ, ಆರೋಗ್ಯ, ಕೃಷಿ ವಲಯಗಳಲ್ಲಿ ಸ್ಥಾಯಿಸಮಿತಿಗಳು ಸಾಧಿಸಿರುವ ಪ್ರಗತಿಯನ್ನು ಗುರುತಿಸುವುದು ಅಪೇಕ್ಷಣೀಯವಾಗಿದೆ. ಸ್ಥಾಯಿಸಮಿತಿಗಳ ಬಗ್ಗೆ ಪಂಚಾಯತಿ ಸದಸ್ಯರು ಮತ್ತು ಗ್ರಾಮೀಣ ಜನರು ಹೊಂದಿರುವ ಅಭಿಪ್ರಾಯವನ್ನು ಸಂಗ್ರಹಿಸುವುದು, ಪಂಚಾಯತ್‌ರಾಜ್ ಸಂಸ್ಥೆಗಳು ನಡೆಸುವ ಸಾಮಾನ್ಯ ಸಭೆಯಲ್ಲಿ ದೈನಂದಿನ ಎಲ್ಲಾ ಆಡಳಿತ ಚಟುವಟಿಕೆಗಳನ್ನು ಚರ್ಚಿಸಿ ನೀತಿ ನಿರೂಪಣೆಗಳನ್ನು ತ್ವರಿತವಾಗಿ ರೂಪಿಸಿ ನಿರ್ಣಯಗಳನ್ನು ಕೈಗೊಳಲು ಅಗತ್ಯವಾದ ಕಾಲಾವಕಾಶ ಸಾಮಾನ್ಯವಾಗಿ ಇರುವುದಿಲ್ಲ. ಈ ಕಾರಣದಿಂದಾಗಿ ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಸ್ಥಾಯಿ ಸಮಿತಿಗಳನ್ನು ರಚಿಸಲು ಸೂಕ್ತ ಅಧಿಕಾರ ಮತ್ತು ಕಾರ್ಯಗಳನ್ನು ಇವುಗಳಿಗೆ

ವಹಿಸಿಕೊಡಲಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಸ್ಥಾಯಿಸಮಿತಿಗಳ ರಚನೆ, ಉದ್ದೇಶ, ಕಾರ್ಯಕ್ಷಮತೆ ಹಾಗೂ ಮೂರು ಹಂತದ ಸಂಸ್ಥೆಗಳಲ್ಲಿ ಸ್ಥಾಯಿಸಮಿತಿಗಳನ್ನು ತುಲಾನಾತ್ಮಕವಾಗಿ ಅಧ್ಯಯನ ಮಾಡುವುದು ಮುಖ್ಯ ಉದ್ದೇಶವಾಗಿದೆ. ಸ್ಥಾಯಿಸಮಿತಿಗಳು ಹೊಂದಿರುವ ಸಮಸ್ಯೆಗಳು ಹಾಗೂ ಅವುಗಳು ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸಲು ಅಗತ್ಯವಾದ ಮಾರ್ಗೋಪಾಯಗಳನ್ನು ಗುರುತಿಸುವ ಹಿನ್ನಲೆಯಲ್ಲಿ ಅಧ್ಯಯನದ ಮುಖ್ಯ ಉದ್ದೇಶಗಳನ್ನು ಇಟ್ಟುಕೊಳ್ಳಲಾಗಿದೆ.

1. ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಸ್ಥಾಯಿಸಮಿತಿಗಳ ಬೆಳವಣಿಗೆ, ರಚನೆ, ಮತ್ತು ಮಹತ್ವವನ್ನು ಗುರುತಿಸುವುದು.
2. ಮೂರು ಹಂತದ ಪಂಚಾಯತ್ ವ್ಯವಸ್ಥೆಯ ಸ್ಥಾಯಿಸಮಿತಿಗಳ ಕಾರ್ಯಕ್ಷಮತೆಯನ್ನು ಅಧ್ಯಯನ ಮಾಡುವುದು.
3. ಸ್ಥಾಯಿಸಮಿತಿಗಳ ಕಾರ್ಯಕ್ಷಮತೆ ಕುರಿತು ಜನಪ್ರತಿನಿಧಿಗಳ, ಅಧಿಕಾರಿಗಳ ಹಾಗೂ ಜನಸಾಮನ್ಯರ ಅರಿವು, ಭಾಗವಹಿಸುವಿಕೆಯನ್ನು ಗುರುತಿಸುವುದು.
4. ಸ್ಥಾಯಿಸಮಿತಿಗಳ ಸಮರ್ಪಕ ಕಾರ್ಯನಿರ್ವಹಣೆಗೆ ತೊಡಕುಗಳನ್ನು ಗುರುತಿಸುವುದು ಮತ್ತು ಪರಿಹಾರೋಪಾಯಗಳನ್ನು ಸೂಚಿಸುವುದು.

## 1.4. ಅಧ್ಯಯನದ ಪ್ರಾಕ್‌ಕಲ್ಪನೆ

1. ಸ್ಥಾಯಿಸಮಿತಿಗಳು ನಿರೀಕ್ಷಿತ ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿಲ್ಲ.
2. ಸ್ಥಾಯಿಸಮಿತಿಗಳ ರಚನೆ ಕೇವಲ ಔಪಚಾರಿಕತೆಯಿಂದ ಕೂಡಿದೆ.
3. ಪಂಚಾಯತ್‌ರಾಜ್ ಪ್ರತಿನಿಧಿಗಳಿಗೆ, ಅಧಿಕಾರಿಗಳಿಗೆ ಮತ್ತು ಜನತೆಗೆ ಸ್ಥಾಯಿಸಮಿತಿಗಳ ಮಹತ್ವದ ಬಗೆಗೆ ಹೆಚ್ಚು ಅರಿವು ಇಲ್ಲದಿರುವುದು.
4. ಗ್ರಾಮ ಪಂಚಾಯತಿ ವ್ಯವಸ್ಥೆಯ ಸ್ಥಾಯಿಸಮಿತಿಗಳಿಗಿಂತ ತಾಲ್ಲೂಕು ಮಟ್ಟದ ಮತ್ತು ಜಿಲ್ಲಾ ಮಟ್ಟದ ಸ್ಥಾಯಿಸಮಿತಿಗಳು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುತ್ತಿವೆ.
5. ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿಗಳು ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿಲ್ಲ.

## 1.5. ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನವು ಪ್ರಯೋಗಾತ್ಮಕ ಅಧ್ಯಯನವಾಗಿದ್ದು, ಈ ಆಧ್ಯಯನಕ್ಕೆ ಎರಡು ಮೂಲಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಸಂಶೋಧನೆಗೆ ಸಂಬಂಧಿಸಿದಂತೆ ಅಂಕಿ ಅಂಶಗಳನ್ನು ಮತ್ತು ಸಂಶೋಧನೆಗೆ ಸಂಬಂಧಿಸಿದ ಮಾಹಿತಿಯನ್ನು ಸಂಗ್ರಹಿಸಲು ವಿವಿಧ

ಸಂಶೋಧನಾ ತಂತ್ರಗಳನ್ನು ಬಳಸಿಕೊಳ್ಳಲಾಗಿದೆ. ಮತ್ತು ಸಂಶೋಧನಾ ವಿಷಯಕ್ಕೆ ಸಂಬಂಧಸಿದಂತೆ ಪ್ರಕಟಿತ ಮತ್ತು ಅಪ್ರಕಟಿತ ಪರಿಕರಗಳ ಅಧ್ಯಯನ ಮಾಡಲಾಗಿದೆ. ಸಂಶೋಧನೆಯ ಯಶಸ್ವಿಯ ದೃಷ್ಟಿಯಿಂದ ಅವಲೋಕನ, ಪ್ರಶ್ನಾವಳಿ, ಸರ್ಕಾರ ಹೊರಡಿಸಿರುವ ಕಾಯ್ದೆ ಕಾನೂನುಗಳನ್ನು ಅಭ್ಯಸಿಸಲಾಗಿದೆ. ಮತ್ತು ಪಂಚಾಯತ್ ಆಡಳಿತಕ್ಕೆ ಸಂಬಂಧಿಸಿ ಇಲಾಖಾ ಅಧಿಕಾರಿಗಳು ಮತ್ತು ಜನ ಸಾಮಾನ್ಯರುಗಳಿಂದ ಮಾಹಿತಿ ಸಂಗ್ರಹಣೆಗಾಗಿ ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ, ಹಿರಿಯೂರು ಮತ್ತು ಮೊಳಕಾಲ್ಮೂರು ತಾಲ್ಲೂಕುಗಳಿಂದ ಪೂರ್ವ ನಿರ್ಧಾರಿತ ಪ್ರಶ್ನಾವಳಿ ಹಾಗೂ ಸಂದರ್ಶನ ಅನುಸೂಚಿ ರಚಿಸಿ ಸಂಶೋಧನಾ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಪ್ರಸ್ತುತ ಸಂಶೋಧನೆಯ ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಅನುಷ್ಠಾನ ಪ್ರಮಾಣವನ್ನು ಅವಲೋಕಿಸಲು ಮತ್ತು ಸಂಶೋಧನೆಯ ಅಭಿವೃದ್ಧಿ ಪ್ರಮಾಣವನ್ನು ತಿಳಿಯಲು ಈ ಕೆಳಗಿನ ಆಧಾರದ ಮೇಲೆ ಚಿತ್ರದುರ್ಗ ಜಿಲ್ಲೆಯನ್ನು ಆಯ್ಕೆ ಮಾಡಿಕೊಂಡು ಸಂಶೋಧನೆಯನ್ನು ಕೈಗೊಳ್ಳಲಾಗಿದೆ.

1. ಕರ್ನಾಟಕ ರಾಜ್ಯದ ಸಮಗ್ರ ಮಾನವ ಅಭಿವೃದ್ಧಿ ಸೂಚ್ಯಂಕ–2010 ರ ಪ್ರಕಾರ ಚಿತ್ರದುರ್ಗ ಜಿಲ್ಲೆಯು ಕರ್ನಾಟಕದಲ್ಲಿ ಹಿಂದುಳಿದ ಜಿಲ್ಲೆಗಳಲ್ಲಿ ಒಂದು.
2. ಚಿತ್ರದುರ್ಗ ಜಿಲ್ಲೆಯು ಬಯಲುಸೀಮೆ ಪ್ರದೇಶವಾಗಿರುವುದರ ಜೊತೆಗೆ ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದ ಜಿಲ್ಲೆಯಾಗಿದೆ.
3. ಈ ಜಿಲ್ಲೆಯಲ್ಲಿ ಅತಿ ಹೆಚ್ಚು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನಸಂಖ್ಯೆ ಹೊಂದಿರುವುದು.
4. ಈ ಜಿಲ್ಲೆಯಲ್ಲಿ ಅಭಿವೃದ್ಧಿ ಹೊಂದಿದ ತಾಲ್ಲೂಕಾಗಿ ಚಿತ್ರದುರ್ಗ, ಅಭಿವೃದ್ಧಿ ಹೊಂದುತ್ತಿರುವ ತಾಲ್ಲೂಕಾಗಿ ಹಿರಿಯೂರು ಮತ್ತು ಅಭಿವೃದ್ಧಿ ಹೊಂದದ ತಾಲ್ಲೂಕಾಗಿ ಮೊಳಕಾಲ್ಮೂರು ತಾಲ್ಲೂಕುಗಳನ್ನು ಕಾಣಬಹುದಾಗಿದೆ. ಅಂದರೆ ಈ ಜಿಲ್ಲೆಯಲ್ಲಿ ಅಭಿವೃದ್ಧಿ ಹೊಂದಿದ, ಅಭಿವೃದ್ಧಿ ಹೊಂದಿತ್ತಿರುವ ಮತ್ತು ಅಭಿವೃದ್ಧಿ ಹೊಂದದ ಮೂರು ಅಂಶಗಳನ್ನು ಕಾಣಬಹುದಾಗಿದೆ.

ಈ ಮೇಲಿನ ಆಧಾರದ ಮೇಲೆ ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಸ್ಥಾಯಿಸಮಿತಿಗಳ ಮಹತ್ವ, ಕಾರ್ಯಕ್ಷಮತೆ, ಪಾತ್ರವನ್ನು ಗುರುತಿಸುವುದು ಹಾಗೂ ಈ ಮೂರು ಹಂತದ ಸಂಸ್ಥೆಗಳಲ್ಲಿ ಸ್ಥಾಯಿಸಮಿತಿಗಳನ್ನು ತುಲನಾತ್ಮಕವಾಗಿ ಅಧ್ಯಯನ ಮಾಡುವುದು ಇದರ ಮೂಲಕ ತಳಮಟ್ಟದ ಸ್ಥಾಯಿಸಮಿತಿಗಳ ಸರಿಯಾದ ಕಾರ್ಯಕ್ಷಮತೆ ಕೈಗೊಳ್ಳಲು ಅಗತ್ಯ ಪರಿಹಾರಗಳನ್ನು ಸೂಚಿಸುವುದು. ಪ್ರಸ್ತುತ ಸಂಶೋಧನೆಗೆ ಸಂಬಂಧಿಸಿದಂತೆ ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಸ್ಥಾಯಿಸಮಿತಿಗಳ ರಚನೆ ಎಷ್ಟರ ಮಟ್ಟಿಗೆ ಸಮರ್ಪಕವಾಗಿದೆ ಎಂಬ ಉದ್ದೇಶಗಳಿಗೆ ಅನುಗುಣವಾಗಿ

ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಸ್ಥಾಯಿಸಮಿತಿಗಳ ಪಾತ್ರ ಮತ್ತು ಅದರ ಕಾರ್ಯಾಚರಣೆಗೆ ಸಂಬಂಧಿಸಿದಂತೆ ಸಂಶೋಧನಾ ವಿಧಾನಗಳಿಗನುಗುಣವಾಗಿ ಮಾಹಿತಿಯನ್ನು ಸಂಗ್ರಹಿಸಲು ಕೆಲವೊಂದು ಮಾಹಿತಿ ಸಂಗ್ರಹಣಾ ವಿಧಾನಗಳನ್ನು ಅಳವಡಿಸಿಕೊಳ್ಳಲಾಗಿದೆ. ಅವುಗಳೆಂದರೆ,

1. ಪ್ರಾಥಮಿಕ ಮೂಲಗಳು

2. ಆನುಷಂಗಿಕ ಮೂಲಗಳು

**1. ಪ್ರಾಥಮಿಕ ಮೂಲಗಳು:** ಪ್ರಸ್ತುತ ಸಂಶೋಧನಾ ಉದ್ದೇಶದ ಹಿನ್ನೆಲೆಯಲ್ಲಿ ಪ್ರಾಥಮಿಕ ಮೂಲವು ಬಹು ಮುಖ್ಯವಾಗಿದೆ. ಅಧ್ಯಯನದಲ್ಲಿ ಪ್ರಾಥಮಿಕ ಮಾಹಿತಿಯನ್ನು ಪ್ರಶ್ನಾವಳಿ, ಅನುಸೂಚಿ ಮತ್ತು ಸಂದರ್ಶನಗಳಿಂದ ಪಂಚಾಯತ್‌ರಾಜ್ ಸಂಸ್ಥೆಗಳ ಮೂರು ಸ್ತರಗಳಾದ ಜಿಲ್ಲಾ ಪಂಚಾಯತಿ, ತಾಲ್ಲೂಕು ಪಂಚಾಯತಿ ಮತ್ತು ಗ್ರಾಮ ಪಂಚಾಯತಿಗಳ ಜನಪ್ರತಿನಿಧಿಗಳ ಸದಸ್ಯರಿಂದ, ಅಧಿಕಾರಿಗಳಿಂದ, ಗ್ರಾಮೀಣ ಜನತೆಯಿಂದ ಅಧ್ಯಯನಕ್ಕೆ ಅಗತ್ಯವಾದ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಈ ಮಾಹಿತಿಗಳನ್ನು ಪ್ರಶ್ನಾವಳಿಗಳ ಮೂಲಕ ಮತ್ತು ಅಂಕಿ ಅಂಶಗಳನ್ನು ಸಂದರ್ಶನ ಹಾಗೂ ವೀಕ್ಷಣಾ ವಿಧಾನದ ಮೂಲಕ ಮಾಹಿತಿ ಸಂಗ್ರಹಿಸಿ, ಅದನ್ನು ವಿಮರ್ಶಿಸಿ, ಸಂಸ್ಕರಿಸಿ ಪ್ರಸ್ತುತಪಡಿಸಲಾಗಿದೆ.

**2. ಅನುಷಂಗಿಕ ಮೂಲಗಳು:** ಸಂಶೋಧನಾ ಅಧ್ಯಯನದ ಮಾಹಿತಿಗಾಗಿ ಗ್ರಂಥಾಲಯದಲ್ಲಿ ಲಭ್ಯವಿರುವ ಪ್ರಕಟಿತ ಪಂಚಾಯತ್‌ರಾಜ್ ಸಂಸ್ಥೆಗಳ ಮೂರು ಸ್ತರಗಳಾದ ಜಿಲ್ಲಾ ಪಂಚಾಯತಿ, ತಾಲ್ಲೂಕು ಪಂಚಾಯತಿ ಮತ್ತು ಗ್ರಾಮ ಪಂಚಾಯತಿಗಳ ದಾಖಲೆಗಳು, ಗ್ರಂಥಗಳು, ಅಂಕಿ ಅಂಶಗಳು ಮತ್ತು ಇತರ ಮಾಹಿತಿಗಳು, ಸೆನ್ಸಸ್ ದಾಖಲೆಗಳು, ಸಂಶೋಧನಾ ವರದಿಗಳು, ಸರ್ಕಾರದ ಆದೇಶ, ಸುತ್ತೋಲೆಗಳು, ಲೇಖನಗಳು, ನಿಯತಕಾಲಿಕೆಗಳು ಸಮೀಕ್ಷಾ ವರದಿಗಳು, ಅಂತರ್ಜಾಲದ ಮಾಹಿತಿ ಮುಂತಾದ ಮೂಲಗಳಿಂದ ಮಾಹಿತಿಯನ್ನು ಸಂಗ್ರಹಿಸಿ ಅದರ ಆಧಾರದ ಮೇಲೆ ವೈಜ್ಞಾನಿಕ ದೃಷ್ಟಿಕೋನದ ಮೂಲಕ ಸಂಶೋಧನೆ ನಡೆಸಲಾಗಿದೆ. ಸಂಶೋಧನಾ ಅಧ್ಯಯನಕ್ಕೆ ಸಂಬಂಧಿಸಿದಂತೆ ನೆಡೆಯುವ ವಿಚಾರ ಗೋಷ್ಠಿಗಳಲ್ಲಿ ಭಾಗವಹಿಸಿ ಉಪಯುಕ್ತ ಮಾಹಿತಿಯನ್ನು ಸಂಗ್ರಹಿಸಿ ಸಂಶೋಧನೆಯನ್ನು ಕೈಗೊಳ್ಳಲಾಗಿದೆ.

## 1.6. ಅಧ್ಯಯನದ ಮಹತ್ವ

ಪ್ರಸ್ತುತ ಅಧ್ಯಯನವು ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಸ್ಥಾಯಿಸಮಿತಿಗಳ ಪಾತ್ರ ಮತ್ತು ಅವುಗಳ ಕಾರ್ಯಕ್ಷಮತೆಯನ್ನು ಗುರುತಿಸುವಲ್ಲಿ ಮಹತ್ವ ಪಡೆದುಕೊಂಡಿದೆ. ಗ್ರಾಮೀಣ ಜನರ ಮೂಲಭೂತ ಅಗತ್ಯಗಳನ್ನು ಪೂರೈಸುವಲ್ಲಿ ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಸ್ಥಾಯಿಸಮಿತಿಗಳನ್ನು

ರಚಿಸುವ ಮೂಲಕ ಅಧಿಕಾರಗಳನ್ನು ಮತ್ತು ಕಾರ್ಯಗಳನ್ನು ತನ್ನ ಸದಸ್ಯರಲ್ಲಿ ಹಂಚುವ ಮೂಲಕ ಜವಾಬ್ದಾರಿಯನ್ನು ಹೆಚ್ಚಿಸಿದೆ. ಹಾಗಾಗಿ ಈ ಅಧ್ಯಯನದಲ್ಲಿ ಪಂಚಾಯತ್‌ರಾಜ್ ಸಂಸ್ಥೆಗಳ ಮೂರು ಸ್ಥರಗಳಾದ ಜಿಲ್ಲಾ ಪಂಚಾಯತಿ, ತಾಲ್ಲೂಕು ಪಂಚಾಯತಿ ಮತ್ತು ಗ್ರಾಮ ಪಂಚಾಯತಿಗಳ ಮಟ್ಟದಲ್ಲಿರುವ ಸ್ಥಾಯಿಸಮಿತಿಗಳ ರಚನೆಯ ಉದ್ದೇಶವನ್ನು ತಿಳಿದುಕೊಳ್ಳುವಲ್ಲಿ ಪ್ರಾಮುಖ್ಯತೆ ಪಡೆದಿದೆ. ಪಂಚಾಯತ್‌ರಾಜ್ ವ್ಯವಸ್ಥೆಯ ಪರಿಸರ ಸ್ಥಾಯಿಸಮಿತಿಗಳ ಕಾರ್ಯನಿರ್ವಹಣೆಗೆ ಹೇಗೆ ಪೂರಕವಾಗಿದೆ ಎಂಬುದನ್ನು ಗುರುತಿಸುವಲ್ಲಿ ವಿಶ್ಲೇಷಣೆ ಮಾಡುವುದು ಅತ್ಯವಶ್ಯಕವಾಗಿದೆ.

ಸ್ಥಾಯಿಸಮಿತಿಗಳ ಅಧ್ಯಕ್ಷ, ಉಪಾಧ್ಯಕ್ಷ, ಮತ್ತು ಸದಸ್ಯರುಗಳಿಗೆ ನಿಯಮಾನುಸಾರವಾದ ನಿರ್ದಿಷ್ಟ ಪಡಿಸಿದ ಕಾರ್ಯನಿರ್ವಹಣೆಯನ್ನು ಗುರುತಿಸುವಲ್ಲಿ ಮಹತ್ವ ಪಡೆದಿದೆ. ಸ್ಥಾಯಿಸಮಿತಿಗಳ ಬಗ್ಗೆ ಪಂಚಾಯತಿ ಸದಸ್ಯರ ಮತ್ತು ಗ್ರಾಮೀಣ ಜನರ ಅಭಿಪ್ರಾಯಗಳನ್ನು ಸಂಗ್ರಹಿಸುವಲ್ಲಿ ಹಾಗೂ ಸ್ಥಾಯಿಸಮಿತಿಗಳ ಪರಿಣಾಮಕಾರಿ ಕಾರ್ಯಕ್ಷಮತೆಗಾಗಿ ಸಲಹೆ ಸೂಚನೆಗಳನ್ನು ಸೂಚಿಸುವಲ್ಲಿ ಮಹತ್ವ ಪಡೆದುಕೊಂಡಿದೆ.

## 1.7. ಅಧ್ಯಯನದ ಮಿತಿಗಳು

1. ಅಧ್ಯಯನವನ್ನು ಚಿತ್ರದುರ್ಗ ಜಿಲ್ಲೆಗೆ ಸೀಮಿತಗೊಳಿಸಲಾಗಿದೆ
2. ಪ್ರಸ್ತುತ ಅಧ್ಯಯನವನ್ನು ರಾಜ್ಯದಲ್ಲಿ 1993ರ ಪಂಚಾಯತ್‌ರಾಜ್ ಅಧಿನಿಯಮದ ಅನ್ವಯ ಜಾರಿಗೆ ಬಂದ ಗ್ರಾಮಪಂಚಾಯತ್,ತಾಲೂಕ್ ಪಂಚಾಯತ್ ಮತ್ತು ಜಿಲ್ಲಾಪಂಚಾಯತ್‌ಗಳಿಗೆ ಆಧ್ಯಯನವನ್ನು ಮಿತಿಗೊಳಿಸಲಾಗಿದೆ.
3. ಸ್ಥಾಯಿಸಮಿತಿಗಳ ಕಾರ್ಯಕ್ಷಮತೆ ಜಿತ್ರದುರ್ಗ ಜಿಲ್ಲೆಯ ಆಯ್ಕೆ ಮಾಡಿಕೊಂಡ ಗ್ರಾಮ ಪಂಚಾಯತ್, ತಾಲೂಕ್ ಪಂಚಾಯತ್ ಮತ್ತು ಜಿಲ್ಲಾಪಂಚಾಯತಗಳಿಗೆ ಆಧ್ಯಯನವನ್ನು ಮಿತಿಗೊಳಿಸಲಾಗಿದೆ.
4. ಪ್ರಸ್ತುತ ಆಧ್ಯಯನವನ್ನು ಪ್ರಯೋಗಾತ್ಮಕ(ಎಂಪಿರಿಕಲ್), ಅವಲೋಕನ ಮತ್ತು ವೈಜ್ಞಾನಿಕ ಅಂಕಿ-ಅಂಶಗಳಿಗೆ ಹೆಚ್ಚು ಮಹತ್ವ ನೀಡಲಾಗಿದೆ.
5. 2004ರಿಂದ 2009ರವರೆಗೆ ಗ್ರಾಮಪಂಚಾಯತ್,ತಾಲೂಕ್ ಪಂಚಾಯತ್ ಮತ್ತು ಜಿಲ್ಲಾ ಪಂಚಾಯತ್ ಅವಧಿಗೆ ಆಧ್ಯಯನವನ್ನು ಸೀಮಿತಿಗೊಳಿಸಲಾಗಿದೆ.
6. ಚಿತ್ರದುರ್ಗ ಜಿಲ್ಲಾಪಂಚಾಯತಿ, ಚಿತ್ರದುರ್ಗ,ಹಿರಿಯೂರು ಮತ್ತು ಮೊಳಕಾಲ್ಮೂರು ತಾಲೂಕು ಪಂಚಾಯಿತಿಗಳಿಗೆ ಹಾಗೂ ಆಯ್ಕೆ ಮಾಡಿಕೊಂಡ ಆರು ಗ್ರಾಮಪಂಚಾಯಿತಿಗಳಿಗೆ

ಅಧ್ಯಯನವನ್ನು ಮಿತಿಗೊಳಿಸಲಾಗಿದೆ. ಪ್ರತಿ ಗ್ರಾಮಪಂಚಾಯಿತಿಯಿಂದ 50ಜನ ಗ್ರಾಮಸ್ಥರನ್ನು ಅಂದರೆ ಒಟ್ಟು ಆರು ಗ್ರಾಮಪಂಚಾಯಿತಿಗಳಿಂದ 300 ಗ್ರಾಮಸ್ಥರನ್ನು, ಜಿಲ್ಲಾಪಂಚಾಯಿತಿ 32 ಸದಸ್ಯರನ್ನು ತಾಲೂಕು ಪಂಚಾಯಿತಿಗಳಿಂದ(ಚಿತ್ರದುರ್ಗ–27, ಹಿರಿಯೂರು–15 ಮತ್ತು ಮೊಳಕಾಲ್ಮೂರು–12) ಒಟ್ಟು–54 ಸದಸ್ಯರನ್ನು ಮತ್ತು ಆರು ಗ್ರಾಮಪಂಚಾಯಿತಿಗಳಾದ (ಬಬ್ಬೂರು–15, ಗೌಡನಹಳ್ಳಿ–15, ಮದಕರಿಪುರ–15, ಮಠದಕುರುಬರಹಟ್ಟಿ–20, ರಯಪುರ–16 ಹಾಗೂ ಹಾನಗಲ್–16) ಒಟ್ಟು–97 ಸದಸ್ಯರನ್ನು ಹಾಗೂ 37 ಜನ ಅಧಿಕಾರಿವರ್ಗವನ್ನು ವಿಶೇಷವಾಗಿ ಮೂರು ಹಂತದ ಸ್ಥಾಯಿ ಸಮಿತಿಗಳ ಎಲ್ಲ ಸದಸ್ಯರನ್ನು ಒಳಗೊಂಡಂತೆ 520 ಮಂದಿಯನ್ನು ಸಂದರ್ಶನಕ್ಕೆ ಒಳಪಡಿಸಲಾಗಿದೆ.

## 1.8. ಸಾಹಿತ್ಯ ಸಮೀಕ್ಷೆ

**1. ರಾಹುಲ್ ಮುದ್ಗಲ್(1998)**ಅವರ ಲೋಕಲ್ ಸೆಲ್ಫ್ ಗವರ್ನಮೆಂಟ್ ಇನ್ ಇಂಡಿಯಾ ಗ್ರಂಥವು 13 ಅಧ್ಯಾಯಗಳನ್ನು ಒಳಗೊಂಡಿದ್ದು ಪಂಚಾಯತ್‌ರಾಜ್ ಸಂಸ್ಥೆಗಳ ಬಗ್ಗೆ ಸಮಗ್ರ ಮಾಹಿತಿಯನ್ನು ಒದಗಿಸುತ್ತದೆ. ಪುರಾತನ ಕಾಲದಲ್ಲಿ ಸ್ಥಳೀಯ ಆಡಳಿತ ವ್ಯವಸ್ಥೆ ಯಾವ ರೀತಿಯಲ್ಲಿತ್ತು ಹಾಗೂ ಮದ್ರಾಸ್ ಪ್ರಾಂತ್ಯದಲ್ಲಿ ಸ್ಥಳೀಯ ಆಡಳಿತ ವ್ಯವಸ್ಥೆ ಯಾವ ರೀತಿಯಲ್ಲಿ ನಡೆಯುತ್ತಿತ್ತು ಎಂಬುದನ್ನು ವಿಮರ್ಶಾತ್ಮಕವಾಗಿ ಚರ್ಚಿಸಿದ್ದಾರೆ. ಮತ್ತು ಪ್ರಾಚೀನ ಕಾಲದಲ್ಲಿ ಸ್ಥಾಯಿ ಸಮಿತಿಗಳು ಇದ್ದ ಬಗ್ಗೆ ತಿಳಿಸಲಾಗಿದೆ.[14]

**2. ಉಮಾಪತಿ.ಎಂ.(1985)**ಅವರ ಲೋಕಲ್ ಸೆಲ್ಫ್ ಗೌರ್‍ನಮೆಂಟ್ ಇನ್ ಕರ್ನಾಟಕ ಗ್ರಂಥದಲ್ಲಿ ಕರ್ನಾಟಕದಲ್ಲಿ ಪಂಚಾಯಿತಿಗಳು ಯಾವ ರೀತಿ ಬೆಳೆದು ಬಂದವು ಎಂಬುದನ್ನು ವಿವರಿಸಿದ್ದಾರೆ. ಮೈಸೂರು ಸರ್ಕಾರದಲ್ಲಿ 1862ರ ನಂತರ ಆಧುನಿಕ ಸ್ವಯಂ ಸರ್ಕಾರದ ವಿವರಣೆಯನ್ನು ಈ ಗ್ರಂಥವು ಒಳಗೊಂಡಿದೆ. ಆದರೆ ಇತ್ತೀಚಿನ ಪಂಚಾಯತಿ ವ್ಯವಸ್ಥೆಯ ಬಗ್ಗೆ ಈ ಗ್ರಂಥದಲ್ಲಿ ಮಾಹಿತಿ ಸಿಗುವುದಿಲ್ಲ. ಕರ್ನಾಟಕದಲ್ಲಿ ಪ್ರಾಚೀನ ಕಾಲದಲ್ಲಿ ಸ್ಥಾಯಿ ಸಮಿತಿಗಳು ಇದ್ದ ಬಗ್ಗೆ ಮಾಹಿತಿ ಒದಗಿಸಲಾಗಿದೆ.[15]

**3. ಧರಮ ಪಾಲ್(1972)**ಅವರ ದಿ ಮದ್ರಾಸ್ ಪಂಚಾಯತ್ ಸಿಸ್ಟಮ್ ಗ್ರಂಥದಲ್ಲಿ ಪಂಚಾಯಿತ್‌ರಾಜ್ ಸಂಸ್ಥೆಗಳ ಐತಿಹಾಸಿಕ ಬೆಳವಣಿಗೆಯನ್ನು ವಿವರಿಸಿದ್ದಾರೆ. ಒಂದು ಗ್ರಾಮ ಪಂಚಾಯತಿಯನ್ನು ಆಯ್ದುಕೊಂಡು ಅಧ್ಯಯನ ಮಾಡಿ ಗ್ರಾಮ ಪಂಚಾಯತಿಯ ಕಾರ್ಯಗಳು, ಸಾಧನೆಗಳು, ಲೋಪದೋಷಗಳು ಹಾಗೂ ಅವುಗಳ ನಿವಾರಣೋಪಾಯಗಳ ಬಗ್ಗೆ ವಿವರಿಸಿದ್ದಾರೆ. ಮತ್ತು ಗ್ರಾಮ ಪಂಚಾಯತಿ ಸ್ಥಾಯಿಸಮಿತಿಗಳ ಬೆಳವಣಿಗೆಯ ಬಗ್ಗೆ ವಿವರಿಸಿದ್ದಾರೆ.[16]

**4. ಮ್ಯಾಥ್ಯೂ ಜಾರ್ಜ್(1996)**ಅವರ ಪಂಚಾಯತ್‌ರಾಜ್ ಇನ್ ಕರ್ನಾಟಕ ಗ್ರಂಥದಲ್ಲಿ ಅಧಿಕಾರ ವಿಕೇಂದ್ರೀಕರಣವು ಭಾರತದ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಹೇಗೆ ನಡೆದು ಬಂದಿದೆ ಮತ್ತು ಕರ್ನಾಟಕದಲ್ಲಿ ಯಾವ ರೀತಿ ಪರಿಣಾಮ ಬೀರಿದೆ ಎಂಬುದನ್ನು ವಿಮರ್ಶಾತ್ಮಕವಾಗಿ ಚರ್ಚಿಸಿದ್ದಾರೆ.[17]

**5. ಮಹೇಶ್ವರಿ (1996)**ಅವರ ಸ್ಟಡೀಸ್ ಇನ್ ಪಂಚಾಯತ್ ರಾಜ್ ಮೆಟ್ರೋಪಾಲಿಟನ್ ಗ್ರಂಥದಲ್ಲಿ ನೇಪಾಳ ಮತ್ತು ಪಾಕಿಸ್ತಾನದ ಸ್ಥಳೀಯ ಸರ್ಕಾರಗಳ ಬಗ್ಗೆ ವಿವರಣೆ ನೀಡಿದ್ದಾರೆ. ಮತ್ತು ರಾಜಸ್ಥಾನದ ಪಂಚಾಯತ್‌ರಾಜ್ ವ್ಯವಸ್ಥೆಯ ವಿವಿಧ ಹಂತಗಳ ಬಗ್ಗೆ ವಿಶ್ಲೇಷಣೆ ಮಾಡಿದ್ದಾರೆ.[18]

**6. ಮೀನಾಕ್ಷಿ ಸುಂದರಂ(1994)**ಅವರ ಸೆಂಟ್ರಲೈಜೇಶನ್ ಇನ್ ಡೆವಲಪಿಂಗ್ ಕಂಟ್ರೀಸ್ ಗ್ರಂಥದಲ್ಲಿ ಭಾರತದ ಪಂಚಾಯತ್‌ರಾಜ್ ಸಂಸ್ಥೆಗಳ ರಚನೆ ಮತ್ತು ಕಾರ್ಯಗಳ ಬಗ್ಗೆ ಚರ್ಚಿಸಿದ್ದಾರೆ. ಮಹಾರಾಷ್ಟ್ರ, ಗುಜರಾತ್ ಮತ್ತು ಪಶ್ಚಿಮ ಬಂಗಾಳದ ರಾಜ್ಯದ ಪಂಚಾಯತ್‌ರಾಜ್ ವ್ಯವಸ್ಥೆಯ ಬಗ್ಗೆಯೂ ಚರ್ಚಿಸಿದ್ದಾರೆ. ನೈಜೇರಿಯಾ ಮತ್ತು ಚೀನಾ ದೇಶಗಳ ಪಂಚಾಯತ್ ಸಂಸ್ಥೆಗಳ ರಚನೆ ಮತ್ತು ಕಾರ್ಯಗಳನ್ನು ಸಂಕ್ಷಿಪ್ತವಾಗಿ ತಿಳಿಸಿದ್ದಾರೆ.18 ಹಾಗೆಯೇ ಪಂಚಾಯತ್‌ರಾಜ್ ವ್ಯವಸ್ಥೆ ಪ್ರಸ್ತುತವಾಗಿ ಎದುರಿಸುತ್ತಿರುವ ಸಮಸ್ಯೆಗಳೇನು ಎನ್ನುವುದರ ಬಗ್ಗೆ ಚರ್ಚಿಸಿರುವುದು ಕಂಡು ಬರುತ್ತದೆ.[19]

**7. ಸಿಂಗ್.ಡಿ.ಆರ್(1990)**ಅವರ ಪಂಚಾಯತ್‌ರಾಜ್ ರೂರಲ್ ಆರ್ಗನೈಜೇಶನ್ ಗ್ರಂಥದಲ್ಲಿ ಉತ್ತರ ಪ್ರದೇಶದಲ್ಲಿರುವ ಪಂಚಾಯತ್‌ರಾಜ್ ವ್ಯವಸ್ಥೆಯ ಬಗ್ಗೆ ಅಲ್ಲಿನ ಸದಸ್ಯರ ರಾಜಕೀಯ, ಸಾಮಾಜಿಕ, ಆರ್ಥಿಕ ಹಿನ್ನೆಲೆಯನ್ನು ಚರ್ಚಿಸುತ್ತ ಅವರ ವಯಸ್ಸು, ಕುಟುಂಬದ ಹಿನ್ನೆಲೆ, ಜಾತಿ ರಾಜಕೀಯ, ಕ್ಷೇತ್ರದಲ್ಲಿ ಅವರ ಭಾಗವಹಿಸುವಿಕೆಯ ಪ್ರಾಮುಖ್ಯತೆ, ಗ್ರಾಮೀಣ ನಾಯಕತ್ವದ ಪಾತ್ರ ಮುಂತಾದ ವಿಷಯಗಳನ್ನು ಕುರಿತು ವಿಶ್ಲೇಷಿಸಿದ್ದಾರೆ.[20]

**8. ಮಜುಂದಾರ್ ಎ.ಕೆ. ಮತ್ತು ನ್ವಾರೆ ಸಿಂಗ್(1997)**ಅವರ ಹಿಸ್ಟಾರಿಕಲ್ ಅಂಡ್ ಕಾನ್ಸೆಪ್ಟ್ ವೆಲ್ ಡೆವಲಪ್‌ಮೆಂಟ್ ಆಫ್ ಪಂಚಾಯತ್‌ರಾಜ್ ಗ್ರಂಥದಲ್ಲಿ ಸ್ಥಳೀಯ ಸಂಸ್ಥೆಗಳ ಬೆಳವಣಿಗೆಯನ್ನು ವಿಮರ್ಶಾತ್ಮಕವಾಗಿ ವಿವರಿಸಿದ್ದಾರೆ. ಹಲವಾರು ಸಮಿತಿಗಳು ನೀಡಿದ ಶಿಫಾರಸ್ಸು ಗಳನ್ನು ವಿಶ್ಲೇಷಿಸಿದ್ದಾರೆ. ಸ್ವಾತಂತ್ರ್ಯ ಪೂರ್ವದಲ್ಲಿ ಭಾರತದ ಹಳ್ಳಿಗಳ ಸ್ಥಳೀಯ ಸರ್ಕಾರಗಳ ಬೆಳವಣಿಗೆ ಮತ್ತು ಹಳ್ಳಿಗಳಲ್ಲಿರುವ ಸಮಿತಿಗಳ ಬಗ್ಗೆ ಹಾಗೂ ಈ ಸಮಿತಿಗೆ ಸದಸ್ಯರಾಗಲು ಇರುವ ಅರ್ಹತೆ ಮುಂತಾದ ವಿಚಾರಗಳನ್ನು ಚರ್ಚಿಸಿದ್ದಾರೆ.[21]

**9. ಎಂ. ಚಂದ್ರ ಪೂಜಾರಿ(2011)**ಅವರ ಕರ್ನಾಟಕ ಪಂಚಾಯತ್‌ರಾಜ್ ಸಮಸ್ಯೆಗಳು ಮತ್ತು ಪರಿಹಾರಗಳು ಎಂಬ ಗ್ರಂಥದಲ್ಲಿ ಕರ್ನಾಟಕ ಪಂಚಾಯತ್‌ರಾಜ್ ವ್ಯವಸ್ಥೆಯ ಸ್ಥಾಯಿ ಸಮಿತಿಗಳು ಅದರಲ್ಲೂ ಗ್ರಾಮ ಪಂಚಾಯತಿ ಮಟ್ಟದ ಸ್ಥಾಯಿ ಸಮಿತಿಗಳು ಬಹುತೇಕವಾಗಿ ನಿಷ್ಕ್ರಿಯಯಾಗಿವೆ. ಇದಕ್ಕೆ ಕಾರಣಗಳು ಪಂಚಾಯತಿ ಸದಸ್ಯರಲ್ಲಿನ ಶಿಕ್ಷಣದ ಕೊರತೆ, ಸ್ಥಾಯಿಸಮಿತಿಗಳ ಅಧಿಕಾರಗಳ ಕಾರ್ಯ ಇವುಗಳ ಕುರಿತು ಜಾಗೃತಿ ಇಲ್ಲದೇ ಇರುವುದು ಮತ್ತು ಪ್ರತ್ಯೇಕವಾಗಿ ಸ್ಥಾಯಿಸಮಿತಿಗಳ ಚಟುಚಟಿಕೆಗಳು ನಿರಂತರ ಸಕ್ರಿಯವಾಗಿರುವಂತೆ ನೋಡಿಕೊಳ್ಳಲು ಪ್ರತ್ಯೇಕ ಸಿಬ್ಬಂದಿ ವ್ಯವಸ್ಥೆ ಇಲ್ಲದೇ ಇರುವುದಾಗಿದೆ. ಇವೆಲ್ಲಕಿಂತ ಮುಖ್ಯವಾಗಿ ಕೆಳಸ್ಥರದ ಪಂಚಾಯತ್ ವ್ಯವಸ್ಥೆಯ ಸ್ಥಾಯಿಸಮಿತಿಗಳಿಗೆ ಹಣಕಾಸಿನ ನೆರವು ಮತ್ತು ಹಣಕಾಸಿನ ಅಧಿಕಾರ ಇಲ್ಲದಿರುವುದಾಗಿದೆ. ಆದರೆ ಇದಕ್ಕೆ ವಿರುದ್ಧವಾಗಿ ಕೇರಳದ ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ಸ್ಥಾಯಿಸಮಿತಿಗಳು ಸಕ್ರಿಯವಾಗಿದ್ದು, ಇದಕ್ಕೆ ಕಾರಣ ಅಲ್ಲಿನ ಸ್ಥಾಯಿ ಸಮಿತಿಗಳಿಗೆ ಹಣಕಾಸಿನ ಅಧಿಕಾರಗಳನ್ನು ನೀಡುವುದರ ಜೊತೆಗೆ ಸ್ಥಾಯಿ ಸಮಿತಿಗಳ ಚಟುವಟಿಕೆಗಳನ್ನು ನಿರಂತರವಾಗಿ ಸಕ್ರಿಯವಾಗಿಡಲು ಪ್ರತ್ಯೇಕ ಸಿಬ್ಬಂದಿ ವ್ಯವಸ್ಥೆ ಕಲ್ಪಿಸಲಾಗಿದೆ. ಆದ್ದರಿಂದ ಕೇರಳ ಮಾದರಿಯಲ್ಲಿ ಕರ್ನಾಟಕ ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ಸ್ಥಾಯಿ ಸಮಿತಿಯ ವಿಷಯಗಳಲ್ಲಿ ಬದಲಾವಣೆ ತರುವುದು ಅವಶ್ಯಕ ಎಂದಿದ್ದಾರೆ.

**10. ಎಂ.ಚಂದ್ರ ಪೂಜಾರಿ(2001)**ಅವರ ದೇಶೀಯತೆ ನೆರಳಲ್ಲಿ ವಿಕೇಂದ್ರೀಕರಣ ಸಂಶೋಧನಾ ಗ್ರಂಥವು ಗ್ರಾಮೀಣ ಮಟ್ಟದಲ್ಲಿ ವಿಕೇಂದ್ರಿಕರಣವು ಎಷ್ಟರಮಟ್ಟಿಗೆ ಯಶಸ್ವಿಯಾಗಿದೆ ಎಂಬುದರ ಬಗ್ಗೆ ಚರ್ಚಿಸಿದ್ದಾರೆ. ವಿಕೇಂದ್ರೀಕರಣದ ಹೆಸರಿನಲ್ಲಿ ತೆರೆಮರೆಯ ರಾಜಕೀಯವು ಸ್ಥಳೀಯ ಮಟ್ಟದ ಸರ್ಕಾರಗಳಲ್ಲಿ ಯಾವ ರೀತಿ ನಡೆಯುತ್ತದೆ ಎಂಬುದನ್ನು ವಿಮರ್ಶಾತ್ಮಕವಾಗಿ ಚರ್ಚಿಸಿದ್ದಾರೆ.[22]

**11. ಶಶಿಧರ.ಕೆ(1996)**ಅವರ ಪೊಲಿಟಿಕಲ್ ಲೀಕೇಜ್ ಆಫ್ ರೂರಲ್ ಡೆವಲೆಪ್‌ಮೆಂಟ್ ಗ್ರಂಥದಲ್ಲಿ ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ಜನರು ಯಾವ ರೀತಿ ತಮ್ಮ ಪಾತ್ರವನ್ನು ನಿರ್ವಹಿಸುತ್ತಾರೆ ಎಂಬುದನ್ನು ವಿವರಿಸಿದ್ದಾರೆ. ಗ್ರಾಮೀಣ ಯೋಜನೆಗಳ ತಯಾರಿಯಲ್ಲಿ ಜನರು ಯಾವ ಪ್ರಮಾಣದಲ್ಲಿ ಭಾಗವಹಿಸುತ್ತಾರೆ. ಜನರ ಭಾಗವಹಿಸುವಿಕೆಯು ದೇಶದ ಅಭಿವೃದ್ಧಿಗೆ ಹೇಗೆ ಪೂರಕವಾಗಿದೆ ಎಂಬುದನ್ನು ಈ ಗ್ರಂಥದಲ್ಲಿ ತಿಳಿಸಿದ್ದಾರೆ.[23]

**12. ಎಸ್. ಎಲ್. ಗೋಯಲ್ ಶಾಲಿನಿ ರಜನೀಶ್(2003)**ರವರ ಪಂಚಾಯತ್‌ರಾಜ್ ಇನ್ ಇಂಡಿಯಾ ಥಿಯರಿ ಅಂಡ್ ಪ್ರಾಕ್ಟೀಸ್ ಗ್ರಂಥವು 16 ಅಧ್ಯಾಯಗಳನ್ನು ಒಳಗೊಂಡಿದೆ.

ಪಂಚಾಯತ್‌ರಾಜ್ ವ್ಯವಸ್ಥೆಯ ಬಗ್ಗೆ ಸಮಗ್ರ ಮಾಹಿತಿಯನ್ನು ಹೊಂದಿದೆ. ಮೊದಲನೆಯ ಅಧ್ಯಾಯದಲ್ಲಿ ವಿಕೇಂದ್ರಿಕರಣದ ಅರ್ಥ ಪಂಚಾಯತ್ ಸಂಸ್ಥೆಗಳ ಬೆಳವಣಿಗೆ, 73ನೇ ತಿದ್ದುಪಡಿಯ ಅಂಶಗಳು ಮುಂತಾದ ವಿಚಾರಗಳನ್ನು ಚರ್ಚಿಸಿದ್ದಾರೆ. 3ನೆಯ ಅಧ್ಯಾಯದಲ್ಲಿ ಗ್ರಾಮಸಭೆಯ ಕಾರ್ಯಗಳು, ಗ್ರಾಮಸಭೆಯಲ್ಲಿ ಮಹಿಳೆಯರ ಪಾತ್ರ ಮತ್ತು ಗ್ರಾಮ ಸಭೆಯ ವಿಫಲತೆಗೆ ಕಾರಣವಾದ ಅಂಶಗಳನ್ನು ಚರ್ಚಿಸಿದ್ದಾರೆ. ನಂತರದ ಅಧ್ಯಾಯದಲ್ಲಿ ಅನುಕ್ರಮವಾಗಿ ಗ್ರಾಮ ಪಂಚಾಯತಿ, ಜಿಲ್ಲಾ ಪಂಚಾಯತಿಯ ಕಾರ್ಯಗಳು ಮತ್ತು ಅಧ್ಯಕ್ಷರ ಕಾರ್ಯಗಳ ಬಗ್ಗೆ ವಿವರವಾಗಿ ಚರ್ಚಿಸಿದ್ದಾರೆ. ಹತ್ತು ಮತ್ತು ಹನ್ನೊಂದನೆಯ ಅಧ್ಯಾಯದಲ್ಲಿ ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಜನರ ಭಾಗವಹಿಸುವಿಕೆಯನ್ನು ಹೆಚ್ಚಿಸಲು ಅವರಲ್ಲಿ ರಾಜಕೀಯ ಜ್ಞಾನವನ್ನು ಯಾವ ರೀತಿ ಹೆಚ್ಚಿಸಬೇಕು ಎಂಬ ವಿಷಯದ ಬಗ್ಗೆ ಚರ್ಚಿಸಿದ್ದಾರೆ. ಹಾಗೂ ಸ್ಥಾಯಿಸಮಿತಿಗಳ ರಚನೆ ಮತ್ತು ಕಾರ್ಯಗಳ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.[24]

**13. ಮಹೇಶ್ವರಿ ಎಸ್.ಆರ್(1999)**ಅವರ ಲೋಕಲ್ ಗವರ್ನಮೆಂಟ್ ಇನ್ ಇಂಡಿಯಾ ಗ್ರಂಥದಲ್ಲಿ ಭಾರತದಲ್ಲಿ ಪಂಚಾಯತ್‌ರಾಜ್ ವ್ಯವಸ್ಥೆಯ ಬೆಳವಣಿಗೆಯನ್ನು ವಿವರಿಸಿದ್ದಾರೆ ಮತ್ತು ಗ್ರಾಮ ಪಂಚಾಯತಿಯ ಕಾರ್ಯನಿರ್ವಹಣೆಯಲ್ಲಿ ಗ್ರಾಮಸಭೆಗಳ ಮಹತ್ವವನ್ನು ವಿವರಿಸಿದ್ದಾರೆ.[25]

**14. ಎಸ್. ಎನ್.ಝಾ ಮತ್ತು ಪಿ.ಸಿ. ಮಾಥುರ್(1999)**ಅವರ ಡಿಸೆಂಟ್ರಲೈಜೇಶನ್ ಅಂಡ್ ಲೋಕಲ್ ಪಾಲಿಟಿಕ್ಸ್ ಸೀಜ್ ಗ್ರಂಥದಲ್ಲಿ ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ಆದ ಬದಲಾವಣೆಯನ್ನು ಆಂಧ್ರಪ್ರದೇಶ, ಕರ್ನಾಟಕ, ಪಶ್ಚಿಮಬಂಗಾಳ ಮತ್ತು ರಾಜಸ್ಥಾನ ರಾಜ್ಯಗಳೊಂದಿಗೆ ಹೋಲಿಕೆ ಮಾಡುವುದರ ಮೂಲಕ ವಿಶ್ಲೇಷಣಾತ್ಮಕವಾಗಿ ವಿವರಿಸಿ ವಿಕೇಂದ್ರೀಕರಣದ ಬಗ್ಗೆ ಚರ್ಚಿಸಿದ್ದಾರೆ.[26]

**15. ಬಸವರಾಜ್ ಹೆಚ್ (2005)**ಅವರ ಅಧಿಕಾರ ವಿಕೇಂದ್ರೀಕರಣ ಹಾಗೂ ಗ್ರಾಮ ಪಂಚಾಯತಿಯ ಸ್ವರೂಪ ಮತ್ತು ಅದರ ಕಾರ್ಯಾಚರಣೆ ಎಂಬ ಸಂಶೋಧನಾ ಗ್ರಂಥದಲ್ಲಿ ಅಧಿಕಾರ ವಿಕೇಂದ್ರೀಕರಣ ಪರಿಕಲ್ಪನೆಯಲ್ಲಿ ಪಂಚಾಯತ್‌ರಾಜ್ ಸಂಸ್ಥೆಗಳು ರಾಷ್ಟ್ರ ಮತ್ತು ರಾಜ್ಯಮಟ್ಟದಲ್ಲಿ ಪ್ರಾಚೀನ ಕಾಲದಿಂದ ಪ್ರಸ್ತುತದವರೆಗೆ ಬೆಳೆದು ಬಂದ ಬಗೆಯನ್ನು ವಿವರಿಸಿದ್ದಾರೆ. ಗ್ರಾಮ ಪಂಚಾಯಿತಿಗಳ ರಚನೆ ಅದರ ಕಾರ್ಯಗಳು ಸದಸ್ಯರ ಆಯ್ಕೆಯ ಬಗ್ಗೆ, ಸದಸ್ಯರ ರಾಜಕೀಯ ಭಾಗವಹಿಸುವಿಕೆಯ ಬಗ್ಗೆ ಚರ್ಚಿಸಿದ್ದಾರೆ. ಗ್ರಾಮೀಣಾಭಿವೃದ್ಧಿಯಲ್ಲಿ ಗ್ರಾಮ ಪಂಚಾಯತಿಗಳ ಪಾತ್ರ, ಮಹಿಳಾ ಸದಸ್ಯರುಗಳ ಆಯ್ಕೆಯ ಬಗ್ಗೆ, ಅವರ ರಾಜಕೀಯ ಭಾಗವಹಿಸುವಿಕೆ, ಪರೋಕ್ಷ ರಾಜಕಾರಣ ಹಾಗೂ ಗ್ರಾಮಸಭೆಯಲ್ಲಿ ಅಧಿಕಾರಿ, ಸದಸ್ಯರು ಮತ್ತು ಸಾಮಾನ್ಯ ಜನರ ಭಾಗವಹಿಸುವಿಕೆ, ಫಲಾನುಭವಿಗಳ ಆಯ್ಕೆ ಮುಂತಾದ ವಿಷಯಗಳ ಬಗ್ಗೆ ಚರ್ಚಿಸಿಸಿದ್ದಾರೆ. ಗ್ರಾಮ ಪಂಚಾಯತಿಯ ಕಾರ್ಯನಿರ್ವಹಣೆಗೆ ತೊಡಕಾಗಿರುವ ಅಂಶಗಳ

ಪರಿಹಾರಕ್ಕೆ ಕೆಲವು ಸಲಹೆಗಳನ್ನು ನೀಡಿದ್ದಾರೆ. ಸ್ಥಾಯಿಸಮಿತಿಗಳ ರಚನೆ ಹಾಗೂ ಕಾರ್ಯಗಳ ಬಗ್ಗೆ ಸಂಕ್ಷಿಪ್ತ ವಿವರಣೆ ನೀಡಿದ್ದಾರೆ.[27]

**16. ಕರ್ನಾಟಕ ಪಂಚಾಯತ್‌ರಾಜ್ ಕೈಪಿಡಿ(2006)** ಗ್ರಂಥವು ಕರ್ನಾಟಕ ಪಂಚಾಯತ ರಾಜ್ ಅಧಿನಿಯಮದ ಬಗ್ಗೆ ಸಮಗ್ರ ಮಾಹಿತಿ ಒದಗಿಸುತ್ತದೆ. ಕರ್ನಾಟಕ ಪಂಚಾಯತ್‌ರಾಜ್ ವ್ಯವಸ್ಥೆಯ ಮೂರು ಹಂತಗಳಾದ ಜಿಲ್ಲಾ ಪಂಚಾಯತಿ, ತಾಲ್ಲೂಕು ಪಂಚಾಯತಿ ಮತ್ತು ಗ್ರಾಮ ಪಂಚಾಯತಿಗಳ ಸ್ವರೂಪ ಮತ್ತು ಕಾರ್ಯಗಳ ಬಗ್ಗೆ ವಿವರಿಸಲಾಗಿದೆ. ಮತ್ತು ಸ್ಥಾಯಿಸಮಿತಿಗಳ ರಚನೆ ಮತ್ತು ಕಾರ್ಯಗಳ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.[28]

**17. ಅಶೋಕ ಚಕ್ರವರ್ತಿ (1991)**ಅವರು ತಮ್ಮ ಲೆಜಿಸ್ಲೆಟಿವ್ ಪಾಲಿಟಿಕ್ಸ್ ಇನ್ ಇಂಡಿಯಾ ಗ್ರಂಥದಲ್ಲಿ ಭಾರತದ ಕೇಂದ್ರ ಸರ್ಕಾರದ ಶಾಸಕಾಂಗದ ವ್ಯವಸ್ಥೆಯನ್ನು ವಿವರವಾಗಿ ಚರ್ಚಿಸಿದ್ದಾರೆ. ಶಾಸಕಾಂಗ ವಿವಿಧ ಸಮಿತಿಗಳ ಬಗ್ಗೆ ಅವುಗಳ ರಚನೆ ಮತ್ತು ಕಾರ್ಯಗಳ ಬಗ್ಗೆ ವಿವರವಾಗಿ ಚರ್ಚಿಸಿದ್ದಾರೆ.[29]

**18. ಅಶೋಕ ರಂಜನ್ (1986)**ಅವರ ಪಾರ್ಲಿಮೆಂಟರಿ ಪ್ರಿವಿಲೆಜೆಸ್ ಇನ್ ಇಂಡಿಯಾ ಗ್ರಂಥದಲ್ಲಿ ಭಾರತದ ಶಾಸಕಾಂಗದಲ್ಲಿ ಅದರ ಸದಸ್ಯರ ಅಧಿಕಾರ ಮತ್ತು ಕಾರ್ಯಗಳು ಮತ್ತು ಶಾಸಕಾಂಗದಲ್ಲಿರುವ ವಿವಿಧ ಸಮಿತಿಗಳ ಅಧಿಕಾರ ಹಾಗೂ ಕಾರ್ಯಗಳ ಬಗ್ಗೆ ಚರ್ಚಿಸಿದ್ದಾರೆ.[30]

**19. ಆರ್. ಶಂಕರಪ್ಪ (2002)**ಅವರ ಆಡಳಿತ ವಿಕೇಂದ್ರೀಕರಣದಲ್ಲಿ ಗ್ರಾಮಸಭೆಯ ಮಹತ್ವ, ಕರ್ನಾಟಕ ವಿಕಾಸ ಲೇಖನದಲ್ಲಿ ಕರ್ನಾಟಕ ಪಂಚಾಯತ್‌ರಾಜ್ ಸಂಸ್ಥೆಯ ಉಗಮ ಮತ್ತು ಬೆಳವಣಿಗೆಯನ್ನು ಕುರಿತು ಚರ್ಚಿಸಿದ್ದಾರೆ. ಪ್ರಾಚೀನ ಕರ್ನಾಟಕದಿಂದ ಪ್ರಾರಂಭಿಸಿದ ವಿವಿಧ ಸಮಿತಿ ನೀಡಿದ ಮುಖ್ಯ ಅಂಶಗಳನ್ನು 1983 ರಿಂದ 1993ರ ಕಾಯ್ದೆಯವರೆಗೆ ವಿವರಿಸಿದ್ದಾರೆ ಮತ್ತು ಸಮಿತಿಗಳ ಬೆಳವಣಿಗೆಯ ಬಗ್ಗೆ ಮಾಹಿತಿ ಒದಗಿಸಲಾಗಿದೆ.[31]

**20. ಎಸ್. ಎನ್. ನರಸಿಂಹಮೂರ್ತಿ (2003)**ಅವರ ಲೇಖನದಲ್ಲಿ ಗ್ರಾಮ ಪಂಚಾಯತಿಗಳ ಕಾರ್ಯಗಳು, ಗ್ರಾಮದ ಸಮಸ್ಯೆಗಳು, ಗ್ರಾಮೀಣಾಭಿವೃದ್ಧಿಗೆ ಗ್ರಾಮ ಪಂಚಾಯತಿಗಳ ಪಾತ್ರ ಮುಂತಾದ ವಿಷಯಗಳನ್ನು ಚರ್ಚಿಸಿದ್ದಾರೆ.[32]

**21. ಟಿ.ಆರ್.ಚಂದ್ರಶೇಖರ್(2004)**ಅವರ ವಿಕೇಂದ್ರೀಕರಣ ತತ್ವ ಆಚರಣೆ ಎಂಬ ಲೇಖನ ದಲ್ಲಿ ಪಂಚಾಯತ್‌ರಾಜ್ ಮೂಲಕ ಆಡಳಿತ ವಿಕೇಂದ್ರೀಕರಣಕ್ಕೆ ಪ್ರಾಮುಖ್ಯತೆ ನೀಡಲಾಗುತ್ತಿದೆ ಎಂದು ಅನಿಸಿದರೂ ಅದನ್ನು ಆಳವಾಗಿ ಅಧ್ಯಯನ ಮಾಡಿದಾಗ ಅಧಿಕಾರ ಹೆಚ್ಚು ಕೇಂದ್ರೀಕೃತವಾಗುತ್ತಿರುವುದನ್ನು ಕಾಣಬಹುದು ಎಂದು ತಮ್ಮ ಲೇಖನದಲ್ಲಿ ವಿವರಿಸಿದ್ದಾರೆ.[33]

**22. ಮಹಿಪಾಲ್(2002)**ಅವರ ಗ್ರಾಮೀಣ ಪುನರ್‌ನಿರ್ಮಾಣದಲ್ಲಿ ಪಂಚಾಯಿತಿಗಳ ಪಾತ್ರ ಎಂಬ ಲೇಖನದಲ್ಲಿ ಭಾರತ ಸಂವಿಧಾನದ 73ನೇ ತಿದ್ದುಪಡಿಗೆ ಕಾರಣವಾದ ಅಂಶಗಳನ್ನು ಕುರಿತು ಚರ್ಚಿಸಿದ್ದಾರೆ. ಗ್ರಾಮೀಣ ಪ್ರದೇಶಗಳ ಜನರ ಭಾಗವಹಿಸುವಿಕೆಯ ಮೂಲಕ ಗ್ರಾಮೀಣ ಪ್ರದೇಶಗಳ ಪುನರ್ ನಿರ್ಮಾಣದ ಪ್ರಯತ್ನ ಗ್ರಾಮೀಣ ಹಂತದಲ್ಲಿ ಯೋಜನೆಗಳು ಯಾವ ರೀತಿ ಕಾರ್ಯಗತಗೊಳ್ಳುತ್ತಿದೆ, ಅವುಗಳು ಗ್ರಾಮೀಣ ಪ್ರದೇಶದ ಪುನರ್ ನಿರ್ಮಾಣಕ್ಕೆ ಎಷ್ಟರ ಮಟ್ಟಿಗೆ ಸಹಾಯಕವಾಗಿವೆ ಎಂಬುದನ್ನು ಚರ್ಚಿಸಿದ್ದಾರೆ.[34]

**23. ಡಾ.ಕೆ.ಚಂದ್ರಶೇಖರ್** ಅವರ "ಗ್ರಾಮೀಣ ಅಭಿವೃದ್ಧಿಯಲ್ಲಿ ಗ್ರಾಮಸಭೆ & ಗ್ರಾಮ ಪಂಚಾಯಿತಿಗಳ ಪಾತ್ರ" (2003)ಎಂಬ ಗ್ರಂಥವು ಕುವೆಂಪು. ವಿ.ವಿ. ಅಬ್ದುಲ್ ನಜೀರ್‌ಸಾಬ್ ಅಧ್ಯಯನ ಪೀಠವು ಭದ್ರಾವತಿ ತಾಲ್ಲೂಕಿನ ಮಹಿಳಾ ಗ್ರಾಮ ಪಂಚಾಯತಿ ಸದಸ್ಯರಿಗೆ ಶಿವಮೊಗ್ಗದಲ್ಲಿ ತರಬೇತಿ ಕಾರ್ಯಾಗಾರವನ್ನು ಆಯೋಜಿಸಿದ ಮಹತ್ವ ವಿವರಗಳನ್ನು ನೀಡುತ್ತದೆ. ಈ ತರಬೇತಿ ಕಾರ್ಯಾಗಾರದಲ್ಲಿ ಮಹಿಳಾ ಸದಸ್ಯರಿಗೆ ಸಮಿತಿಗಳ ರಚನೆ ಅಧಿಕಾರ, ಕಾರ್ಯದ ಬಗ್ಗೆ ಮತ್ತು ಸ್ಥಾಯಿಸಮಿತಿಗಳಿಗೂ ಮತ್ತು ಗ್ರಾಮಪಂಚಾಯತಿ ನಡುವೆ ಇರುವ ಸಂಬಂಧದ ಅರಿವಿಲ್ಲದೇ ಇರುವುದು ಕಂಡು ಬಂದಿದೆ.[35]

**24. ಕರ್ನಾಟಕ ಜರ್ನಲ್ ಆಫ್ ಪಾಲಿಟಿಕ್ಸ್**. ಡಿಸೆಂಬರ್-2009 Vol-No-1 Page No 220–225ರಲ್ಲಿ ಪ್ರಕಟಗೊಂಡ ಈ ಜರ್ನಲ್‌ನ "ಕರ್ನಾಟಕ ಗ್ರಾಮ ಪಂಚಾಯತಿಗಳು ಗ್ರಾಮ ಸ್ವರಾಜ್ಯದೆಡೆಗೆ" ಎಂಬ ಲೇಖನದಲ್ಲಿ "ನೇರಿ ಕರ್ನೆಲಿಯೋ" ರವರು ಪಂಚಾಯತ್ ವ್ಯವಸ್ಥೆಗೆ ಕಾಡುವ ದೌರ್ಬಲ್ಯಗಳು ಎಂಬ ಅಂಶದಲ್ಲಿ ಅನೇಕ ಪಂಚಾಯಿತಿಗಳಲ್ಲಿ ಸಮಿತಿಗಳು ರಚನೆಯಾಗದೆ ಇರುವುದನ್ನು ಪ್ರಸ್ತಾಪಿಸಲಾಗಿದೆ.[36]

**25. ಕರ್ನಾಟಕ ಜರ್ನಲ್ ಆಫ್ ಪಾಲಿಟಿಕ್ಸ್**-ಜನವರಿ 2011ರಲ್ಲಿ–Vol No-12 ಪ್ರಕಟಗೊಂಡ "ಕರ್ನಾಟಕದ ಸ್ಥಳೀಯ ಸರ್ಕಾರಗಳಲ್ಲಿ ಜಿಲ್ಲಾ ಪಂಚಾಯತಿ ಸ್ಥಾಯಿಸಮಿತಿಗಳ ಪಾತ್ರ" ಎಂಬ ಲೇಖನದಲ್ಲಿ ಡಾ.ಎಂ.ಎಚ್.ಪ್ರಹ್ಲಾದಪ್ಪನವರು ಜಿಲ್ಲಾ ಪಂಚಾಯತಿಯ ಸ್ಥಾಯಿಸಮಿತಿಗಳು ಸಕ್ರಿಯವಾಗಿ ಕಾರ್ಯ ನಿರ್ವಹಿಸುವ ಮೂಲಕ ಜನತೆಯ ಮೂಲಭೂತ ಸಮಸ್ಯೆಗಳನ್ನು ನಿವಾರಿಸುವಲ್ಲಿ ಮತ್ತು ಸರ್ಕಾರಿ ಯೋಜನೆಗಳನ್ನು ನಿವಾರಿಸುವಲ್ಲಿ ಮತ್ತು ಸರ್ಕಾರಿ ಯೋಜನೆಗಳನ್ನು ಹಾಗೂ ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನಗೊಳಿಸುವಲ್ಲಿ ಮಹತ್ವದ ಪಾತ್ರವಹಿಸಿವೆ ಎಂದು ಹೇಳಿದ್ದಾರೆ.[37]

**26. ಎಂ. ಯರಿಸ್ವಾಮಿ** ಅವರ ಗ್ರಾಮಪಂಚಾಯಿತಿ ಮತ್ತು ಸಬಲೀಕರಣ(ಬಳ್ಳಾರಿ ಜಿಲ್ಲೆಯ ಅಧ್ಯಯನ) ಸಂಶೋಧನಾ ಗ್ರಂಥದಲ್ಲಿ ಸಮಿತಿಗಳ ಬಗ್ಗೆ ಚರ್ಚಿಸಿದ್ದಾರೆ. ಗ್ರಾಮೀಣ ವ್ಯಾಪ್ತಿಯ

ಮೂಲ ಅಧಿಕಾರಗಳಾದ ಕಟ್ಟಡಗಳ ರಚನೆಯ ನಿಯಂತ್ರಣದ ಮೂಲಕ ಯೋಜಿತ ಗ್ರಾಮ ನಿರ್ಮಾಣ, ಕಾರ್ಖಾನೆ, ಉದ್ದಿಮೆ, ವ್ಯಾಪಾರ ನಿಯಂತ್ರಣದ ಮೂಲಕ ಗ್ರಾಮ ಪರಿಸರ ಸಂರಕ್ಷಣೆ, ಹೋಟೆಲ್, ವಸತಿಗೃಹ ನಿಯಂತ್ರಣ, ತ್ಯಾಜ್ಯ ವಿಲೇವಾರಿ, ಶೌಚಾಲಯ ಮತ್ತು ಚರಂಡಿ ನಿರ್ಮಾಣ, ಸಾಂಕ್ರಾಮಿಕ ರೋಗ ತಡೆಗಳ ಮೂಲಕ ಜನಾರೋಗ್ಯ ರಕ್ಷಣೆ, ಕುಡಿಯುವ ನೀರು ಪೂರೈಕೆ, ರಸ್ತೆ, ಸೇತುವೆ ನಿರ್ಮಾಣ, ಒತ್ತುವರಿ ನಿವಾರಣೆ, ಬೀದಿ ದೀಪಗಳಂತಹ ಸಾರ್ವಜನಿಕ ಸೌಲಭ್ಯ ಸೃಷ್ಟಿಯ ಮೂಲಕ ಜನರ ಜೀವನ ಮಟ್ಟ ಸುಧಾರಣೆಗಳಿಗೆ ಸಂಬಂಧಿಸಿದ ಅಧಿಕಾರ ಮತ್ತು ಹೊಣೆಗಳು ಗ್ರಾಮ ಪಂಚಾಯತ್‌ಗಳಿಗೆ ಸೇರಿವೆ. ಇವುಗಳ ಮೇಲಿನ ನಿಯಂತ್ರಣಾಧಿಕಾರಗಳು ಪರಿಣಾಮಕಾರಿಯಾಗುವ ಕಾರಣದಿಂದ ನಿಯಮೋಲ್ಲಂಘನೆಯ ಸಂದರ್ಭದಲ್ಲಿ ದಂಡನಾ ಕ್ರಮಗಳನ್ನು ಕೈಗೊಳ್ಳುವ ಅಧಿಕಾರ ಮತ್ತು ಹೊಣೆಗಳು ಅವುಗಳಿಗಿವೆ.[38]

27. **ಅಬ್ದುಲ್ ನಜೀರ್‌ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ ಮೈಸೂರು**-2011ರಲ್ಲಿ ಪ್ರಕಟಗೊಂಡ "ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಮಾಹಿತಿ ಕೈಪಿಡಿ"ಯಲ್ಲಿ ಗ್ರಾಮಪಂಚಾಯತಿಗಳಲ್ಲಿ "ಜಾಗೃತಿ ಮತ್ತು ಉಸ್ತುವಾರಿ ಸಮಿತಿ"ಯನ್ನು ರಚಿಸಲು ಅವಕಾಶ ಕಲ್ಪಿಸಲಾಗಿದೆ. ಈ ಸಮಿತಿ ಬಹುತೇಕಮಟ್ಟಿಗೆ ಉದ್ಯೋಗ ಖಾತರಿಯಲ್ಲಿನ ಅಕ್ರಮ ಮತ್ತು ಅವ್ಯವಹಾರವನ್ನು ತಡೆಯುವಲ್ಲಿ ಯಶಸ್ವಿಯಾಗಿದೆ ಎಂದು ವಿವರಿಸಲಾಗಿದೆ(ಈ ಜಾಗೃತಿ ಮತ್ತು ಉಸ್ತುವಾರಿ ಸಮಿತಿ ಒಂದು ಉಪ ಸಮಿತಿಯಾಗಿದೆ).[39]

28. **ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993 ರ ಕೈಪಿಡಿ**ಯಲ್ಲಿ ಪ್ರಕರಣ 61 ಮತ್ತು 61 ಎ ದಲ್ಲಿ ಗ್ರಾಮಪಂಚಾಯತಿಗಳ ರಚನೆ ಕುರಿತು ಪ್ರಕರಣ 148ರ ಅನ್ವಯ ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿಗಳ ರಚನೆ ಕುರಿತು ಪ್ರಕರಣ 186ರ ಅನ್ವಯ ಜಿಲ್ಲಾ ಪಂಚಾಯತಿ ಸ್ಥಾಯಿಸಮಿತಿಗಳ ರಚನೆ ಅಧಿಕಾರ ಮತ್ತು ಕಾರ್ಯಗಳ ಕುರಿತು ವಿವರಿಸಿದ್ದರೂ ಸಹ ಇದೇ ಕರ್ನಾಟಕ ಪಂಚಾಯತ್ ಅಧಿನಿಯಮ 1993ರ ಪ್ರಕರಣ 270 ರಲ್ಲಿ ಸ್ಥಾಯಿಸಮಿತಿಗಳು ತೆಗೆದುಕೊಂಡ ನಿರ್ಣಯಗಳನ್ನು GP, TP, ಮತ್ತು ZPಯ ಸಾಮಾನ್ಯಸಭೆ ಸ್ವೀಕರಿಸಬಹುದು ಅಥವಾ ತಿರಸ್ಕರಿಸಬಹುದು ಎಂದು ಹೇಳುವ ಮೂಲಕ ಕಾಯ್ದೆಯಲ್ಲಿಯೇ ಪರೋಕ್ಷವಾಗಿ ಸ್ಥಾಯಿಸಮಿತಿಗಳನ್ನು ದುರ್ಬಲಗೊಳಿಸಿದಂತೆ ಕಂಡುಬರುತ್ತದೆ.[40]

29. **ಅನಿಲ್** ಅವರ "ತಾಲ್ಲೂಕ್ ಪಂಚಾಯತ್ ಸ್ಥಾಯಿ ಸಮಿತಿ" ಎಂ.ಫಿಲ್ ಪ್ರಬಂಧದಲ್ಲಿ ಸ್ಥಾಯಿಸಮಿತಿಗಳ ಕಾರ್ಯವಿಧಾನ, ರಚನೆ ಮತ್ತು ಅಧಿಕಾರ ಕುರಿತು ವಿವರಣೆಯನ್ನು ನೀಡಲಾಗಿದೆ. ಇಲ್ಲಿ ತಾಲ್ಲೂಕು ಪಂಚಾಯಿತಿಗಳ ಸ್ಥಾಯಿ ಸಮಿತಿಗಳು ಅಷ್ಟೊಂದು ಸಕ್ರಿಯವಾಗಿರುವುದಿಲ್ಲ ಎಂದು ವಿವರಿಸಿದ್ದಾರೆ.[41]

**30. ಫೆಬ್ರವರಿ 2011ರ ಯೋಜನಾ** ಮಾಸಪತ್ರಿಕೆಯಲ್ಲಿ "ಕರ್ನಾಟಕ ಪಂಚಾಯತ್‌ರಾಜ್ ಸಂಸ್ಥೆಗಳ ಅಧಿಕಾರ ಮತ್ತು ಕಾರ್ಯಗಳು" ಲೇಖನದಲ್ಲಿ ಲೇಖಕರಾದ ಕೆ.ಆರ್.ಭೋಗೇಶ್ವರಪ್ಪ ರವರು ಜಿಲ್ಲಾ ಪಂಚಾಯತಿಯ ಸ್ಥಾಯಿಸಮಿತಿಗಳು ಸರ್ಕಾರದ ಅನುದಾನವನ್ನು ಪಡೆದು ಸದುಪಯೋಗಪಡಿಸಿಕೊಂಡು ಅಭಿವೃದ್ಧಿಯತ್ತ ಸಾಗುತ್ತಿವೆ ಎಂದಿದ್ದಾರೆ. ಅದೆ ರೀತಿ ಸ್ಥಾಯಿ ಸಮಿತಿಗಳು ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾಪಂಚಾಯತಿಗಳಲ್ಲಿ ಯಶಸ್ವಿಯಾಗಲು ಸೂಕ್ತ ತರಬೇತಿ ಅವಶ್ಯಕವೆಂದು ಹೇಳಿದ್ದಾರೆ.[42]

**31. ಎಂ.ಸಿ. ಶೈಲಜ ಮತ್ತು ವಿಲ್‌ಫ್ರೆಡ್ ಡಿಸೋಜಾ** ಅವರು ತಮ್ಮ ಪ್ರಜಾಪ್ರಭುತ್ವ ವಿಕೇಂದ್ರೀಕರಣ ಮತ್ತು ಅಭಿವೃದ್ಧಿ ಎಂಬ ಕೃತಿಯಲ್ಲಿ(2010) ಇತ್ತೀಚಿನ ದಿನಗಳಲ್ಲಿ ಗ್ರಾಮ ಪಂಚಾಯತ್‌ಗಳಲ್ಲಿ ಬಹುತೇಕ ಮಟ್ಟಿಗೆ ಉತ್ತಮ ರೀತಿಯಲ್ಲಿ ಪಡಿತರ ವಿತರಣೆಯಾಗಲು ಈ ಆಹಾರ ಖಾತರಿ ಉಪಸಮಿತಿ ಯಶಸ್ವಿಯಾಗಿದೆ ಎಂದು ವಿವರಿಸಿದ್ದಾರೆ.[43]

**32. ಡಾ.ಕೆ.ಚಂದ್ರಶೇಖರ್ ಅವರ ಅಭಿವೃದ್ಧಿ ಪಥದಲ್ಲಿ ಪಂಚಾಯತ್‌ರಾಜ್ ಸಂಸ್ಥೆಗಳು (2012)** ಎಂಬ ಗ್ರಂಥದಲ್ಲಿ ಸ್ಥಾಯಿ ಸಮಿತಿಗಳ ಧ್ಯೇಯೋದ್ದೇಶಗಳ ಯಶಸ್ವಿ ಕಾರ್ಯನಿರ್ವಹಣೆಗೆ ಇರುವ ಪ್ರಮುಖ ತೊಂದರೆಗಳೇನು ಎಂಬುದನ್ನು ವಿವರಿಸಿದ್ದಾರೆ. ಬಹುತೇಕ ಗ್ರಾಮ ಪಂಚಾಯತಿಗಳು ನಿಯಮದ ಅನ್ವಯ ನಡೆಯುತ್ತಿಲ್ಲ. ಕೆಲವೊಂದು ಗ್ರಾಮ ಪಂಚಾಯತಿಗಳಲ್ಲಿ ಸ್ಥಾಯಿ ಸಮಿತಿ ಸದಸ್ಯರ ಹೆಸರನ್ನು ಕಛೇರಿ ಕಟ್ಟಡದ ಗೋಡೆಯ ಮೇಲೆ ಬರೆಯಲಾಗಿದೆಯೇ ವಿನಃ ಅದರಂತೆ ಸ್ಥಾಯಿ ಸಮಿತಿಯನ್ನು ರಚಿಸಿ ಸಭೆ ನಡೆಸಿರುವ ಹಾಗೂ ಸ್ಥಾಯಿಸಮಿತಿ ಸಭೆಗಳು ನಡೆದಿರುವ ಬಗ್ಗೆ ನಡಾವಳಿಗಳ ದಾಖಲಾತಿಗಳು ಇಲ್ಲದಿರುವುದು ಕಂಡು ಬಂದಿದೆ. ಮತ್ತು ಗ್ರಾಮ ಪಂಚಾಯಿತಿ ಅಧಿಕಾರಿಗಳು ಮತ್ತು ಚುನಾಯಿತ ಪ್ರತಿನಿಧಿಗಳ ನಡುವಿನ ಹೊಂದಾಣಿಕೆ ಕೊರತೆ, ಅನಕ್ಷರತೆ, ಅಜ್ಞಾನ ಮತ್ತು ಆಡಳಿತ ತರಬೇತಿ ಕೊರತೆಯಿಂದ ಸ್ಥಾಯಿ ಸಮಿತಿಗಳು ಕ್ಷೀಣಗೊಳ್ಳುತ್ತಿರುವುದು ಒಂದೆಡೆಯಾದರೆ, ಮತ್ತೊಂದೆಡೆ ಸ್ಥಾಯಿಸಮಿತಿಗಳ ನಿರ್ಣಯಗಳನ್ನು ಅನುಷ್ಠಾನಗೊಳಿಸಬೇಕಾದಲ್ಲಿ ಗ್ರಾಮ ಪಂಚಾಯತಿಯ ಸಾಮಾನ್ಯ ಸಭೆಯಲ್ಲಿ ಅರ್ಧಕ್ಕಿಂತ ಹೆಚ್ಚು ಸದಸ್ಯರ ಬಹುಮತ ಅತ್ಯಗತ್ಯ. ಆದರೆ ಬಹುತೇಕ ಸಾಮಾನ್ಯಸಭೆಗಳಲ್ಲಿ ಸ್ಥಾಯಿ ಸಮಿತಿಗಳ ನಿರ್ಣಯಗಳನ್ನೇ ಪರಿಗಣನೆಗೆ ತೆಗೆದುಕೊಳ್ಳದೇ ಇರುವುದರ ಮೂಲಕ ಗ್ರಾಮ ಪಂಚಾಯತಿಗಳ ಬೆಂಬಲವಿಲ್ಲದೇ ಸ್ಥಾಯಿ ಸಮಿತಿಗಳು ನಿರೀಕ್ಷಿತ ಮಟ್ಟದಲ್ಲಿ ಯಶಸ್ಸನ್ನು ಸಾಧಿಸುವಲ್ಲಿ ವಿಫಲಗೊಳ್ಳುತ್ತಿವೆ ಎಂದಿದ್ದಾರೆ.[44]

33. ಡಾ.ಎಚ್.ಡಿ.ಪ್ರಶಾಂತ್(2005) ಎಂಬ ಅಭಿವೃದ್ಧಿ ಅಧ್ಯಯನ ವಿಭಾಗದಿಂದ ಪ್ರಕಟಗೊಂಡ "ಅಭಿವೃದ್ಧಿ ಅಧ್ಯಯನ", ಸಂಪುಟ 4ರಲ್ಲಿ "ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ

ಸಮಿತಿ ಸದಸ್ಯರೊಂದಿಗೆ ನಡೆಸಿದ ಸಂವಾದ ಕಾರ್ಯಕ್ರಮ" ಲೇಖನದಲ್ಲಿ ಸ್ಥಳೀಯ ಜನರು ಅಭಿವೃದ್ಧಿ ಯೋಜನೆಗಳನ್ನು ರೂಪಿಸುವ, ನಿಯಂತ್ರಿಸುವ ಮತ್ತು ನಿರ್ವಹಿಸುವ ಸಾಮರ್ಥ್ಯ ಬೆಳೆಸಿಕೊಳ್ಳಬೇಕಾದರೆ ಇಂತಹ ಸಮಿತಿಗಳ ಅಗತ್ಯತೆ, ಕಾರ್ಯಕ್ಷಮತೆ, ಸಬಲೀಕರಣ ಆಗಬೇಕು ಹಾಗೂ ಶೈಕ್ಷಣಿಕ ಪರಿಸರ ಮತ್ತು ಸ್ಥಿತಿಗತಿಗಳಿಂದ ಹೊರತುಪಡಿಸಿ ನೋಡಿದರೆ ಒಟ್ಟಾರೆ ಶೈಕ್ಷಣಿಕ ಅಭಿವೃದ್ಧಿ ಸಾಧ್ಯವಿಲ್ಲ. ಹೀಗಾಗಿ ಸಾಧ್ಯವಾದ ಮಟ್ಟಿಗೆ ಸ್ಥಳೀಯ ಪರಿಸರ ಮತ್ತು ಪರಿಸ್ಥಿತಿಗೆ ಅನುಗುಣವಾಗಿ ಸಮಸ್ಯೆಗಳನ್ನು ವಿಶ್ಲೇಷಿಸಿ ಪರಿಹಾರಗಳನ್ನು ಕಂಡುಕೊಳ್ಳುವ ರೀತಿಯಲ್ಲಿ ಕಾರ್ಯಕ್ರಮಗಳನ್ನು ರೂಪಿಸಿದರೆ ಹೆಚ್ಚು ಪ್ರಯೋಜನವಾಗುತ್ತದೆ. ಇದರ ಮೂಲಕ ಇಂತಹ ಸಮಿತಿಗಳ ಮಹತ್ವವನ್ನು ಈ ಸಂವಾದ ಕಾರ್ಯಕ್ರಮದ ಲೇಖನದಲ್ಲಿ ಚರ್ಚಿಸಲಾಗಿದೆ.[45]

ಈ ಮೇಲಿನ ಲೇಖಕರು ಸಂಶೋಧಕರು ತಮ್ಮ ಕೃತಿಗಳಲ್ಲಿ, ಲೇಖನಗಳಲ್ಲಿ ಪಂಚಾಯತ್ ರಾಜ್ ವ್ಯವಸ್ಥೆಯ ಪ್ರಸ್ತುತ ಇರುವ ಸ್ಥಳೀಯ ಸಂಸ್ಥೆಗಳ ಸ್ವರೂಪ ಅದರ ಕಾರ್ಯಾಚರಣೆ ಹಾಗೂ ಗ್ರಾಮೀಣ ಪ್ರದೇಶಗಳ ಸಮಸ್ಯೆ ಗ್ರಾಮ ಪಂಚಾಯತಿಗಳು ಮತ್ತು ಗ್ರಾಮಸಭೆಗಳ ಬಗ್ಗೆ ಹೀಗೆ ಆನೇಕ ವಿಷಯಗಳನ್ನು ಕುರಿತು ಚರ್ಚಿಸಿದ್ದಾರೆ. ಆದರೆ ಗ್ರಾಮ ಪಂಚಾಯತಿಯಲ್ಲಿರುವ ಸ್ಥಾಯಿಸಮಿತಿಗಳ ಕಾರ್ಯನಿರ್ವಹಣೆ, ಅವುಗಳ ಸಫಲತೆ ಅಥವಾ ವಿಫಲತೆ, ಸ್ಥಾಯಿಸಮಿತಿಗಳ ಬಗ್ಗೆ ಸದಸ್ಯರಿಗೆ ಇರುವ ಅರಿವು, ಗ್ರಾಮೀಣಾಭಿವೃದ್ಧಿಗೆ ಸ್ಥಾಯಿಸಮಿತಿಗಳು ವಹಿಸುವ ಪಾತ್ರ ಮುಂತಾದ ಅಂಶಗಳ ಬಗ್ಗೆ ಹೆಚ್ಚಿನ ಚರ್ಚೆಯಾಗಿಲ್ಲದಿರುವುದು ಕಂಡು ಬರುತ್ತದೆ. ಆದ್ದರಿಂದ ಪ್ರಸ್ತುತ ಸಂಶೋಧನೆಯನ್ನು ಕೈಗೆತ್ತಿಕೊಂಡು ಪಂಚಾಯತ್‌ರಾಜ್ ಸ್ಥಾಯಿಸಮಿತಿಗಳ ಬಗ್ಗೆ ಸೂಕ್ಷ್ಮವಾಗಿ ಅಧ್ಯಯನ ಮಾಡಲಾಗಿದೆ. ತಳಮಟ್ಟದಲ್ಲಿ ಈ ಸಮಿತಿಗಳ ಕಾರ್ಯಕ್ಷಮತೆ, ಕಾರ್ಯನಿರ್ವಹಣೆಯಲ್ಲಿ ಎದುರಾಗುವ ಅಡ್ಡಿ ಆತಂಕಗಳನ್ನು ಮೀರಿ ಪ್ರಾಮಾಣಿಕ ಅನುಷ್ಠಾನಕ್ಕೆ ಅಗತ್ಯವಿರುವ ಎಲ್ಲಾ ಕ್ರಮಗಳ ಬಗ್ಗೆ ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಿದೆ.

## 1.9 ಅಧ್ಯಾಯಗಳ ವಿನ್ಯಾಸ

ಈ ಸಂಶೋಧನಾ ಮಹಾಪ್ರಬಂಧವು ಒಟ್ಟು ಆರು ಅಧ್ಯಾಯಗಳನ್ನು ಒಳಗೊಂಡಿದೆ. ಅವುಗಳನ್ನು ಈ ಕೆಳಗಿನಂತೆ ವಿನ್ಯಾಸ ಗೊಳಿಸಲಾಗಿದೆ.

**ಅಧ್ಯಾಯ ಒಂದು:** ಈ ಅಧ್ಯಾಯದಲ್ಲಿ ಅಧ್ಯಯನದ ಪ್ರಸ್ತಾವನೆ,ಅಧ್ಯಯನದ ಸಮಸ್ಯೀಕರಣ, ಅಧ್ಯಯನದ ಉದ್ದೇಶಗಳು, ಅಧ್ಯಯನದ ಗ್ರಹಿಕೆಗಳು, ಅಧ್ಯಯನದ ವಿಧಾನ, ಅಧ್ಯಯನದ ಮಿತಿಗಳು, ಅಧ್ಯಯನದ ಮಹತ್ವ,ಅಧ್ಯಾಯಗಳ ವಿನ್ಯಾಸ ಮತ್ತು ಅಧ್ಯಯನದ ಸಮೀಕ್ಷೆಗಳನ್ನು ಒಳಗೊಂಡಿದೆ.

**ಅಧ್ಯಾಯ ಎರಡು:** ರಾಷ್ಟ್ರ ಮತ್ತು ರಾಜ್ಯ ಮಟ್ಟದಲ್ಲಿ ಗ್ರಾಮಪಂಚಾಯತ್,ತಾಲೂಕ್ ಪಂಚಾಯತ್ ಮತ್ತು ಜಿಲ್ಲಾಪಂಚಾಯತ್ ಬೆಳವಣಿಗೆ,ರಚನೆ ಕಾರ್ಯವಿಧಾನ ಮತ್ತು ಸ್ಥಾಯಿಸಮಿತಿಗಳ ಬೆಳವಣಿಗೆ ,ರಚನೆ ಮತ್ತು ಕಾರ್ಯಕ್ಷಮತೆ ಬಗ್ಗೆ ಎರಡನೇ ಅಧ್ಯಾಯದಲ್ಲಿ ವಿವರಗಳನ್ನು ವಿಶ್ಲೇಷಿಸಲಾಗಿದೆ.

**ಅಧ್ಯಾಯ ಮೂರು:** ಮೂರನೇ ಅಧ್ಯಾಯದಲ್ಲಿ ಆಧ್ಯಯನದ ಕ್ಷೇತ್ರ ಪರಿಚಯವನ್ನು ವಿಶ್ಲೇಷಿಸಲಾಗಿದೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಚಿತ್ರದುರ್ಗ ಜಿಲ್ಲಾಪಂಚಾಯತಿ, ಚಿತ್ರದುರ್ಗ,ಹಿರಿಯೂರು ಮತ್ತು ಮೊಳಕಾಲ್ಮೂರು ತಾಲೂಕು ಪಂಚಾಯಿತಿಗಳ ಹಾಗೂ ಆರು ಗ್ರಾಮಪಂಚಾಯಿತಿಗಳ ಭೌಗೋಳಿಕ,ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಿವರಗಳನ್ನು ಅಂಕಿ–ಅಂಶಗಳ ಮೂಲಕ ವಿವರಿಸಲಾಗಿದೆ.

**ಅಧ್ಯಾಯ ನಾಲ್ಕು:** ಈ ಅಧ್ಯಾಯದಲ್ಲಿ ಆಯ್ಕೆ ಮಾಡಿಕೊಂಡ ಚಿತ್ರದುರ್ಗ ಜಿಲ್ಲಾ ಪಂಚಾಯತಿ, ಚಿತ್ರದುರ್ಗ, ಹಿರಿಯೂರು ಮತ್ತು ಮೊಳಕಾಲ್ಮೂರು ತಾಲೂಕು ಪಂಚಾಯಿತಿಗಳ ಹಾಗೂ ಆರು ಗ್ರಾಮಪಂಚಾಯಿತಿಗಳ ಸ್ಥಾಯಿಸಮಿತಿಗಳ ಕಾರ್ಯಕ್ಷಮತೆಯ ಜೊತೆಗೆ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಅಂಶಗಳನ್ನು ವಿಶ್ಲೇಷಿಸಲಾಗಿದೆ.

**ಅಧ್ಯಾಯ ಐದು:** ಈ ಅಧ್ಯಾಯದಲ್ಲಿ ಚಿತ್ರದುರ್ಗ ಜಿಲ್ಲಾಪಂಚಾಯತಿ, ಚಿತ್ರದುರ್ಗ, ಹಿರಿಯೂರು ಮತ್ತು ಮೊಳಕಾಲ್ಮೂರು ತಾಲೂಕು ಪಂಚಾಯಿತಿಗಳ ಹಾಗೂ ಆರು ಗ್ರಾಮ ಪಂಚಾಯಿತಿಗಳ ಸ್ಥಾಯಿಸಮಿತಿಗಳ ಕಾರ್ಯಕ್ಷಮತೆಯನ್ನು ತೌಲಾನಿಕವಾಗಿ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಅಂಶಗಳ ಜೊತೆಗೆ ಅನುದಾನಗಳ ವಿವರಗಳನ್ನು ಆರು ಗ್ರಾಮಪಂಚಾಯಿತಿಗಳ ಸ್ಥಾಯಿಸಮಿತಿಗಳ ಕಾರ್ಯಕ್ಷಮತೆಯನ್ನು ವಿಶ್ಲೇಷಿಸಿ ಫಲಿತಗಳನ್ನು ಕಂಡುಕೊಳ್ಳಲಾಗಿದೆ..

**ಅಧ್ಯಾಯ ಆರು:** ಪ್ರಸ್ತುತ ಆಧ್ಯಯನದ ಕೊನೆಯ ಅಧ್ಯಾಯದಲ್ಲಿ ಆಧ್ಯಯನದ ಸಾರಂಶ.ಮತ್ತು ಫಲಿತಗಳನ್ನು ನೀಡಲಾಗಿದೆ ಸ್ಥಾಯಿಸಮಿತಿಗಳ ಕಾರ್ಯಕ್ಷಮತೆಯನ್ನು ಸುಧಾರಿಸಲು ಮತ್ತು ಸಬಲೀಕರಣ ಗೊಳಿಸಲು ಸೂಕ್ತ ಸಲಹೆಗಳನ್ನು ನೀಡಲಾಗಿದೆ.

**ಪ್ರಶ್ನಾವಳಿಗಳು**

**ಪರಾಮರ್ಶನ ಗ್ರಂಥಗಳು: ಹೀಗೆ** ಸಂಶೋಧನಾ ಮಹಾಪ್ರಬಂಧವು ಆರು ಅಧ್ಯಾಯ ಗಳನ್ನು ವಿನ್ಯಾಸ ಗೊಳಿಸಲಾಗಿದೆ.

**ಕೊನೆ ಟಿಪ್ಪಣಿಗಳು**


1. ಬಡ್ಡಿ ಎಂ. ಎಂ., **ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ–1993,** ಅಕಳವಾಡಿ ಬುಕ್ ಡಿಪೋ, ಧಾರವಾಡ, 1994.
2. ಚಂದ್ರ ಪೂಜಾರಿ ಎಂ., **ದೇಶೀಯತೆಯ ನೆರಳಲ್ಲಿ ವಿಕೇಂದ್ರೀಕರಣ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, 2001.
3. ಯರಿಸ್ವಾಮಿ ಎಂ., **ಗ್ರಾಮಪಂಚಾಯತಿ ಮತ್ತು ಸಬಲೀಕರಣ (ಬಳ್ಳಾರಿ ಜಿಲ್ಲೆಯ ಅಧ್ಯಯನ),** ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002.
4. ಬಲವಂತ್‌ರಾಯ್ ಮೆಹ್ತಾ, **ರಿಪೋರ್ಟ್ ಆಫ್ ದಿ ಟೀಮ್ ಫಾರ್ ದಿ ಸ್ಟಡಿ ಆಫ್ ಕಮ್ಯುನಿಟಿ ಪ್ರಾಜೆಕ್ಟ್ ಆ್ಯಂಡ್ ನೇಶನಲ್ ಎಕ್ಸಟೆನ್‌ಶನ್ ಸರ್ವಿಸಸ್,** ನ್ಯೂಡೆಲ್ಲಿ: ವ್ಯಾಲ್ಯೂಮ್ 1, ಪ್ಲಾನಿಂಗ್ ಕಮೀಷನ್, 1959.
5. ಅಶೋಕ್ ಮೆಹ್ತಾ, **ರಿಪೋರ್ಟ್ ಆಫ್ ದಿ ಕಮಿಟಿ ಆನ್ ಪಂಚಾಯತ್‌ರಾಜ್ ಇನ್‌ಸ್ಟಿಟ್ಯೂಶನ್ಸ್,** ನ್ಯೂಡೆಲ್ಲಿ: ಮಿನಿಸ್ಟ್ರಿ ಆಫ್ ಅಗ್ರಿಕಲ್ಚರ್ ಆ್ಯಂಡ್ ಇರಿಗೇಷನ್, 1978.
6. ಭುವನಹಳ್ಳಿ ನಾಗರಾಜ್, *"ವಿಕೇಂದ್ರೀಕರಣ: ಪಂಚಾಯತ್‌ರಾಜ್ ಸಂಸ್ಥೆಗಳು ನಡೆದು ಬಂದ ದಾರಿ ಒಂದು ಅವಲೋಕನ",* **ಕರ್ನಾಟಕ ವಿಕಾಸ,** ಸಂಪುಟ–40, ಸಂಚಿಕೆ–2, ಪುಟ–8–14, ಜನವರಿ–2000.
7. **ಗವರ್ನ್‌ಮೆಂಟ್ ಆಪ್ ಇಂಡಿಯಾ ಪಂಚಾಯತ್‌ರಾಜ್ ಸ್ಟೇಟಸ್ ರಿಪೋರ್ಟ್–1999,** ನ್ಯೂಡೆಲ್ಲಿ: ರಾಜೀವ್ ಗಾಂಧಿ ಫೌಂಡೇಶನ್, ಪುಟ.5–6, ಮಾರ್ಚ್ 2002.
8. **ಕರ್ನಾಟಕ ಸರ್ಕಾರ, ಗ್ರಾಮಪಂಚಾಯತಿ ಆಡಳಿತ ಕಿರು ಟಿಪ್ಪಣಿ,** ಮೈಸೂರು: ಅಬ್ದುಲ್ ನಜೀರ್‌ಸಾಬ್ ರಾಜ್ಯ ಗ್ರಾಮೀಣ ಅಭಿವೃದ್ಧಿ ಸಂಸ್ಥೆ, 1994.
9. ಪೂರ್ವೋಕ್ತ ಬಡ್ಡಿ ಎಂ. ಎಂ. 1993.
10. ಮುಜುಂದಾರ್ ಎ. ಕೆ. ಅಂಡ್ ಬನವರ್‌ಸಿಂಗ್, **ಹಿಸ್ಟಾರಿಕಲ್ ಅಂಡ್ ಕಾನ್ಸೆಪ್ಟ್ ವೆಲ್ ಡೆವಲಪ್‌ಮೆಂಟ್ ಆಫ್ ಪಂಚಾಯತ್ ರಾಜ್,** ರಾಧಾ ಪಬ್ಲಿಕೇಶನ್ಸ್, ನ್ಯೂಡೆಲ್ಲಿ, 1997.
11. ಶಶಿಧರ ಕೆ., **ಪೊಲಿಟಿಕಲ್ ಲೀಕೇಜ್ ಆಫ್ ರೂರಲ್ ಡೆವಲೆಪ್‌ಮೆಂಟ್,** ನ್ಯಾಷನಲ್ ಪಬ್ಲಿಷಿಂಗ್ ಹೌಸ್, ನ್ಯೂಡೆಲ್ಲಿ, 1996.
12. ಪೂರ್ವೋಕ್ತ ಬಡ್ಡಿ ಎಂ. ಎಂ. 1993.
13. **ಕರ್ನಾಟಕ ಪಂಚಾಯತ್ ರಾಜ್ ಕೈಪಿಡಿ, ಆರನೆ ಆವೃತ್ತಿ,** ಕರ್ನಾಟಕ ಲಾ ಜರ್ನಲ್ ಪಬ್ಲಿಕೇಷನ್ಸ, ಬೆಂಗಳೂರು, 1999.

14. ರಾಹುಲ್ ಮುದ್ಗಲ್, **ಲೋಕಲ್ ಸೆಲ್ಫ್ ಗವರ್ನಮೆಂಟ್ ಇನ್ ಇಂಡಿಯಾ,** ಬುಕ್ ಎನ್ಕ್ಲೇವ್ ಜೈನ್ ಭವನ್, ಶಾಂತಿನಗರ, ಜೈಪುರ-06, 1998.

15. ಉಮಾಪತಿ ಎಮ್, **ಲೋಕಲ್ ಸೆಲ್ಫ್ ಗೌರ್ನಮೆಂಟ್ ಇನ್ ಕರ್ನಾಟಕ,** ಮೈಸೂರು: ಮೈಸೂರು ವಿಶ್ವವಿದ್ಯಾಲಯ, 1998.

16. ಧರ್ಮಪಾಲ್, **ದಿ ಮದ್ರಾಸ್ ಪಂಚಾಯತ್ ಸಿಸ್ಟಮ್,** ಇಪೆಕ್ಸ ಇಂಡಿಯಾ, ದೆಹಲಿ, 1972.

17. ಮ್ಯಾಥ್ಯೊ ಜಾರ್ಜ್, **ಪಂಚಾಯತ್‌ರಾಜ್ ಇನ್ ಕರ್ನಾಟಕ ಟುಡೆ ಇಟ್ಸ ನ್ಯಾಷನಲ್ ಡೈಮೆಷನ್ಸ್ ಇನ್ಸ್ಟಿಟ್ಯೂಟ್ ಆಫ್ ಸೋಷಿಯಲ್ ಸೈನ್ಸ್ ಅಂಡ್ ಕಾನ್ಸೆಪ್ಟ್,** ಪಬ್ಲಿಷಿಂಗ್ ಕಂಪನಿ, ನ್ಯೂಡೆಲ್ಲಿ, 1996.

18. ಮಹೇಶ್ವರಿ ಎಸ್. ಆರ್., **ಲೋಕಲ್ ಗವರ್ನ್‌ಮೆಂಟ್ ಇನ್ ಇಂಡಿಯಾ,** ಲಕ್ಷ್ಮಿನಾರಾಯಣ ಅಗರವಾಲ್, ಅಗ್ರಹಾರ, 1999.

19. ಮೀನಾಕ್ಷಿ ಸುಂದರಂ, **'ದಿ ಸೆವೆಂಟಿ ಥರ್ಡ್ ಕಾನ್ಸ್‌ಟ್ಯೂಷನ್ ಅಮೆಂಡ್‌ಮೆಂಟ್' ಜರ್ನಲ್ ಆಫ್ ರೂರಲ್ ಡೆವಲಪ್‌ಮೆಂಟ್,** ಸಂ.16, ಸಂ.4, ಪು.549-556, 1997.

20. ಸಿಂಗ್ ಡಿ. ಅರ್, **ಪಂಚಾಯತ್‌ರಾಜ್ ರೂರಲ್,** ಆರ್ಗನೈಜೈಶನ್ ಪಬ್ಲಿಕೇಶನ್ಸ್, ಅಲಹಬಾದ್, 1990.

21. ಮುಜುಂದಾರ್ ಎ. ಕೆ. ಅಂಡ್ ಬನವರ್‌ಸಿಂಗ್, **ಹಿಸ್ಟಾರಿಕಲ್ ಅಂಡ್ ಕಾನ್ಸೆಪ್ಚುವೆಲ್ ಡೆವಲಪ್‌ಮೆಂಟ್ ಆಫ್ ಪಂಚಾಯತ್‌ರಾಜ್,** ರಾಧಾ ಪಬ್ಲಿಕೇಶನ್ಸ್, ನ್ಯೂಡೆಲ್ಲಿ, 1997.

22. ಚಂದ್ರ ಪೂಜಾರಿ ಎಂ., **ದೇಶೀಯತೆಯ ನೆರಳಲ್ಲಿ ವಿಕೇಂದ್ರೀಕರಣ,** ಹಂಪಿ ಕನ್ನಡ ವಿಶ್ವವಿದ್ಯಾಲಯ, 2001.

23. ಶಶಿಧರ ಕೆ, **ಪೊಲಿಟಿಕಲ್ ಲೀಕೇಜ್ ಆಫ್ ರೂರಲ್ ಡಿವಲೆಪ್‌ಮೆಂಟ್,** ನ್ಯಾಷನಲ್ ಪಬ್ಲಿಷಿಂಗ್ ಹೌಸ್, ನ್ಯೂಡೆಲ್ಲಿ, 1996.

24. ಗೋಯಲ್ ಎಸ್.ಎಲ್., ಶಾಲಿನಿ ರಜನೀಶ್, **ಪಂಚಾಯತ್‌ರಾಜ್ ಇನ್ ಇಂಡಿಯಾ ಥಿಯರಿ ಅಂಡ್ ಪ್ರಾಕ್ಟೀಸ್,** ನವದೆಹಲಿ, 2003.

25. ಮಹೇಶ್ವರಿ ಎಸ್. ಆರ್., **ಲೋಕಲ್ ಗವರ್ನ್‌ಮೆಂಟ್ ಇನ್ ಇಂಡಿಯಾ,** ಲಕ್ಷ್ಮಿನಾರಾಯಣ ಅಗರವಾಲ್, ಅಗ್ರಹಾರ, 1999.

26. ಝಾ ಎಸ್.ಎನ್. ಮತ್ತು ಮಾಥುರ್ ಪಿ.ಸಿ., **ಡಿಸೆಂಟ್ರಲೈಜೇಶನ್ ಅಂಡ್ ಲೋಕಲ್,** ಪಾಲಿಟಿಕ್ಸ್ ಸೀಜ್, ನವದೆಹಲಿ-1999.

27. ಬಸವರಾಜ್ ಹೆಚ್, **ಅಧಿಕಾರ ವಿಕೇಂದ್ರೀಕರಣ ಹಾಗೂ ಗ್ರಾಮ ಪಂಚಾಯತಿಯ ಸ್ವರೂಪ ಮತ್ತು ಅದರ ಕಾರ್ಯಚರಣೆ,** ಸಂಶೋಧನಾ ಪ್ರಬಂಧ, ಕುವೆಂಪು ವಿಶ್ವವಿದ್ಯಾಲಯ, 2005.

28. **ಕರ್ನಾಟಕ ಪಂಚಾಯತ್‌ರಾಜ್ ಕೈಪಿಡಿ,** ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ, ಎಸ್.ಐ.ಆರ್.ಡಿ., ಮೈಸೂರು, 2006.

29. ಅಶೋಕ ಚಕ್ರವರ್ತಿ, **ಲೆಜಿಸ್ಲೆಟಿವ್ ಪಾಲಿಟಿಕ್ಸ್ ಇನ್ ಇಂಡಿಯಾ,** ರಾಧಾ ಪಬ್ಲಿಕೇಷನ್ಸ್, ನ್ಯೂಡೆಲ್ಲಿ, 1991.

30. ಅಶೋಕ ರಂಜನ್, **ಪಾರ್ಲಿಮೆಂಟರಿ ಪ್ರಿವಿಲೆಜಿಸ್ ಇನ್ ಇಂಡಿಯಾ,** ದೀಪ್ ಅಂಡ್ ದೀಪ್ ಪಬ್ಲಿಕೇಷನ್ಸ್, ನ್ಯೂಡೆಲ್ಲಿ, 1986.

31. ಶಂಕರಪ್ಪ ಆರ್, **ಆಡಳಿತ ವಿಕೇಂದ್ರೀಕರಣದಲ್ಲಿ ಗ್ರಾಮಸಭೆಯ ಮಹತ್ವ, ಕರ್ನಾಟಕ ವಿಕಾಸ,** ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ, ಬೆಂಗಳೂರು, ಜೂನ್ 2003.

32. ನರಸಿಂಹ ಮೂರ್ತಿ, **ಗ್ರಾಮೀಣ ಅಭಿವೃದ್ಧಿಯಲ್ಲಿ ಗ್ರಾಮ ಪಂಚಾಯತಿಗಳ ಪಾತ್ರ,** ಕರ್ನಾಟಕದ ವಿಕಾಸ, ಬೆಂಗಳೂರು, 2003.

33. ಚಂದ್ರಶೇಖರ ಟಿ.ಆರ್., **ವಿಕೇಂದ್ರೀಕರಣ ತತ್ವ ಆಚರಣೆ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, 2000.

34. ಮಹಿಪಾಲ್, **ಗ್ರಾಮೀಣ ಪುನರ್‌ನಿರ್ಮಾಣದಲ್ಲಿ ಪಂಚಾಯಿತಿಗಳ ಪಾತ್ರ,** ಯೋಜನಾ, ಗ್ರಾಮೀಣಾಭಿವೃದ್ಧಿ ಇಲಾಖೆ, ಫೆಬ್ರವರಿ, 2002

35. ಚಂದ್ರಶೇಖರ್ ಕೆ., **ಗ್ರಾಮೀಣ ಅಭಿವೃದ್ಧಿಯಲ್ಲಿ ಗ್ರಾಮ ಸಭೆ ಮತ್ತು ಗ್ರಾಮ ಪಂಚಾಯಿತಿಗಳ ಪಾತ್ರ,** 2005.

36. ನೇರಿ ಕರ್ನೇಲಿಯೋ(ಲೇ), **ಕರ್ನಾಟಕ ಜರ್ನಲ್ ಆಫ್ ಪಾಲಿಟಿಕ್ಸ್–ಡಿಸೆಂಬರ್–2009,** Vol-No-1 Page No. 220–225ರಲ್ಲಿ ಪ್ರಕಟಗೊಂಡ ಈ ಜರ್ನಲ್ಲಿನ "ಕರ್ನಾಟಕ ಗ್ರಾಮ ಪಂಚಾಯತಿಗಳು ಗ್ರಾಮ ಸ್ವರಾಜ್ಯದೆಡೆಗೆ" ಲೇಖನ

37. ಪ್ರಹ್ಲಾದಪ್ಪ ಎಂ.ಎಚ್.(ಲೇ), *"ಕರ್ನಾಟಕದ ಸ್ಥಳೀಯ ಸರ್ಕಾರಗಳಲ್ಲಿ ಜಿಲ್ಲಾ ಪಂಚಾಯತಿ ಸ್ಥಾಯಿಸಮಿತಿಗಳ ಪಾತ್ರ"* **ಕರ್ನಾಟಕ ಜರ್ನಲ್ ಆಫ್ ಪಾಲಿಟಿಕ್ಸ್,** Vol No-12 ಜನವರಿ 2011.

38. ಯರಿಸ್ವಾಮಿ ಎಂ., **ಗ್ರಾಮಪಂಚಾಯಿತಿ ಮತ್ತು ಸಬಲೀಕರಣ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002.

39. **"ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ"** ಮಾಹಿತಿ ಕೈಪಿಡಿ ಅಬ್ದುಲ್ ನಜೀರ್‌ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ ಮೈಸೂರು, 2011

40. **ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ,** 1993ರ ಕೈಪಿಡಿ, ಅಬ್ದುಲ್ ನಜೀರ್‌ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು,–1993.

41. ಅನಿಲ್, **"ತಾಲ್ಲೂಕು ಪಂಚಾಯತಿ ಸ್ಥಾಯಿ ಸಮಿತಿಗಳು"** ಎಂ.ಫಿಲ್ ಪ್ರಬಂಧ, ಕುವೆಂಪು ವಿಶ್ವವಿದ್ಯಾಲಯ, 2010.

42. **"ಕರ್ನಾಟಕ ಪಂಚಾಯತ್‌ರಾಜ್ ಸಂಸ್ಥೆಗಳ ಅಧಿಕಾರ ಮತ್ತು ಕಾರ್ಯಗಳು"** ಯೋಜನಾ, ಪ್ರಕಾಶನಾ ವಿಭಾಗ, ಸಮಾಚಾರ ಮತ್ತು ಪ್ರಸಾರ ಸಚಿವಾಲಯ, ಭಾರತ ಸರ್ಕಾರ, ಬೆಂಗಳೂರು–34, ಫೆಬ್ರುವರಿ 2011.

43. ಶೈಲಜ ಎಂ.ಸಿ. ಮತ್ತು ವಿಲ್‌ಫ್ರೆಡ್ ಡಿಸೋಜಾ, **ಪ್ರಜಾಪ್ರಭುತ್ವ ವಿಕೇಂದ್ರೀಕರಣ ಮತ್ತು ಅಭಿವೃದ್ಧಿ,** 2010.

44. ಚಂದ್ರಶೇಖರ್ ಕೆ., **ಅಭಿವೃದ್ಧಿ ಪಥದಲ್ಲಿ ಪಂಚಾಯತ್‌ರಾಜ್ ಸಂಸ್ಥೆಗಳು,** 2012.

45. ಪ್ರಶಾಂತ್ ಎಚ್.ಡಿ., "ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸದಸ್ಯರೊಂದಿಗೆ ಸಂವಾದ", ಅಭಿವೃದ್ಧಿ ಅಧ್ಯಯನ, ಸಂಪುಟ 4, ಸಂಚಿಕೆ 1, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2005

## ಅಧ್ಯಾಯ ಎರಡು

# ಸ್ಥಾಯಿಸಮಿತಿಗಳ ಬೆಳವಣಿಗೆ, ರಚನೆ ಅಧಿಕಾರ ಮತ್ತು ಕಾರ್ಯವಿಧಾನ

2.1. ಕರ್ನಾಟಕ ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಸ್ಥಾಯಿ ಸಮಿತಿಗಳ ಸ್ವರೂಪ ಮತ್ತು ಕಾರ್ಯವಿಧಾನ

2.2. ಭಾರತದಲ್ಲಿ ಸ್ಥಾಯಿಸಮಿತಿಗಳ ಬೆಳವಣಿಗೆ

2.3. ಕರ್ನಾಟಕ ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಸ್ಥಾಯಿ ಸಮಿತಿಗಳ ರಚನೆ

2.4. ಸ್ಥಾಯಿ ಸಮಿತಿಗಳು

2.5. ಉಪಸಮಿತಿ ಹಾಗೂ ಇತರೆ ಸಮಿತಿಗಳು

2.6. ಜಂಟಿ ಸಮಿತಿಗಳು

2.7. ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿಗಳ ರಚನೆ

2.8. ಜಿಲ್ಲಾ ಪಂಚಾಯಿತಿಯ ಸ್ಥಾಯಿಸಮಿತಿಗಳ ರಚನೆ

## ಅಧ್ಯಾಯ ಎರಡು

# ಸ್ಥಾಯಿಸಮಿತಿಗಳ ಬೆಳವಣಿಗೆ, ರಚನೆ ಅಧಿಕಾರ ಮತ್ತು ಕಾರ್ಯವಿಧಾನ

ಭಾರತ ಸಂವಿಧಾನದ 73ನೇ ತಿದ್ದುಪಡಿಯ ಮೂಲಕ ಗ್ರಾಮ ಪಂಚಾಯತಿ ವ್ಯವಸ್ಥೆಯಲ್ಲಿ ಮಹತ್ವದ ಬದಲಾವಣೆಗಳಾದವು. ಅವರು 1992 ಡಿಸೆಂಬರ್ 22 ರಂದು ಲೋಕಸಭೆಯಲ್ಲಿ ಮಸೂದೆಯನ್ನು ಮಂಡಿಸಿ ಡಿಸೆಂಬರ್ 23 ರಂದು ರಾಜ್ಯಸಭೆಯ ಅಂಗೀಕಾರ ನೀಡಿತು.[1] ದಿನಾಂಕ 24.04.1999ರಂದು ಈ ಕಾಯಿದೆಯು ಜಾರಿಗೆ ಬಂದಿತು. ದೇಶದ ಎಲ್ಲಾ ರಾಜ್ಯಗಳೂ ಪಂಚಾಯತ್‌ರಾಜ್ ಕಾಯ್ದೆಯನ್ನು ಅಳವಡಿಸಿಕೊಂಡವು. ಈ ಕಾಯ್ದೆಗೆ ಅನುಗುಣವಾಗಿ ಕರ್ನಾಟಕವೂ ಸಹ ಪಂಚಾಯತ್‌ರಾಜ್ ಅಧಿನಿಯಮವನ್ನು ವಿಧಾನಸಭೆಯಲ್ಲಿ 07.04.1993ರಂದು ವಿಧಾನ ಪರಿಷತ್‌ನಲ್ಲಿ 13.04.1993 ರಂದು ಅಂಗೀಕೃತವಾದ ನಂತರ 30.04.1993 ರಂದು ರಾಜ್ಯದಲ್ಲಿ ಜಾರಿಗೆ ಬಂದಿತು. ಇದನ್ನು 1993ರ ಕರ್ನಾಟಕ ಪಂಚಾಯತ್ ಅಧಿನಿಯಮ ಎಂದು ಜಾರಿಗೊಳಿಸಲಾಯಿತು.[2] ಈ ಕಾಯ್ದೆಯಿಂದ ಪಂಚಾಯತಿಗಳಲ್ಲಿ ನೇರವಾಗಿ ಸಾಮಾನ್ಯ ಜನರು ಮತ್ತು ಮಹಿಳೆಯರು ತಮ್ಮ ಹಿತಾಸಕ್ತಿಗಳನ್ನು ರಕ್ಷಿಸಿಕೊಂಡು ಬರಲು ಅವಕಾಶ ಕೊಡಲಾಗಿತ್ತು. ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಗ್ರಾಮಗಳ ಹಂತದಲ್ಲಿಯೇ ಸದೃಡಗೊಳಿಸಲು ಮತ್ತು ಅಧಿಕಾರ ವಿಕೇಂದ್ರಿಕರಣವನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವ ಉದ್ದೇಶ ಹೊಂದಿದೆ.

ಗ್ರಾಮ ಪಂಚಾಯತ್ ಆಡಳಿತದಲ್ಲಿ ಗ್ರಾಮಸ್ಥರು ಭಾಗವಹಿಸಲು ಅನುಕೂಲವಾಗುವ ದೃಷ್ಟಿಯಿಂದ ಅತ್ಯಂತ ಕೆಳಸ್ತರದ ಘಟಕವಾದ ಗ್ರಾಮಸಭೆಯ ರಚನೆಗೆ ಅವಕಾಶ ಮಾಡಿಕೊಟ್ಟಿದೆ. ಅದೇ ರೀತಿ ಗ್ರಾಮ ಪಂಚಾಯತಿಯಲ್ಲಿರುವ ಪ್ರತಿಯೊಬ್ಬ ಸದಸ್ಯನೂ ಪಂಚಾಯತಿ ಆಡಳಿತದಲ್ಲಿ ಭಾಗವಹಿಸಲು ಅನುಕೂಲವಾಗಲು ಹಾಗೂ ಸಾಮಾನ್ಯಸಭೆಗಳ ಕಾರ್ಯಭಾರವನ್ನು ಕಡಿಮೆ ಗೊಳಿಸುವ ಮೂಲಕ ಒಂದು ವಿಷಯದ ಕುರಿತು ಪರಿಣಾಮಕಾರಿಯಾದ ತೀರ್ಮಾನಗಳನ್ನು

ತೆಗೆದುಕೊಳ್ಳಲು ಮತ್ತು ಅಧಿಕಾರ ವಿಕೇಂದ್ರೀಕರಣಗೊಳಿಸಲು ಹಾಗೂ ಗ್ರಾಮೀಣ ಅಭಿವೃದ್ಧಿಗೆ ಸಹಾಯಕವಾಗುವ ದೃಷ್ಟಿಯಿಂದ ಪಂಚಾಯತಿಗಳಲ್ಲಿ ಸ್ಥಾಯಿ ಸಮಿತಿಗಳನ್ನು ರಚಿಸಿಕೊಳ್ಳಲು ಅವಕಾಶ ಮಾಡಿಕೊಡಲಾಗಿದೆ.

### 2.1. ಕರ್ನಾಟಕ ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಸ್ಥಾಯಿ ಸಮಿತಿಗಳ ಸ್ವರೂಪ ಮತ್ತು ಕಾರ್ಯವಿಧಾನ

ಭಾರತ ಸಂವಿಧಾನದ 73ನೇ ತಿದ್ದುಪಡಿ ಜಾರಿಗೆ ಬಂದ ಕೆಲವೇ ದಿನಗಳಲ್ಲಿ ಅದರಲ್ಲಿಯ ಎಲ್ಲಾ ಪ್ರಮುಖ ಅಂಶಗಳನ್ನು ಅಳವಡಿಸಿ 1993ರ ಮೇ 10ರಂದು ಕರ್ನಾಟಕ ಸರ್ಕಾರವು ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993 ಎಂಬ ಶಾಸನವನ್ನು ಜಾರಿಗೆ ತಂದಿತು.[3] ಈ ಅಧಿನಿಯಮ ಮೂರು ಹಂತದ ಪಂಚಾಯತ್ ವ್ಯವಸ್ಥೆಗೆ ಅವಕಾಶ ಮಾಡಿಕೊಟ್ಟಿದೆ.

ಕೆಳಸ್ತರದಲ್ಲಿ ಗ್ರಾಮ ಪಂಚಾಯತಿ, ಮಧ್ಯದಸ್ತರದಲ್ಲಿ ತಾಲ್ಲೂಕು ಪಂಚಾಯತಿ, ಮೇಲ್‌ಸ್ತರದಲ್ಲಿ ಜಿಲ್ಲಾ ಪಂಚಾಯಿತಿ.

**ಸ್ಥಾಯಿ ಸಮಿತಿಗಳು**

1993ರ ಅಧಿನಿಯಮ ಪಂಚಾಯತಿ ವ್ಯವಸ್ಥೆಯ ಮೂರು ಹಂತಗಳಲ್ಲಿ ವಿವಿಧ ಸ್ಥಾಯಿ ಸಮಿತಿಗಳನ್ನು ರಚಿಸಿಕೊಳ್ಳಲು ಅವಕಾಶ ನೀಡಿದೆ. ಏಕೆಂದರೆ ಪ್ರತಿ ಪಂಚಾಯಿತಿಯು ನಿರ್ದಿಷ್ಟ ವಿಷಯಗಳನ್ನು ಕೂಲಂಕಷವಾಗಿ ಚರ್ಚಿಸಿ ಅವುಗಳ ಸಾಧಕ ಬಾದಕಗಳನ್ನು ಪರಿಶೀಲಿಸಿ ಸೂಕ್ತ ನಿರ್ಣಯಗಳನ್ನು ತೆಗೆದುಕೊಳ್ಳಲು ಮತ್ತು ಆಯಾ ಪಂಚಾಯಿತಿಗೆ ವಹಿಸಿಕೊಟ್ಟಿರುವ ಕಾರ್ಯಗಳನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಮತ್ತು ಅಭಿವೃದ್ಧಿ ಕಾರ್ಯಗಳನ್ನು ಅನುಷ್ಠಾನಗೊಳಿಸಲು ಸಾಧ್ಯವಾಗಲಿ ಎಂಬ ಉದ್ದೇಶದಿಂದ ಮೂರು ಹಂತಗಳಲ್ಲಿ ವಿವಿಧ ಸ್ಥಾಯಿ ಸಮಿತಿಗಳನ್ನು ರಚಿಸಲು ಅವಕಾಶ ನೀಡಿದೆ. ಚುನಾಯಿತ ಸದಸ್ಯರು ಅನುಭವ ಮತ್ತು ಪರಿಣಿತಿಯನ್ನು ಅವಲಂಬಿಸಿ ಆಯಾ ಸ್ಥಾಯಿಸಮಿತಿಯ ಸದಸ್ಯರನ್ನಾಗಿ ಮಾಡುವುದರಿಂದ ಆಯಾ ವಿಷಯಗಳನ್ನು ವಿವರವಾಗಿ ಚರ್ಚಿಸಿ ಗುಣಾವಗುಣಗಳನ್ನು ವಿಮರ್ಶಿಸಿ ಸೂಕ್ತ ತೀರ್ಮಾನ ಕೈಗೊಂಡು ಜನಪರ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲು ಸಾಧ್ಯವಾಗುತ್ತದೆ. ಸಾಮಾನ್ಯವಾಗಿ ಸ್ಥಾಯಿ ಸಮಿತಿಗಳ ಸಭೆಗಳನ್ನು ಆಯಾ ಪಂಚಾಯಿತಿಯ ಕೇಂದ್ರ ಕಾರ್ಯಸ್ಥಾನದಲ್ಲಿ ನಡೆಸತಕ್ಕದ್ದು ಎಂದು ಹೇಳಲಾಗಿದೆ.

**ಸಮಿತಿಯ ಅರ್ಥ ಮತ್ತು ಮಹತ್ವ**

ಸಂಕ್ಷಿಪ್ತ ಕನ್ನಡ ನಿಘಂಟಿನ ಪ್ರಕಾರ ಸಮಿತಿ ಎಂದರೆ ಒಂದು ನಿರ್ದಿಷ್ಟ ಕಾರ್ಯಕ್ಕಾಗಿ ರಚಿತವಾದ 'ಸದಸ್ಯರನ್ನೊಳಗೊಂಡ ಮಂಡಳಿ' ಎಂದು ವ್ಯಾಖ್ಯಾನಿಸಿದೆ.[4]

ಅಮೆರಿಕನ್ ಹೆರಿಟೇಜ್ ಡಿಕ್ಷನರೀಸ್ ಪ್ರಕಾರ ಯಾವುದೇ ಒಂದು ವಿಷಯ ಅಥವಾ ಕಾರ್ಯಾಚರಣೆ ಬಗ್ಗೆ ತನಿಖೆ ನಡೆಸಿ ಕೂಲಂಕಷವಾಗಿ ಚರ್ಚಿಸಿ ಆ ವಿಷಯದ ಬಗ್ಗೆ ವರದಿ ತಯಾರಿಸುವ ಅಧಿಕಾರಬದ್ಧ ಪ್ರತಿನಿಧಿಗಳ ಸಮೂಹವೇ ಸಮಿತಿ ಎಂದು ವ್ಯಾಖ್ಯಾನಿಸಿದೆ.[5]

ಸಮಿತಿಗಳು ಪ್ರಪಂಚದ ವಿವಿಧ ದೇಶಗಳಲ್ಲಿ ಕೇಂದ್ರಮಟ್ಟದಲ್ಲಿ ಮತ್ತು ಸ್ಥಳೀಯ ಮಟ್ಟದಲ್ಲಿ ತಮ್ಮದೇ ಆದ ಸ್ವರೂಪ ಮತ್ತು ಅಧಿಕಾರವನ್ನು ಹೊಂದಿ ಕಾರ್ಯನಿರ್ವಹಿಸುತ್ತಿವೆ. ವಿವಿಧ ದೇಶಗಳು ಇತ್ತೀಚೆಗೆ ತಮ್ಮ ಸರ್ಕಾರ ಪದ್ಧತಿಯಲ್ಲಿ ಮಹತ್ವದ ಬದಲಾವಣೆಗಳನ್ನು ತಂದಿವೆ. ಪರಿಣಾಮವಾಗಿ ತಮ್ಮ ಸರ್ಕಾರಗಳ ಶಾಸಕಾಂಗಗಳು ಕಾನೂನು ರಚನೆ, ಕಾನೂನು ತಿದ್ದುಪಡಿ, ಸಾಮಾಜಿಕ, ಆರ್ಥಿಕ ಸಮಸ್ಯೆಗಳು ಮತ್ತು ಬೇಡಿಕೆಗಳ ಬಗ್ಗೆ ಜನರ ಯೋಗಕ್ಷೇಮದ ಬಗ್ಗೆ ಹೀಗೆ ಹಲವಾರು ಕೆಲಸ ಕಾರ್ಯಗಳನ್ನು ನಿರ್ವಹಿಸಬೇಕಾಗಿ ಬಂದಿದ್ದರಿಂದ ಆಧುನಿಕ ಸರ್ಕಾರಗಳ ಕಾರ್ಯಭಾರದ ವ್ಯಾಪ್ತಿ ವಿಶಾಲವಾಯಿತು. ಹೀಗೆ ಶಾಸಕಾಂಗಕ್ಕೆ ಕೆಲಸದ ಒತ್ತಡ ಹೆಚ್ಚಾಯಿತು. ಶಾಸಕಾಂಗದ ಸಾಮಾನ್ಯ ಸಭೆಗಳಲ್ಲಿ ಎಲ್ಲಾ ವಿಷಯಗಳ ಬೇಡಿಕೆಗಳ ಬಗ್ಗೆ ಚರ್ಚಿಸಲು ಸಮಯ ಸಿಗುತ್ತಿರಲಿಲ್ಲ ಮತ್ತು ನಿರ್ದಿಷ್ಟ ಸಮಸ್ಯೆಗಳ ಬಗ್ಗೆ ವಿಶೇಷ ಜ್ಞಾನದ ಕೊರತೆ ಇರುತ್ತಿತ್ತು. ಇಂತಹ ಸಮಸ್ಯೆಗಳ ಬಗ್ಗೆ ತೀರ್ಮಾನ ತೆಗೆದುಕೊಳ್ಳಲು ಸುಲಭವಾಗಿ ಸಾಧ್ಯವಾಗುತ್ತಿರಲಿಲ್ಲ. ಆದ್ದರಿಂದ ಪರಿಣಾಮಕಾರಿಯಾದ ಆಡಳಿತ ವ್ಯವಸ್ಥೆಗೆ ಸಹಾಯಕವಾಗಲೆಂದು ಶಾಸಕಾಂಗಗಳಲ್ಲಿ ಸಮಿತಿಗಳನ್ನು ರಚಿಸಿ ಒಂದೊಂದು ಸಮಿತಿಗೂ ನಿರ್ದಿಷ್ಟ ಕೆಲಸ ಕಾರ್ಯಗಳನ್ನು ನಿಗದಿಪಡಿಸಲಾಯಿತು.

ಮೊದಲನೆಯದಾಗಿ ಸಮಿತಿಗಳನ್ನು ರಚಿಸಿರುವುದರಿಂದ ಸಾಮಾನ್ಯ ಸಭೆಯಲ್ಲಿ ಅತಿ ಮುಖ್ಯ ವಿಷಯಗಳ ಬಗ್ಗೆ ಚರ್ಚಿಸಿ ಅದರ ಬಗ್ಗೆ ಸೂಕ್ತ ತೀರ್ಮಾನ ಕೈಗೊಳ್ಳಲು ಸಮಯಾವಕಾಶ ಸಿಗುತ್ತದೆ. ಎರಡನೆಯದಾಗಿ ಒಂದು ಸಮಸ್ಯೆಯನ್ನು ಪರಿಹರಿಸಲು ಆ ವಿಷಯಕ್ಕೆ ಸಂಬಂಧಿಸಿದಂತೆ ಹೆಚ್ಚು ಪರಿಣತಿ ಹೊಂದಿದವರನ್ನು ಒಗ್ಗೂಡಿಸಿ ಒಂದು ಸಮಿತಿ ರಚಿಸಿರುವುದರಿಂದ ಆ ಸಮಸ್ಯೆಯ ಬಗ್ಗೆ ಹೆಚ್ಚು ಸೂಕ್ತವಾದ ಮತ್ತು ತ್ವರಿತವಾದ ತೀರ್ಮಾನವನ್ನು ಕೈಗೊಳ್ಳಲು ಸಹಾಯಕವಾಗುತ್ತದೆ. ಮೂರನೆಯದಾಗಿ ಸಮಿತಿಗಳನ್ನು ರಚಿಸುವುದರಿಂದ ಸಾರ್ವಜನಿಕ ವಿಷಯಗಳಿಗೆ ಸಂಬಂಧಿಸಿದ ದಾಖಲೆಗಳನ್ನು ಪರೀಕ್ಷಿಸಲು ಮತ್ತು ಅವುಗಳನ್ನು ನಿರ್ವಹಿಸಲು ಸಹಾಯಕವಾಗುತ್ತದೆ. ನಾಲ್ಕನೆಯದಾಗಿ ಸಮಿತಿಗಳನ್ನು ರಚಿಸುವುದರಿಂದ ಹೆಚ್ಚು ಹೆಚ್ಚು ಕೆಲಸ ಕಾರ್ಯಗಳನ್ನು ನಿರ್ವಹಿಸಲು ಮತ್ತು ಹೆಚ್ಚು ಸಮಸ್ಯೆಗಳನ್ನು ಪರಿಹರಿಸಲು ಸಾಧ್ಯವಾಗುತ್ತದೆ.

ಬ್ರಿಟನ್ ಅಮೆರಿಕ ಮುಂತಾದ ಪ್ರಪಂಚದ ಅನೇಕ ದೇಶಗಳು ತಮ್ಮ ಶಾಸಕಾಂಗಗಳಲ್ಲಿ ಈ ಸಮಿತಿ ವ್ಯವಸ್ಥೆಯನ್ನು ಅಳವಡಿಸಿಕೊಂಡಿವೆ. ಈ ಸಮಿತಿಗಳ ಮೂಲವನ್ನು ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಪ್ರಾಚೀನ ಕಾಲದಲ್ಲಿಯೇ ಇದ್ದವು ಎಂದು ಗುರುತಿಸಲಾಗಿದೆ.[6] 1340ರಲ್ಲಿ

ಆಳ್ವಿಕೆ ನಡೆಸುತ್ತಿದ್ದ ರಾಣಿ ಎಲಿಜಬತ್ ತಮ್ಮ ಶಾಸಕಾಂಗದಲ್ಲಿ ಶ್ರೀಮಂತ ಮತ್ತು ಸಾಮಾನ್ಯ ಪ್ರತಿನಿಧಿಗಳನ್ನು ಸೇರಿಸಿ ಒಂದು ಜಂಟಿ ಸಮಿತಿಯನ್ನು ರಚಿಸಿದ್ದಳು. ಇವರನ್ನು ಚುನಾವಣೆಯ ಮೂಲಕ ಆಯ್ಕೆ ಮಾಡಲಾಗುತ್ತಿತ್ತು. ನಂತರ ಜೇಮ್ಸ್ ದೊರೆ ಈ ಸಮಿತಿ ವ್ಯವಸ್ಥೆಗೆ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟನು. ಸಾಮಾನ್ಯ ಸಭೆಯಲ್ಲಿ ಕಮಿಟಿ ಆಫ್ ದ ಹೋಲ್‌ನ್ನು ಮೊದಲ ಬಾರಿಗೆ ಬಳಸಿಕೊಂಡನು. ಆದರೆ ಶಾಸಕಾಂಗದ ಸಮಿತಿಗಳು(ಪಾರ್ಲಿಮೆಂಟರಿ ಕಮಿಟಿಗಳು) ವ್ಯವಸ್ಥಿತವಾದ ರೀತಿಯಲ್ಲಿ ಬ್ರಿಟಿಷ್ ಶಾಸಕಾಂಗದಲ್ಲಿ ಪ್ರಥಮ ಬಾರಿಗೆ 1517ರಲ್ಲಿ ರಚನೆಯಾದವು. ಆದ್ದರಿಂದ ಪಾರ್ಲಿಮೆಂಟರಿ ಕಮಿಟಿಗಳು ಉಗಮವಾದದ್ದು ಬ್ರಿಟಿಷ್ ಶಾಸಕಾಂಗದಲ್ಲಿ ಎಂದು ಗುರುತಿಸಲಾಗಿದೆ.[7] ಭಾರತವು ಸಹ ಶಾಸಕಾಂಗದಲ್ಲಿ ಸಮಿತಿ ವ್ಯವಸ್ಥೆ ಹೊಂದಿದೆ. ಸಮಿತಿಗಳನ್ನು ಕೇವಲ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಲ್ಲಿ ಮಾತ್ರವಲ್ಲದೆ ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಕೂಡ ಅಳವಡಿಸಲಾಗಿದೆ.

## 2.2. ಭಾರತದಲ್ಲಿ ಸ್ಥಾಯಿಸಮಿತಿಗಳ ಬೆಳವಣಿಗೆ

ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಸ್ಥಳೀಯ ಸಂಸ್ಥೆಗಳ ಜೊತೆಗೆ ಸ್ಥಾಯಿ ಸಮಿತಿಗಳು ಬೆಳೆದು ಬಂದಿದ್ದು ಅಂದಿನ ಗ್ರಾಮಗಳಿಗೆ ಬಹುಮಟ್ಟಿನ ಸ್ವಾಯತ್ತತೆ ಇತ್ತು ಎಂಬುದು ಕಂಡುಬಂದಿದೆ. ಇವುಗಳು ಪ್ರಜಾಸತ್ತಾತ್ಮಕ ಆಡಳಿತ ವ್ಯವಸ್ಥೆ ಹೊಂದಿದ್ದು ಚಿಕ್ಕ ಗಣರಾಜ್ಯಗಳಂತೆ ಕಾರ್ಯನಿರ್ವಹಿಸುತ್ತಿದ್ದವು.[8] ಇದರಿಂದ ನಾವು ಗ್ರಾಮ ಪಂಚಾಯತಿಯ ಮತ್ತು ಸ್ಥಾಯಿ ಸಮಿತಿಗಳ ಅಸ್ತಿತ್ವವನ್ನು ಪ್ರಾಚೀನ ಕಾಲದಲ್ಲಿಯೂ ಗುರುತಿಸಬಹುದಾಗಿದೆ. 10ನೇ ಶತಮಾನದಲ್ಲಿ ಬರೆಯಲಾಗಿದ್ದ ಶುಕ್ರನೀತಿ ಸಾರದ ಬಗ್ಗೆ ವಿವರಗಳನ್ನು ಜವಾಹರ್‌ಲಾಲ್ ನೆಹರು ಅವರು ತಮ್ಮ ದಿ ಡಿಸ್ಕವರಿ ಆಫ್ ಇಂಡಿಯಾ ಪುಸ್ತಕದಲ್ಲಿ ಬರೆದಿದ್ದಾರೆ. ಈ ಪುಸ್ತಕದಲ್ಲಿ ಸ್ಥಳೀಯ ಸರ್ಕಾರಗಳ ರಚನೆ ಬಗ್ಗೆ ಹೇಳಲಾಗಿದೆ.[9] ಗ್ರಾಮಮಟ್ಟದಲ್ಲಿ ಜನರಿಂದ ಚುನಾಯಿತವಾದ ಪಂಚಾಯತಿಯಿದ್ದು ಈ ಪಂಚಾಯತಿಗೆ ಕಾರ್ಯಾಂಗ ಮತ್ತು ನ್ಯಾಯಾಂಗಕ್ಕೆ ಸಂಬಂಧಿಸಿದಂತೆ ಎರಡೂ ತರಹದ ಅಧಿಕಾರಗಳಿದ್ದವು ಎಂದು ಹೇಳಲಾಗಿದೆ. ರಾಜನಿಗಿಂತ ಜನಾಭಿಪ್ರಾಯವೇ ಶಕ್ತಿಯುತವಾಗಿದ್ದು ಮಹಿಳೆಯರೂ ಸಹ ಪಂಚಾಯತಿಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಚುನಾವಣೆಗಳು ಪ್ರತಿ ವರ್ಷ ನಡೆಯುತ್ತಿದ್ದವು ಮತ್ತು ಹಲವಾರು ಸಮಿತಿಗಳನ್ನು ಸಹ ರಚಿಸಲಾಗುತ್ತಿತ್ತು ಎಂದು ಇತಿಹಾಸದಿಂದ ತಿಳಿಯಬಹುದಾಗಿದೆ.[10]

ಎಲ್ಲಾ ಗ್ರಾಮಗಳಲ್ಲಿಯೂ ಮಹಾಸಭಾ ಎಂಬ ಸಭೆಗಳಿದ್ದು, ಗ್ರಾಮದ ವಿವಿಧ ಆಡಳಿತವನ್ನು ನೋಡಿಕೊಳ್ಳಲು ಪ್ರತ್ಯೇಕ ಸಮಿತಿಗಳಿದ್ದವು ಎಂದು ಪಲ್ಲವರ ಶಾಸನಗಳಿಂದ ಕಂಡುಬಂದಿದೆ. ಸಭೆಗಳು ತೆರಿಗೆ ಸಂಗ್ರಹಿಸಿ ಕೇಂದ್ರ ಸರ್ಕಾರಕ್ಕೆ ಕಳುಹಿಸುವುದು. ದೇವಾಲಯ, ಕೆರೆ, ಗೋಮಾಳ

ಮತ್ತು ಅರಣ್ಯಗಳ ಮೇಲ್ವಿಚಾರಣೆ ಮಾಡುವುದು ಮುಂತಾದ ಕೆಲಸಗಳನ್ನು ನಿರ್ವಹಿಸುತ್ತಿತ್ತು. ಭೋಜಕ ಎಂಬುವವನು ಗ್ರಾಮಾಡಳಿತವನ್ನು ಮಾಡುತ್ತಿದ್ದನು. ಗ್ರಾಮಸಭೆಯ ಸದಸ್ಯರನ್ನು ಪೆರುಮಕ್ಕಳ್ ಎಂಬ ಹೆಸರಿನಿಂದ ಕರೆಯಲಾಗುತ್ತಿತ್ತು. ದೇವಾಲಯಗಳ ಮೇಲ್ವಿಚಾರಣೆಯನ್ನು ಅಮೃತಗಣ ಎಂಬ ಸಂಸ್ಥೆ ನೋಡಿಕೊಳ್ಳುತ್ತಿದ್ದು. ಇದು ಗ್ರಾಮದ ಚುನಾಯಿತ ಸದಸ್ಯರಿಂದ ಕೂಡಿರುತ್ತಿತ್ತು ಎಂದು ಪಲ್ಲವರ ಅನೇಕ ಶಾಸನಗಳಿಂದ ತಿಳಿದುಬರುತ್ತದೆ.[11]

ಭಾರತವು ಸ್ವಾತಂತ್ರ್ಯಗಳಿಸಿದ ನಂತರ ತನ್ನ ಸಂವಿಧಾನದ 4ನೇ ಭಾಗದ 40ನೇ ಪರಿಚ್ಛೇದಕ್ಕೆ ಸೇರಿಸುವುದರ ಮೂಲಕ ಪಂಚಾಯತಿಗಳಿಗೆ ಸಂವಿಧಾನದಲ್ಲಿ ಮಹತ್ತರ ಸ್ಥಾನ ಕಲ್ಪಿಸಿಕೊಟ್ಟಿತು.[12] ಸಂವಿಧಾನದ ಪ್ರಕಾರ ರಾಜ್ಯಗಳು ಗ್ರಾಮ ಪಂಚಾಯಿತಿಗಳನ್ನು ಒಗ್ಗೂಡಿಸಿ ಅವುಗಳಿಗೆ ಬೇಕಾದ ಅಧಿಕಾರ ನೀಡಿ ಅವುಗಳು ಸ್ಥಳೀಯ ಸರ್ಕಾರದ ಒಂದು ಘಟಕವಾಗಿ ಕೆಲಸ ನಿರ್ವಹಿಸುವಂತೆ ಮಾಡಲು ಸೂಚಿಸಲಾಗಿದೆ. ಆದರೆ ಇಂತಹ ಮಹತ್ವದ ವಿಷಯವನ್ನು ರಾಜ್ಯ ನಿರ್ದೇಶಕ ತತ್ವಗಳಲ್ಲಿ ಸೇರಿಸಿದ್ದರಿಂದ ಯಾವುದೆ ರಾಜ್ಯವೂ ಸಹ ಇದರ ಬಗ್ಗೆ ಹೆಚ್ಚು ಆಸಕ್ತಿ ವಹಿಸಲಿಲ್ಲ. ಇದರಿಂದ ಗ್ರಾಮಪಂಚಾಯಿತಿಗಳು ಪರಿಣಾಮಕಾರಿಯಾಗಿ ಜಾರಿಗೆ ಬರುವಲ್ಲಿ ವಿಫಲವಾದವು.

ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಕೆಳಸಮುದಾಯಗಳ ಸಬಲೀಕರಣ ಬಹಳ ಮುಖ್ಯ ಕಾರಣ ಒಟ್ಟು ಜನಸಂಖ್ಯೆಯಲ್ಲಿ ಶೇ.50ರಷ್ಟಿರುವ ಈ ಕೆಳಸಮುದಾಯಗಳ ಅಭಿವೃದ್ಧಿ ಇಡೀ ದೇಶದ ಅಭಿವೃದ್ಧಿಯನ್ನು ಅವಲಂಬಿಸಿರುತ್ತದೆ. ಈ ಹಿನ್ನೆಲೆಯಲ್ಲಿ ಕೆಳಸಮುದಾಯಗಳ ರಾಜಕೀಯ ಭಾಗವಹಿಸುವಿಕೆ ಬಹಳ ಮುಖ್ಯವೆನಿಸುತ್ತದೆ. ಭಾರತ ಸ್ವಾತಂತ್ರ್ಯ ಪಡೆದ ನಂತರ ಗ್ರಾಮೀಣಾಭಿವೃದ್ಧಿಗಾಗಿ ಮತ್ತು ನಾಗರಿಕರ ಮೂಲಭೂತ ಅಗತ್ಯತೆಗಳನ್ನು ಪೂರೈಸುವ ಸಲುವಾಗಿ ಸಮುದಾಯ ಅಭಿವೃದ್ಧಿ ಯೋಜನೆಗಳು ಮತ್ತು ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೆ ತರಲಾಯಿತು. ಈ ಕಾರ್ಯಕ್ರಮಗಳ ಉದ್ದೇಶ ಗ್ರಾಮಗಳ ಅಭಿವೃದ್ಧಿ, ಮಾನವನ ಮೂಲಭೂತ ಅಗತ್ಯಗಳ ಪೂರೈಕೆ ಮತ್ತು ಸಾಮಾಜಿಕ ಪರಿವರ್ತನೆಯಾಗಿತ್ತು.[13] ಆದರೆ ಈ ಯೋಜನೆಗಳು ನಿರೀಕ್ಷಿತ ಫಲವನ್ನು ನೀಡಲಿಲ್ಲ. ಪರಿಣಾಮವಾಗಿ ಗ್ರಾಮಗಳ ಅಭಿವೃದ್ಧಿಗಾಗಿ ತಳಮಟ್ಟದಲ್ಲಿ ಪರಿಣಾಮಕಾರಿಯಾದ ಚುನಾಯಿತ ಸಂಸ್ಥೆಗಳ ಅಗತ್ಯದ ದೃಷ್ಟಿಯಿಂದ ಪಂಚಾಯತ್‌ರಾಜ್ ಸಂಸ್ಥೆಗಳನ್ನು ಬಲಪಡಿಸಲು ಕೇಂದ್ರ ಸರ್ಕಾರ 1957ರಲ್ಲಿ ಬಲವಂತರಾಯ್ ಮೆಹ್ತಾ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ನೇಮಕ ಮಾಡಿತು. ಈ ಸಮಿತಿ ಕೆಲವು ದೋಷಗಳನ್ನು ಪಟ್ಟಿ ಮಾಡಿತು. ಗ್ರಾಮಗಳ ಆಡಳಿತ ಇನ್ನೂ ಊಳಿಗಮಾನ್ಯ ವ್ಯವಸ್ಥೆಯಿಂದ ಕೂಡಿದೆ, ಸರ್ಕಾರ ಜಾರಿಗೆ ತಂದ ಅಭಿವೃದ್ಧಿ ಕಾರ್ಯಕ್ರಮಗಳ ಲಾಭಗಳು ಸ್ಥಳೀಯ ಮೇಲ್ವರ್ಗಗಳ ಮೂಲಕವೇ ಹಾದು ಹೋಗಬೇಕಾಗಿದೆ ಮತ್ತು ಯೋಜನೆಯ ಫಲಗಳು ಬಡವರಿಗೆ ತಲುಪುತ್ತಿಲ್ಲ.

ಬಲವಂತ್‌ರಾಯ್ ಮೆಹ್ತಾ ಕಮಿಟಿಯ ಸಿದ್ಧಾಂತಗಳಿಂದ ಪ್ರಭಾವಿತಗೊಂಡು ಮೈಸೂರು ಸರ್ಕಾರವು ಮೈಸೂರು ವಿಲೇಜ್ ಪಂಚಾಯತ್ ಮತ್ತು ಡಿಸ್ಟ್ರಿಕ್ಟ್ ಬೋರ್ಡ್ ಆಕ್ಟ್‌ನ್ನು 1959ರಲ್ಲಿ ಜಾರಿ ಗೊಳಿಸಿತು.[14] ಇದರ ಪ್ರಕಾರ ರಾಜ್ಯದಲ್ಲಿ ಮೂರು ಹಂತಗಳ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಜಾರಿಗೊಳಿಸಿತು.

ಇದರ ಜೊತೆಗೆ ಸ್ಥಾಯಿಸಮಿತಿಗಳ ರಚನೆಗೂ ಸಹ ಅವಕಾಶವನ್ನು ಕಲ್ಪಿಸಿಕೊಡಲಾಗಿತ್ತು. ಆ ಸಮಿತಿಗಳೆಂದರೆ.

1. ಒಕ್ಕಲುತನ ಸಮಿತಿ
2. ಆರೋಗ್ಯ ಸಮಿತಿ
3. ಗ್ರಾಮೊದ್ಯೋಗ ಸಮಿತಿ

ಇವುಗಳು ಕಾಯಿದೆಯಲ್ಲಿ ಹೆಸರಿಸಿರುವ ಸಮಿತಿಗಳಾಗಿವೆ. ಇವುಗಳನ್ನು ಚುನಾವಣೆಯ ಮೂಲಕ ರಚಿಸಬೇಕು ಎಂದು ಹೇಳಲಾಗಿದೆ. ಆದರೆ 1959ರಲ್ಲಿ ಜಾರಿಗೆ ಬಂದ ಪಂಚಾಯತಿಗಳು ನಿರೀಕ್ಷಿತ ಮಟ್ಟದಲ್ಲಿ ಯಶಸ್ವಿಯಾಗಲಿಲ್ಲ. ನಂತರ 1962ರಲ್ಲಿ ಕೊಂಡಜ್ಜಿ ಬಸಪ್ಪ ಸಮಿತಿ ನೇಮಿಸಲಾಯಿತು.[14] ಇಲ್ಲಿ ಸ್ಥಾಯಿಸಮಿತಿಗಳಿಗೆ ಅವಕಾಶ ಕಲ್ಪಿಸಲಾಯಿತು.

ಹಾಗಾಗಿ ಮೂರು ಹಂತದ ಪಂಚಾಯತ್‌ರಾಜ್ ಪದ್ಧತಿಯನ್ನು ಜಾರಿಗೆ ತರುವಂತೆ ಶಿಫಾರಸ್ಸು ಮಾಡಿತು. ಈ ಸಂಸ್ಥೆಗಳ ಮೂಲಕ ಅಭಿವೃದ್ಧಿ ಯೋಜನೆಗಳು ಜನತೆಗೆ ತಲಪಬೇಕು ಎಂದು ಸಮಿತಿ ಹೇಳಿತು. ಆಗ ದೇಶದ್ಯಾಂತ ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆ ಜಾರಿಗೆ ಬಂದಿತು. ಈ ಸಂಸ್ಥೆಗಳ ಮೂಲಕ ಗ್ರಾಮೀಣಾಭಿವೃದ್ಧಿ ಮತ್ತು ಗ್ರಾಮೀಣ ಜನರ ಮೂಲಭೂತ ಅಗತ್ಯಗಳನ್ನು ಪೂರೈಸುವ ಜವಾಬ್ದಾರಿಯನ್ನು ನೀಡಲಾಯಿತು. ಅದರೂ ಸಹ ಈ ಸಂಸ್ಥೆಗಳು ಸರಿಯಾಗಿ ನಿರ್ವಹಿಸಲಿಲ್ಲ. ಸುಮಾರು ಸಂಸ್ಥೆಗಳು ಭಾರತದಲ್ಲಿ ಇಪ್ಪತ್ತು ವರ್ಷಗಳ ಕಾಲ ಕಾರ್ಯ ನಿರ್ವಹಿಸಿದವು.

ಕೇಂದ್ರದಲ್ಲಿ ಬಂದ ಕಾಂಗ್ರೆಸೇತರ ಸರ್ಕಾರ ಪುನಃ ಈ ಸಂಸ್ಥೆಗಳನ್ನು ಬಲಪಡಿಸಲು ಅಶೋಕ ಮೆಹ್ತಾ ಅವರ ಅಧ್ಯಕ್ಷತೆಯಲ್ಲಿ ಸಮಿತಿ 1977ರಲ್ಲಿ ನೇಮಕ ಮಾಡಿತು.[15] ಸಮಿತಿಯು ದೇಶದ್ಯಾಂತ ಸಮೀಕ್ಷೆ ನಡೆಸಿ ಈ ಸಮಿತಿ ಎರಡು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ತರಲು ಶಿಫಾರಸ್ಸು ಮಾಡಿತು. ಪಂಚಾಯತ್ ಸಂಸ್ಥೆಗಳಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸಾಕಷ್ಟು ಅನುದಾನಗಳನ್ನು ಒದಗಿಸಬೇಕೆಂದು ಸಮಿತಿ ಹೇಳಿತು. ಈ ಶಿಫಾರಸ್ಸುಗಳನ್ನು ಇಟ್ಟುಕೊಂಡು

ದೇಶದಲ್ಲಿ ಎರಡು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಜಾರಿಗೆ ತರಲಾಯಿತು. 1983ರಲ್ಲಿ ಕರ್ನಾಟಕದಲ್ಲಿ ಎರಡು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಜಾರಿಗೆ ತರಲಾಯಿತು.[16]

ಈ ಸಮಿತಿಯು ಆಗಸ್ಟ್ 1978ರಲ್ಲಿ 301 ಪುಟದ 132 ವಿಷಯಗಳಿಗೆ ಸಲಹೆ ಮತ್ತು ಸೂಚನೆಗಳನ್ನು ನೀಡಿತು. ಇದು ಎರಡು ಹಂತಗಳ ಪಂಚಾಯತ್‌ರಾಜ್ ವ್ಯವಸ್ಥೆ ಇರಬೇಕು. ಜಿಲ್ಲೆಯಲ್ಲಿ ಜಿಲ್ಲಾ ಪರಿಷತ್, ಗ್ರಾಮಗಳಲ್ಲಿ ಮಂಡಲ ಪಂಚಾಯಿತಿಗಳು ಇರಬೇಕು ಎಂದು ಹೇಳಿತು. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದವರಿಗೆ ಮತ್ತು ಮಹಿಳೆಯರಿಗೆ ಮೀಸಲಾತಿ ಇರಬೇಕು. ಗ್ರಾಮ ಸಭೆಗಳನ್ನು ಜಾರಿಗೆ ತರಬೇಕು, ಮಂಡಲ ಪಂಚಾಯಿತಿಗಳಲ್ಲಿ ಸಮಿತಿಗಳನ್ನು ರಚಿಸಬೇಕು, ಎಲ್ಲಾ ಮಹಿಳಾ ಸದಸ್ಯರುಗಳನ್ನೊಳಗೊಂಡಂತೆ ಮಂಡಲ್ ಪಂಚಾಯಿತಿಗಳಲ್ಲಿ ಒಂದು ಪ್ರತ್ಯೇಕ ಸಮಿತಿಯನ್ನು ರಚಿಸಬೇಕು.[17] ಇದರಿಂದ ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಕಾರ್ಯಕ್ರಮಗಳನ್ನು ನಿರ್ವಹಿಸಲು ಅನುಕೂಲವಾಗುತ್ತದೆ ಎಂದು ಹೇಳಿತು.

ಇಡೀ ದೇಶದಲ್ಲಿ ಏಕರೂಪ ಪಂಚಾಯತ್‌ರಾಜ್ ವ್ಯವಸ್ಥೆ ಮತ್ತು ಈ ಸಂಸ್ಥೆಗಳಿಗೆ ಸಾಂವಿಧಾನಿಕ ಸ್ಥಾನಮಾನಗಳನ್ನು ನೀಡುವ ದೃಷ್ಟಿಯಿಂದ 1992ರಲ್ಲಿ ಕೇಂದ್ರದಲ್ಲಿರುವ ಕಾಂಗ್ರೆಸ್ ಸರ್ಕಾರ ಸಂವಿಧಾನದ 73 ಮತ್ತು 74ನೇ ತಿದ್ದುಪಡಿಯನ್ನು ತರಲಾಯಿತು.[18] ಆಗ ಪುನಃ ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ದೇಶದ್ಯಾಂತ ಜಾರಿಗೊಳಿಸಿತು. 1993ರಲ್ಲಿ 73ನೇ ತಿದ್ದುಪಡಿಯ ಅಂಶಗಳನ್ನು ಇಟ್ಟುಕೊಂಡು ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆ 1993ರನ್ನು ಜಾರಿಗೆ ತಂದಿತು. ಈ ಕಾಯ್ದೆಯ ಹಿನ್ನೆಲೆಯಲ್ಲಿ ಪಂಚಾಯತ್ ಸಂಸ್ಥೆಗಳು ಸಾಂವಿಧಾನಿಕ ಸ್ಥಾನ ಪಡೆದಿವೆ. ಆಧುನಿಕ ಪಂಚಾಯತಿಗಳಾಗಿವೆ. ಇಂದು ಪಂಚಾಯತ್ ಸಂಸ್ಥೆಗಳು ಹೆಚ್ಚು ಅಧಿಕಾರವನ್ನು ಪಡೆದಿವೆ. ಗ್ರಾಮ ಮಟ್ಟದಲ್ಲಿ ಗ್ರಾಮ ಪಂಚಾಯತಿಗಳು, ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಪಂಚಾಯಿತಿಗಳು ಮತ್ತು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪಂಚಾಯಿತಿಗಳನ್ನು ಸ್ಥಾಪಿಸಲಾಗಿದೆ.[19]

1993ರ ಕಾಯ್ದೆಯ ಮುಖ್ಯಾಂಶಗಳು ಇಂತಿವೆ.

1. ಜನತೆಗೆ ಅಧಿಕಾರ
2. ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆ
3. ಪರಿಶಿಷ್ಟಜಾತಿ/ಪಂಗಡದವರಿಗೆ ಮೀಸಲಾತಿ
4. ಮಹಿಳೆಯರಿಗೆ ಶೇ.33.33ರಷ್ಟು ಮೀಸಲಾತಿ
5. ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಂದ ಸಾಕಷ್ಟು ಅನುದಾನಗಳು
6. ಗ್ರಾಮಸಭೆಯ ಸಂಘಟನೆ

7. 29 ಗ್ರಾಮೀಣಾಭಿವೃದ್ಧಿ ಅಂಶಗಳ ಜಾರಿ

8. ಜಿಲ್ಲಾ ಯೋಜನಾಸಮಿತಿಗಳ ರಚನೆ

9. ಸ್ಥಳೀಯ ಸಂಪನ್ಮೂಲ ಕ್ರೋಡೀಕರಣ

10. ಪ್ರತ್ಯೇಕ ಚುನಾವಣಾ ಆಯೋಗ

11. ಪ್ರತ್ಯೇಕ ಹಣಕಾಸು ಆಯೋಗ

ಈ ಮುಖ್ಯಾಂಶಗಳೊಂದಿಗೆ ಪಂಚಾಯತ್ ಸಂಸ್ಥೆಗಳನ್ನು ಬಲಪಡಿಸಲಾಗಿದೆ. ಹೀಗೆ ಭಾರತದಲ್ಲಿ ಸ್ವಾತಂತ್ರ್ಯಾನಂತರ ಪಂಚಾಯತ್‌ರಾಜ್ ಸಂಸ್ಥೆಗಳು ಹೇಗೆ ಜಾರಿಗೆ ಬಂದವು. ಹೀಗೆ ಒಂದು ಕಡೆ ಪಂಚಾಯತ್‌ರಾಜ್ ಸಂಸ್ಥೆಗಳು, ಇನ್ನೊಂದು ಕಡೆ ಕೆಳಸಮುದಾಯಗಳ ಸಬಲೀಕರಣಕ್ಕಾಗಿ ಕಳೆದ 15 ವರ್ಷಗಳಿಂದ ಮೀಸಲಾತಿಯನ್ನು ಈ ಸಂಸ್ಥೆಗಳಲ್ಲಿ ಪಡೆಯಲಾಗಿದೆ. ನಿಜಕ್ಕೂ ಈ ಮೀಸಲಾತಿಯಿಂದ ಕೆಳಸಮುದಾಯಗಳ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಪರಿವರ್ತನೆ ಆಗಿದೆಯೇ ಎಂಬ ಪ್ರಶ್ನೆ ಮುಖ್ಯವಾಗಿದ್ದು, ಇದನ್ನು ಪ್ರಸ್ತುತ ಅಧ್ಯಯನದಲ್ಲಿ ಗುರುತಿಸಲಾಗಿದೆ.

ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಕೈಗೊಳ್ಳಲಾಗುತ್ತಿರುವ ಆಡಳಿತದಲ್ಲಿನ ಸಾಂಸ್ಥಿಕ ಸುಧಾರಣೆಗಳಲ್ಲಿ ವಿಕೇಂದ್ರೀಕರಣವೂ ಸಹ ಒಂದಾಗಿದೆ. ಇದು ಈ ರಾಷ್ಟ್ರಗಳಲ್ಲಿ ಹೆಚ್ಚಿನ ಮಟ್ಟದ ಪ್ರಜಾಪ್ರಭುತ್ವೀಕರಣ ಮತ್ತು ಪರಿಣಾಮಕಾರಿ ಆಡಳಿತಕ್ಕೆ ಇನ್ನೂ ಹೆಚ್ಚಿನ ಕೊಡುಗೆ ನೀಡಬಹುದು ಎಂದೇ ಭಾವಿಸಲಾಗಿದೆ. ಗವರ್ನೆನ್ಸ್ ಎಂಬ ಪದವೇ ಸೂಚಿಸುವಂತೆ ಇದು ಸಮಾಜದಲ್ಲಿನ ವಿಭಿನ್ನ ಕ್ಷೇತ್ರ ಮತ್ತು ವರ್ಗದ ಜನತೆಗೆ ಸಂಬಂಧಿಸಿದ ವಿಷಯಗಳಲ್ಲಿ ಸಕಾರಾತ್ಮಕ ಫಲಿತಾಂಶ ಪಡೆಯಲು ನಡೆಸುವ ಪ್ರಕ್ರಿಯೆಯಾಗಿದೆ. ಈ ಪ್ರಕ್ರಿಯೆಯಲ್ಲಿ ವಿಭಿನ್ನ ಸ್ತರದ ಸರ್ಕಾರಗಳು, ಖಾಸಗಿ ಕ್ಷೇತ್ರ, ಸರ್ಕಾರೇತರ ಸಂಘಟನೆಗಳು ಹಾಗೂ ಸಾಮಾನ್ಯ ಜನರು ತಮ್ಮದೇ ಆದ ಪಾತ್ರಗಳನ್ನು ಹೊಂದಿರುತ್ತಾರೆ. ಹೀಗೆ ವಿಕೇಂದ್ರಿಕರಣವನ್ನು ಒಳ್ಳೆಯ ಆಡಳಿತವನ್ನು ಸಾಧಿಸಲು ಈ ರೀತಿಯ ಸಮತೋಲನವನ್ನು ತರುವ ಒಂದು ಸಾಧನವಾಗಿಯೇ ಇಂದು ಭಾವಿಸಲಾಗಿದೆ.[20] ಅಭಿವೃದ್ಧಿಶೀಲ ರಾಷ್ಟ್ರಗಳ ಸರ್ಕಾರಗಳು ಕೇಂದ್ರೀಕೃತ ಆಡಳಿತರಚನೆಯನ್ನೇ ಅವಲಂಬಿಸಿದ್ದು ಅವು ಯಾವುದೇ ಆರ್ಥಿಕ ಪ್ರಗತಿಯನ್ನಾಗಲೀ, ಮಾನವಾಭಿವೃದ್ಧಿಯನ್ನಾಗಲೀ ಸಾಧಿಸಲು ಸಫಲವಾಗಿಲ್ಲ. ಹೀಗಾಗಿ ಕೇಂದ್ರ ಸರ್ಕಾರದಿಂದ ಸ್ಥಳೀಯ ಸರ್ಕಾರಗಳಿಗೆ ಹೆಚ್ಚಿನ ಜವಾಬ್ದಾರಿ ಮತ್ತು ಕಾರ್ಯಗಳನ್ನು ವರ್ಗಾಯಿಸುವ ಮೂಲಕ ವಿಭಿನ್ನ ಸ್ತರದ ಸರ್ಕಾರಗಳ ನಡುವೆ ಸಮತೋಲನೆಯ ಜವಾಬ್ದಾರಿ ಮತ್ತು ಕಾರ್ಯಗಳ ವಿಂಗಡನೆಗೆ ಮತ್ತು ಯಾವ ಕಾರ್ಯವನ್ನು ಯಾವ ಹಂತದಲ್ಲಿ ಸಮರ್ಥವಾಗಿ ಮತ್ತು ಪರಿಣಾಮಕಾರಿಯಾಗಿ

ನಿರ್ವಹಿಸಲು ಸಾಧ್ಯವಿದೆಯೋ ಆ ಹಂತಕ್ಕೆ ಅಧಿಕಾರವನ್ನು ವರ್ಗಾಯಿಸುವ ಪ್ರಕ್ರಿಯೆಗೆ ಈ ವಿಕೇಂದ್ರೀಕರಣ ಅವಕಾಶ ನೀಡುತ್ತದೆ.

ವಿಕೇಂದ್ರೀಕರಣವು ಸಾರ್ವಜನಿಕ ಸೇವೆಗಳನ್ನು ಜನರ ಹತ್ತಿರಕ್ಕೆ ಕೊಂಡೊಯ್ಯುವುದಲ್ಲದೆ, ಕೇಂದ್ರೀಕೃತ ಆಳ್ವಿಕೆಗಿಂತ ಇದು ಸ್ಥಳೀಯ ನೀತಿಗಳ ತೀರ್ಮಾನ ಕೈಗೂಳ್ಳುವ ಪ್ರಕ್ರಿಯೆಯಲ್ಲಿ ಕ್ರಿಯಾಶೀಲವಾಗಿ ಭಾಗವಹಿಸಲು ಜನರಿಗೆ ಮುಕ್ತ ಅವಕಾಶ ಮಾಡಿಕೊಡುತ್ತದೆ. ಈ ರೀತಿಯ ಜನತಾ ಭಾಗವಹಿಸುವಿಕೆಯು ಸಾರ್ವಜನಿಕ ಸೇವೆಗಳಲ್ಲಿ ಹೊಣೆಗಾರಿಕೆಯನ್ನು ಹೆಚ್ಚಿಸುತ್ತದೆ. ಏಕೆಂದರೆ ಜನತೆ ಕೇಂದ್ರ ಸರ್ಕಾರಕ್ಕಿಂತ ಸ್ಥಳೀಯ ಸರ್ಕಾರಗಳನ್ನು ಹೆಚ್ಚು ನಿಕಟವಾಗಿ ಮೌಲ್ಯಮಾಪನ ಮಾಡಲು ಸಾಧ್ಯ. ಅಲ್ಲದೆ ತೀರ್ಮಾನ ಕೈಗೂಳ್ಳುವಲ್ಲಿ ಮತ್ತು ಅವುಗಳನ್ನು ಜಾರಿಗೊಳಿಸುವಲ್ಲಿನ ದೀರ್ಘ ನೌಕರಶಾಹಿ ಪ್ರಕ್ರಿಯೆಯನ್ನು ವಿಕೇಂದ್ರೀಕರಣವು ಇಲ್ಲದಿರುವುದರಿಂದ ಕೇಂದ್ರೀಕೃತ ಆಡಳಿತಕ್ಕಿಂತ ಇಲ್ಲಿ ಸೇವೆಯನ್ನು ವೇಗವಾಗಿಯೂ ತಲುಪಿಸಬಹುದು. ಹಾಗೆಯೇ ವಿಭಿನ್ನ ಪ್ರದೇಶದ ಜನತೆಯ ಅಗತ್ಯಕ್ಕನುಗುಣವಾಗಿ ಸೇವೆಯನ್ನು ಹೆಚ್ಚು ಜವಬ್ದಾರಿಯುತವಾಗಿ ಪೂರೈಸಲು ಇದರಿಂದ ಸಾಧ್ಯವಾಗುವುದು. ಹೀಗೆ ವಿಕೇಂದ್ರೀಕರಣವು ಜನತೆಯ ರಾಜಕೀಯ ಭಾಗವಹಿಸುವಿಕೆಯನ್ನು ಹೆಚ್ಚಿಸುವ ಜೊತೆಗೆ, ಸರ್ಕಾರಿ ಸೇವೆಗಳನ್ನು ಉತ್ತಮ ಪಡಿಸಬೇಕು ಹಾಗೂ ಸಾರ್ವಜನಿಕ ಸಂಪನ್ಮೂಲಗಳ ಪರಿಣಾಮಕಾರಿ ಮತ್ತು ಅಗತ್ಯತೆ ಆಧಾರಿತವಾಗಿ ಬಳಕೆಯಾಗುವಂತೆ ಮಾಡಬೇಕು ಎಂದು ನಿರೀಕ್ಷಿಸಲಾಗಿದೆ.[21] ವಿಕೇಂದ್ರೀಕರಣವು ಆಡಳಿತದಲ್ಲಿ ಹೆಚ್ಚಿನ ಸಂಖ್ಯೆಯ ಜನಸಮೂಹವನ್ನು ತೊಡಗಿಸುವುದರಿಂದ ತನ್ನ ಕಾರ್ಯಚಟುವಟಿಕೆಗಳಲ್ಲಿ ಸಹಜವಾಗಿಯೇ ಪಾರದರ್ಶಕತೆಯನ್ನು ಆಧರಿಸಿದ ಅಂತರ್ಗತ ಹೊಣೆಗಾರಿಕೆಯನ್ನೂ ತರುತ್ತದೆ. ಅಂದರೆ ವಿಕೇಂದ್ರೀಕೃತ ವ್ಯವಸ್ಥೆಯ ಮೂಲಕ ಜನತೆ ಆಡಳಿತದಲ್ಲಿ ಭಾಗವಹಿಸಿದರೆ, ಆಡಳಿತವು ಹೊಣೆಗಾರಿಕೆಯಿಂದ ವರ್ತಿಸಬೇಕಾಗುತ್ತದೆ. ಈ ಹೊಣೆಗಾರಿಕೆಯ ಪಾರದರ್ಶಕತೆಯೆಂದು ಕರೆಯಲ್ಪಡುವ ಆಡಳಿತದ ಬಗೆಗಿನ ಮಾಹಿತಿಯು ಸಾರ್ವಜನಿಕ ಲಭ್ಯತೆಯಿಂದ ಸಾಧಿತವಾಗುತ್ತದೆ.[22]

ಕೃಷಿ, ಗುಡಿಕೈಗಾರಿಕೆ, ಕುಟುಂಬಕಲ್ಯಾಣ ಕಾರ್ಯಕ್ರಮಗಳನ್ನು ಬಡತನ ನಿವಾರಣೆ, ಕುಡಿಯುವ ನೀರು ಮುಂತಾದ ಕೆಲಸ ಕಾರ್ಯಗಳು ಗ್ರಾಮ ಪಂಚಾಯತಿ ವ್ಯಾಪ್ತಿಯೊಳಗೆ ಬರುವವು ಎಂದು ಈ ಕಾಯ್ದೆ ಹೇಳಿದೆ. ಭಾರತ ಸಂವಿಧಾನದ 73ನೇ ತಿದ್ದುಪಡಿಗೆ ಅನುಗುಣವಾಗಿ ಕರ್ನಾಟಕ ರಾಜ್ಯವು ಸಹ ಪಂಚಾಯತ್‌ರಾಜ್ ಅಧಿನಿಯಮವನ್ನು 1993 ಕರ್ನಾಟಕ "ಪಂಚಾಯತ್‌ರಾಜ್ ಅಧಿನಿಯಮ" ಎಂದು ಕರೆಯಲಾಗುತ್ತಿದೆ. ಇದು ಭಾರತ ಸಂವಿಧಾನದ 73ನೇ ತಿದ್ದುಪಡಿಯ ಬಹುತೇಕ ಅಂಶಗಳನ್ನು ಒಳಗೊಂಡಿದ್ದು ರಾಜ್ಯದಲ್ಲಿ ಮೂರು ಹಂತದ ಪಂಚಾಯತ್ ವ್ಯವಸ್ಥೆಗೆ ಅವಕಾಶ ಮಾಡಿಕೊಟ್ಟಿದೆ.[23]

ಅದೇ ರೀತಿ ಗ್ರಾಮ ಪಂಚಾಯತಿಯಲ್ಲಿರುವ ಚುನಾಯಿತ ಸದಸ್ಯರೆಲ್ಲರೂ ಗ್ರಾಮ ಪಂಚಾಯತಿಯ ಆಡಳಿತದಲ್ಲಿ ಭಾಗವಹಿಸಲು ಅನುಕೂಲವಾಗುವ ದೃಷ್ಟಿಯಿಂದ ಸ್ಥಾಯಿ ಸಮಿತಿಗಳ ರಚನೆಗೂ ಅವಕಾಶವನ್ನು ಮಾಡಿಕೊಟ್ಟಿದೆ. ಆದರೆ ಇಂದು ಸ್ಥಾಯಿ ಸಮಿತಿಗಳು ನಿರೀಕ್ಷಿತ ಮಟ್ಟದಲ್ಲಿ ಕಾರ್ಯನಿರ್ವಹಿಸದಿರುವುದನ್ನು ನೋಡಬಹುದಾಗಿದೆ.

## 2.3. ಕರ್ನಾಟಕ ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಸ್ಥಾಯಿ ಸಮಿತಿಗಳ ರಚನೆ

ಭಾರತ ಸಂವಿಧಾನದ 73ನೇ ತಿದ್ದುಪಡಿ ಜಾರಿಗೆ ಬಂದ ಕೆಲವೇ ದಿನಗಳಲ್ಲಿ ಅದರಲ್ಲಿಯ ಎಲ್ಲ ಪ್ರಮುಖ ಅಂಶಗಳನ್ನು ಅಳವಡಿಸಿ 10ನೇ, ಮೇ 1993ರಂದು ಕರ್ನಾಟಕ ಸರ್ಕಾರವು ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993 ಎಂಬ ಶಾಸನವನ್ನು ಜಾರಿಗೆ ತಂದಿತು.[24] ಈ ಅಧಿನಿಯಮ ಮೂರು ಹಂತದ ಪಂಚಾಯತ್ ವ್ಯವಸ್ಥೆಗೆ ಅವಕಾಶ ಮಾಡಿಕೊಟ್ಟಿದೆ. ಕೆಳಹಂತದಲ್ಲಿ ಗ್ರಾಮ ಪಂಚಾಯತಿ, ಮಧ್ಯದ ಹಂತದಲ್ಲಿ ತಾಲ್ಲೂಕು ಪಂಚಾಯತಿ, ಮೇಲ್‌ಹಂತದಲ್ಲಿ ಜಿಲ್ಲಾ ಪಂಚಾಯತಿಗಳನ್ನು ರಚಿಸಲಾಯಿತು.

## 2.4. ಸ್ಥಾಯಿ ಸಮಿತಿಗಳು

1993ರ ಅಧಿನಿಯಮ ಪಂಚಾಯತಿ ವ್ಯವಸ್ಥೆಯ ಮೂರು ಹಂತಗಳಲ್ಲಿ ವಿವಿಧ ಸ್ಥಾಯಿಸಮಿತಿಗಳನ್ನು ರಚಿಸಿಕೊಳ್ಳಲು ಅವಕಾಶ ನೀಡಿದೆ. ಏಕೆಂದರೆ ಪ್ರತಿ ಪಂಚಾಯಿತಿಯು ನಿರ್ದಿಷ್ಟ ವಿಷಯಗಳನ್ನು ಕೂಲಂಕಷವಾಗಿ ಚರ್ಚಿಸಿ ಅವುಗಳ ಸಾಧಕ ಬಾಧಕಗಳನ್ನು ಪರಿಶೀಲಿಸಿ ಸೂಕ್ತ ನಿರ್ಣಯಗಳನ್ನು ತೆಗೆದುಕೊಳ್ಳಲು ಮತ್ತು ಆಯಾ ಪಂಚಾಯತಿಗೆ ವಹಿಸಿಕೊಟ್ಟಿರುವ ಕಾರ್ಯಗಳನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಮತ್ತು ಅಭಿವೃದ್ಧಿ ಕಾರ್ಯಗಳನ್ನು ಅನುಷ್ಠಾನಗೊಳಿಸಲು ಸಾಧ್ಯವಾಗಲಿ ಎಂಬ ಉದ್ದೇಶವನ್ನು ಹೊಂದಿವೆ. ಚುನಾಯಿತ ಸದಸ್ಯರು ಅನುಭವ ಮತ್ತು ಪರಿಣಿತಿಯನ್ನು ಅವಲಂಬಿಸಿ ಆಯಾ ಸ್ಥಾಯಿಸಮಿತಿಯ ಸದಸ್ಯರನ್ನಾಗಿ ಮಾಡುವುದರಿಂದ ಆಯಾ ವಿಷಯಗಳನ್ನು ವಿವರವಾಗಿ ಚರ್ಚಿಸಿ ಗುಣಾವಗುಣಗಳನ್ನು ವಿಮರ್ಶಿಸಿ ಸೂಕ್ತ ತೀರ್ಮಾನ ಕೈಗೊಂಡು ಜನಪರ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲು ಸಾಧ್ಯವಾಗುತ್ತದೆ. ಸಾಮಾನ್ಯವಾಗಿ ಸ್ಥಾಯಿಸಮಿತಿಗಳ ಸಭೆಗಳನ್ನು ಆಯಾ ಪಂಚಾಯತಿಯ ಕೇಂದ್ರ ಕಾರ್ಯಸ್ಥಾನದಲ್ಲಿ ನಡೆಸತಕ್ಕದ್ದು ಎಂದು ಹೇಳಲಾಗಿದೆ.[25]

### I. ಗ್ರಾಮ ಪಂಚಾಯಿತಿಯ ಸ್ಥಾಯಿ ಸಮಿತಿಗಳ ರಚನೆ

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 61 ಮತ್ತು 61ಎ ಪ್ರಕಾರ ಪ್ರತಿ ಗ್ರಾಮ ಪಂಚಾಯತಿಯು ಈ ಕೆಳಗಿನ ಮೂರು ಸ್ಥಾಯಿ ಸಮಿತಿಗಳನ್ನು ಹೊಂದಿರಬೇಕು.[26]

## ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿಗಳ ರಚನೆಯ ರೇಖಾ ಚಿತ್ರ




1. ಉತ್ಪಾದನಾ ಸಮಿತಿ
2. ಸಾಮಾಜಿಕ ನ್ಯಾಯ ಸಮಿತಿ
3. ಸೌಕರ್ಯಗಳ ಸಮಿತಿ

- ಗ್ರಾಮ ಪಂಚಾಯತಿಯು ಪೂರ್ಣವಾಗಿ ರಚನೆಯಾದ ನಂತರ ಪ್ರತಿಯೊಂದು ಸ್ಥಾಯಿ ಸಮಿತಿಯನ್ನು ರಚಿಸಲಾಗುವುದು ಮತ್ತು ನಿಗದಿಪಡಿಸಿದ ಅವಧಿಯ ಪೂರ್ಣವಾಗಿ ಮುಕ್ತಾಯವಾದ ನಂತರ ಪುನರ್ ರಚಿಸಲಾಗುವುದು.
- ಸ್ಥಾಯಿ ಸಮಿತಿಯ ಪ್ರತಿಯೊಬ್ಬ ಸದಸ್ಯನ ಹುದ್ದೆಯು ಮೂವತ್ತು ತಿಂಗಳು ಆಗಿರುತ್ತದೆ ಅಥವಾ ಗ್ರಾಮ ಪಂಚಾಯಿತಿಯ ಸದಸ್ಯತ್ವದ ಅಧಿಕಾರಾವಧಿ ನಿಂತು ಹೋಗುವವರೆಗೆ ಇವುಗಳಲ್ಲಿ ಯಾವುದು ಮೊದಲೊ ಆ ಅವಧಿಯಾಗಿರುತ್ತದೆ.
- ಪ್ರತಿಯೊಂದು ಸಮಿತಿಯಲ್ಲಿ ಗ್ರಾಮ ಪಂಚಾಯತಿಯ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸೇರಿದಂತೆ ಮೂರಕ್ಕೆ ಕಡಿಮೆಯಿಲ್ಲದ ಐದಕ್ಕೆ ಹೆಚ್ಚಿಲ್ಲದ ಸದಸ್ಯರು ಇರುತ್ತಾರೆ.
- ಗ್ರಾಮ ಪಂಚಾಯತಿಯ ಅಧ್ಯಕ್ಷನು ಉತ್ಪಾದನಾ ಮತ್ತು ಸೌಕರ್ಯಗಳ ಸಮಿತಿಗೆ ಪದನಿಮಿತ್ತ ಮತ್ತು ಸದಸ್ಯ ಮತ್ತು ಅಧ್ಯಕ್ಷನಾಗಿರುತ್ತಾನೆ. ಸಾಮಾಜಿಕ ನ್ಯಾಯ ಸಮಿತಿಯಲ್ಲಿ ಕನಿಷ್ಠ ಒಬ್ಬ ಮಹಿಳಾ ಸದಸ್ಯೆ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಒಬ್ಬ ಸದಸ್ಯ ಇರಲೇಬೇಕು

- ರೈತ ಮಂಡಳಿ, ಮಹಿಳಾ ಮಂಡಳಿ ಮತ್ತು ಯುವಕ ಮಂಡಳಿಗಳಿಂದ ಸರ್ಕಾರವು ಅಂಗೀಕರಿಸಿದ ಅಂತಹುದೆ ಮಂಡಳಿಗಳ ಸದಸ್ಯರನ್ನು ಸಹ ಸ್ಥಾಯಿ ಸಮಿತಿಗಳ ಸದಸ್ಯರನ್ನಾಗಿ ಗ್ರಾಮ ಪಂಚಾಯತಿಯು ನೇಮಕ ಮಾಡಿಕೊಳ್ಳಬಹುದು.
- ಗ್ರಾಮ ಪಂಚಾಯತಿಯ ವ್ಯಾಪ್ತಿಯಲ್ಲಿ ಬರುವ ಸಹಕಾರ ಸಂಘಗಳ ಒಬ್ಬ ಪ್ರತಿನಿಧಿಯನ್ನು ಉತ್ಪಾದನಾ ಸಮಿತಿಗೆ ಸೇರಿಸಿಕೊಳ್ಳಬಹುದು. ಸೇರಿಸಿಕೊಂಡು ಸದಸ್ಯರ ಹಕ್ಕುಗಳು ಹಾಗು ಬಾಧ್ಯತೆಗಳು ಗೊತ್ತುಪಡಿಸಿದ ರೀತಿಯಲ್ಲಿ ಇರುವುವು.

**ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿಗಳ ಕಾರ್ಯಗಳು**

ಗ್ರಾಮ ಪಂಚಾಯತಿಯಲ್ಲಿರುವ ಮೂರು ಸಮಿತಿಗಳಾದ ಉತ್ಪಾದನಾ ಸಮಿತಿ, ಸಾಮಾಜಿಕ ನ್ಯಾಯ ಸಮಿತಿ, ಸೌಕರ್ಯಗಳ ಸಮಿತಿಗಳಿಗೆ ಆಯಾ ಸಮಿತಿಗಳು ಮಾಡಬೇಕಾದ ನಿರ್ದಿಷ್ಟ ಕಾರ್ಯಗಳನ್ನು ಗೊತ್ತುಪಡಿಸಲಾಗಿದೆ.

**1. ಉತ್ಪಾದನಾ ಸಮಿತಿ:** ಕೃಷಿ ಉತ್ಪಾದನೆ, ಪಶುಪಾಲನೆ ಮತ್ತು ಗುಡಿ ಕೈಗಾರಿಕೆಗಳು ಮತ್ತು ಬಡತನ ನಿವಾರಣಾ ಕಾರ್ಯಕ್ರಮಗಳಿಗೆ ಸಂಬಂಧಿಸಿದ ಕಾರ್ಯಗಳನ್ನು ಉತ್ಪಾದನಾ ಸಮಿತಿಯು ನಿರ್ವಹಿಸಬೇಕು. ಇವುಗಳಿಗೆ ಸಂಬಂಧಿಸಿದ ಕಾರ್ಯ ಚಟುವಟಿಕೆಗಳನ್ನು ಈ ಕೆಳಕಂಡಂತೆ ನೋಡಬಹುದು.

ಕೃಷಿ ಉತ್ಪಾದನೆಗೆ ಸಂಬಂಧಿಸಿದಂತೆ

- ಲಾಭದಾಯಕ ಬೆಳೆ ಬೆಳೆಯಲು ಮತ್ತು ಬೆಳೆ ವೈವಿಧ್ಯತೆ ಬಗ್ಗೆ ರೈತರಿಗೆ ಸಲಹೆ ಸೂಚನೆ ನೀಡಲು ಸಹಾಯಮಾಡುವುದು.
- ಕೃಷಿ ಉತ್ಪಾದನೆ ಹೆಚ್ಚಿಸಲು ಹೊಸ ತಂತ್ರಜ್ಞಾನಗಳನ್ನು ಅಳವಡಿಸಿಕೊಂಡು ಅವುಗಳ ಪ್ರಚಾರಕ್ಕೆ ನೆರವಾಗುವ ಪ್ರಗತಿಪರ ತಂತ್ರಜ್ಞಾನದ ಅಭಿವೃದ್ಧಿಗೆ ನೆರವಾಗುವುದು.
- ಬೆಳೆ ಇಳುವರಿ ಅಂದಾಜು ಮತ್ತು ಬೆಳೆ ಹಾಗೂ ಬೆಳೆ ಪದ್ಧತಿ ಬಗ್ಗೆ ಅಂಕಿ ಅಂಶ ನಿರ್ವಹಣೆ.
- ಬೆಳೆ ಯೋಜನೆ ತಯಾರಿಗೆ ನೆರವು ನೀಡುವುದು.
- ಸ್ಥಳೀಯ ತಂತ್ರಜ್ಞಾನದ ಅಭಿವೃದ್ಧಿಗೆ ಮತ್ತು ಸಸ್ಯ ಸಂರಕ್ಷಣೆಗೆ ನೆರವಾಗುವುದು.
- ಕೀಟನಾಶಕಗಳು, ಗೊಬ್ಬರ, ಬೀಜಗಳಂತಹ ವಿವಿಧ ಅವಶ್ಯಕತೆಗಳನ್ನು ಅಂದಾಜಿಸುವಲ್ಲಿ ನೆರವಾಗುವುದು.
- ಎರೆಹುಳು ಸಾಕಣೆ ಹಾಗೂ ಸಾವಯವ ಗೊಬ್ಬರದ ಬಗ್ಗೆ ಜಾಗೃತಿ ಮೂಡಿಸುವುದು.

- ಸರ್ಕಾರದಿಂದ ರೈತರಿಗೆ ಕಚ್ಚಾ ವಸ್ತುಗಳನ್ನು ಒದಗಿಸಲು ನೆರವಾಗುವುದು.
- ರೈತರ ವಿವಿಧ ಗುಂಪು ಮತ್ತು ಬೆಳೆಗಳಿಗೆ ತಕ್ಕಂತೆ ಸಾಲದ ಅವಶ್ಯಕತೆಗಳನ್ನು ಅಂದಾಜಿಸುವುದು.
- ಕಿಸಾನ್ ಮೇಳ ಮತ್ತು ತರಬೇತಿಗಾಗಿ ರೈತರ ಆಯ್ಕೆ.
- ಮಣ್ಣು ಪರೀಕ್ಷೆ ಮಾಡುವ ತಾಂತ್ರಿಕ ಪರಿಣಿತರಿಗೆ ನೆರವಾಗುವುದು.
- ಮಣ್ಣು ಪರೀಕ್ಷೆ ಫಲಿತಾಂಶಗಳನ್ನು ರೈತರಿಗೆ ತಿಳಿಸಿ ಅದನ್ನು ಆಧರಿಸಿ ಭೂಮಿಯ ಫಲವತ್ತತೆ ಹೆಚ್ಚಿಸಲು ರೈತರಿಗೆ ನೆರವಾಗುವುದು.
- ರೈತರಿಗೆ ಸಗಟು ಮಾರಾಟ ವ್ಯವಸ್ಥೆ ಕಲ್ಪಿಸುವುದು.
- ಆಹಾರ ಧಾನ್ಯಗಳು ಮತ್ತು ಬೀಜಗಳ ಉತ್ತಮ ಸಂಗ್ರಹಣೆ ವ್ಯವಸ್ಥೆ ಬಗ್ಗೆ ಜಾಗೃತಿ ಮೂಡಿಸಲು ನೆರವಾಗುವುದು.
- ಜಿಲ್ಲಾ ಪಂಚಾಯತಿಗಳ ಭೂ ಸಂರಕ್ಷಣೆ ಮತ್ತು ಜಲ ಸಂರಕ್ಷಣಾ ಯೋಜನೆಗಳಿಗೆ ನೆರವಾಗುವುದು.
- ಪ್ರಕೃತಿ ವಿಕೋಪಗಳಿಂದ ಉಂಟಾದ ನಷ್ಟದ ಪರಿಹಾರ ಕಾರ್ಯಾಚರಣೆ ಮತ್ತು ವಿತರಣೆಯ ಉಸ್ತುವಾರಿ.
- ಬೆಳೆ ವಿಮಾ ಯೋಜನೆಗಳನ್ನು ಉಪಯೋಗಿಸಿಕೊಳ್ಳವಂತೆ ರೈತರಿಗೆ ಉತ್ತೇಜಿಸುವುದು.
- ಕೃಷಿ ಆಕಸ್ಮಿಕಗಳ ಯೋಜನೆಗಳನ್ನು ರೂಢಿಸುವುದು ಮತ್ತು ಕಾರ್ಯಗತಗೊಳಿಸುವುದು.
- ಜಿಲ್ಲಾ ಪಂಚಾಯತಿ ಮತ್ತು ತಾಲ್ಲೂಕು ಪಂಚಾಯತಿ ವಹಿಸುವ ಕಿರು ನೀರಾವರಿ ಯೋಜನೆಗಳನ್ನು ಕಾರ್ಯಗತಗೊಳಿಸುವುದು.
- ಜಿಲ್ಲಾ ಪಂಚಾಯತಿ ಮತ್ತು ತಾಲ್ಲೂಕು ಪಂಚಾಯತಿಗಳಿಂದ ವಹಿಸಲ್ಪಟ್ಟ ಯೋಜನೆಗಳನ್ನೊಳಗೊಂಡ ನೀರು ಇಂಗಿಸುವ ಕೆರೆ ಮತ್ತು ಅಣೆಕಟ್ಟುಗಳ ನಿರ್ಮಾಣ ಕಾರ್ಯಗಳನ್ನು ಮಾಡುವುದು.
- ವಿವಿಧ ಕಾರ್ಯಕ್ರಮಗಳಡಿಯಲ್ಲಿ ಚಿಕ್ಕ ನೀರಾವರಿ ಯೋಜನೆಗಳ ಫಲಾನುಭವಿಗಳನ್ನು ಗುರುತಿಸುವುದು.
- ಚಿಕ್ಕ ನೀರಾವರಿ ಕಾಮಗಾರಿಯ ಪ್ರಗತಿ ಹಾಗೂ ಗುಣಮಟ್ಟದ ಮೇಲುಸ್ತುವಾರಿ ಮೇಲ್ವಿಚಾರಣೆ ಮತ್ತು ಪರಿಶೀಲನೆ.

- ಸಹಾಯಧನ ಆಧಾರಿತ ತುಂತುರು ಮತ್ತು ಹನಿ ನೀರಾವರಿಗಾಗಿ ಫಲಾನುಭವಿಗಳನ್ನು ಗುರುತಿಸುವುದು.
- ನೀರಿನ ಸಮರ್ಪಕ ಬಳಕೆಗೆ ಜಮೀನುಗಳಲ್ಲಿ ಕಿರು ಕಾಲುವೆಗಳನ್ನು ನಿರ್ಮಿಸಿ ನೀರು ಬಿಡುವುದು ಹಾಗೂ ತೋಟಗಳನ್ನು ಅಭಿವೃದ್ಧಿಪಡಿಸುವಲ್ಲಿ ರೈತರನ್ನು ಉತ್ತೇಜಿಸುವುದು.
- ಜಲಾನಯನ ಯೋಜನೆಗಳನ್ನು ರೂಪಿಸುವುದರಲ್ಲಿ ಮತ್ತು ಕಾರ್ಯಗತಗೊಳಿಸುವುದರಲ್ಲಿ ಪಾಲ್ಗೊಳ್ಳುವುದು.
- ಜಲಾನಯನ ಯೋಜನೆಗಳ ಅನುಷ್ಠಾನದಲ್ಲಿ ನೇರವಾಗಿ ಭಾಗವಹಿಸುವುದಕ್ಕಾಗಿ ಫಲಾನುಭವಿಗಳ ಸಮಿತಿಗಳನ್ನು ರಚಿಸಲು ನೆರವಾಗುವುದು.
- ಜಲಾನಯನ ಯೋಜನೆಗಳ ಕೆಲಸದ ಗುಣಮಟ್ಟದ ಮೇಲ್ವಿಚಾರಣೆ ಮತ್ತು ನಿಯಂತ್ರಣ ಮಾಡುವುದು.

ಪಶುಸಂಗೋಪನೆ ಮತ್ತು ಗುಡಿ ಕೈಗಾರಿಕೆಗಳಿಗೆ ಸಂಬಂಧಿಸಿದಂತೆ:

- ಪಶು ಸಂಪತ್ತಿನ ನಿರ್ವಹಣೆಗಾಗಿ ಆಧುನಿಕ ಪದ್ಧತಿಯನ್ನು ಅಳವಡಿಸಿಕೊಳ್ಳುವುದು ಮತ್ತು ಉತ್ತಮ ಗುಣಮಟ್ಟದ ತಳಿಗಳನ್ನು ನಿರ್ವಹಿಸಲು ಜನರನ್ನು ಉತ್ತೇಜಿಸುವುದು.
- ಗ್ರಾಮೀಣ ಪಶು ಸಂಪತ್ತು ಕೇಂದ್ರಗಳು ಮತ್ತು ಕೃತಕ ಗರ್ಭಧಾರಣ ಕೇಂದ್ರಗಳ ಮೇಲ್ವಿಚಾರಣೆ ಮಾಡುವುದು.
- ಪಶುಪಾಲನೆ ಮತ್ತು ರೋಗಗಳು ಹಾಗೂ ಸಾಂಕ್ರಮಿಕ ರೋಗಗಳನ್ನು ವರದಿ ಮಾಡುವುದು.
- ಸಹಕಾರಿ ಮೇವು ಫಾರಂನ್ನು ಸ್ಥಾಪಿಸಲು ನೆರವು ನೀಡುವುದು.
- ಮೇವು ಉತ್ಪಾದನೆಗಾಗಿ ಸಮುದಾಯ ಭೂಮಿಯನ್ನು ವ್ಯವಸ್ಥೆ ಮಾಡುವುದು.
- ಬರ ಪೀಡಿತ ಪ್ರದೇಶಗಳಿಗೆ ಮೇವನ್ನು ವಿತರಿಸುವುದು.
- ಸಹಕಾರಿ ಸಂಘಗಳನ್ನು ಮತ್ತು ಹಾಲು ಉತ್ಪಾದಕರನ್ನು ಸಂಘಟಿಸಲು ಸಹಾಯ ಮಾಡುವುದು.
- ಹೈನುಗಾರಿಕಾ ಅಭಿವೃದ್ಧಿ ಯೋಜನೆಗಳಿಗಾಗಿ ಫಲಾನುಭವಿಗಳನ್ನು ಗುರುತಿಸುವುದು.
- ಕೋಳಿ ಸಾಕಣೆಗಾಗಿ ಫಲಾನುಭವಿಗಳನ್ನು ಗುರುತಿಸುವುದು ಮತ್ತು ಕೋಳಿ ಸಾಕಣಿಕೆಗೆ ಸಂಕೀರ್ಣ ಸ್ಥಾಪಿಸುವುದು.
- ಮೀನುಗಾರಿಕೆಗಾಗಿ ಗ್ರಾಮ ಕೆರೆ ಅಭಿವೃದ್ಧಿ.

- ದೋಣಿಗಳು, ಬಲೆಗಳು ಮತ್ತು ಇತರ ಉಪಕರಣಗಳ ವಿತರಣೆಯಲ್ಲಿ ತಾಲ್ಲೂಕು ಪಂಚಾಯತಿಗೆ ನೆರವಾಗುವುದು.
- ಕೆರೆ, ಕಟ್ಟೆ ಸುಧಾರಣೆ ಮತ್ತು ಮೀನು ಸಾಕಣಿಕೆಗಾಗಿ ಯೋಜನೆಗಳನ್ನು ಕಾರ್ಯಗತಗೊಳಿಸುವುದು.
- ಪ್ರಕೃತಿ ವಿಕೋಪಗಳಲ್ಲಿ ಆಗಿರುವ ನಷ್ಟ, ಹಾನಿ ಮತ್ತು ತೊಂದರೆಗೊಳಗಾದ ಮೀನುಗಾರರ ಕುಟುಂಬಗಳಿಗೆ ಅವಶ್ಯವಿರುವ ಪರಿಹಾರವನ್ನು ನಿರ್ಧರಿಸುವುದು.
- ಗ್ರಾಮೀಣ ಕೈಗಾರಿಕೆಗಳಿಗೆ ಸಂಬಂಧಿಸಿದಂತೆ ಸಮರ್ಥ ಚಟುವಟಿಕೆಗಳನ್ನು ಗುರುತಿಸುವ ಮತ್ತು ಯೋಜನೆಗಳನ್ನು ರೂಪಿಸುವುದರಲ್ಲಿ ತಾಲ್ಲೂಕು ಪಂಚಾಯತಿಗೆ ಸಹಾಯ ಮಾಡುವುದು.
- ಗುಡಿ ಕೈಗಾರಿಕೆಗಳಿಗೆ ಅವಶ್ಯಕವಾಗಿರುವ ಕಚ್ಚಾ ಪದಾರ್ಥ ಉಪಕರಣಗಳನ್ನು ವಿತರಿಸಲು ಜಿಲ್ಲಾ ಪಂಚಾಯತಿಗಳಿಗೆ ನೆರವಾಗುವುದು.
- ಸ್ಥಳೀಯವಾಗಿ ದೊರೆಯುವ ಕಚ್ಚಾ ವಸ್ತುಗಳನ್ನು ಬೆಳೆಸಲು ಫಲಾನುಭವಿಗಳನ್ನು ಬಿಡುವುದು.
- ಉತ್ಪನ್ನಗಳ ಉತ್ಪಾದನೆ ಮತ್ತು ಮಾರಾಟಕ್ಕಾಗಿ ಸಾಮಾನ್ಯ ಕಾರ್ಯಾಗಾರ ಮತ್ತು ಮಾರುಕಟ್ಟೆ ಸಂಕೀರ್ಣಗಳನ್ನು ನಿರ್ಮಿಸುವುದು.

**ಬಡತನ ನಿವಾರಣೆಗೆ ಸಂಬಂಧಿಸಿದಂತೆ**

- ಬಡತನ ನಿರ್ಮೂಲನೆ ಯೋಜನೆಗಳು(ಎಸ್.ಜಿ.ಎಸ್.ವೈ ಮತ್ತು ಜೆ.ಜೆ.ಎಸ್.ವೈ) ಮತ್ತು ಉದ್ಯೋಗ ಖಾತರಿ ಯೊಜನೆಗಳಂತಹ ಗ್ರಾಮ ಪಂಚಾಯತಿಗೆ ವಹಿಸಲಾದ ಯೋಜನೆಗಳ ಫಲಾನುಭವಿಗಳನ್ನು ಗ್ರಾಮಸಭೆಯ ಅಂಗೀಕಾರದ ನಂತರ ಗುರುತಿಸುವುದು.
- ಉದ್ಯೋಗ ಖಾತರಿ ಯೋಜನೆಯಡಿ ತೆಗೆದುಕೊಳ್ಳಲಾದ ಕೆಲಸಗಳ ಮಾಹಿತಿ ಫಲಕಗಳನ್ನು ಸ್ಥಾಪಿಸುವುದು.
- ಬರಪೀಡಿತ ಪ್ರದೇಶಗಳ ಯೋಜನೆಯ ಫಲಾನುಭವಿಗಳನ್ನು ಆಯ್ಕೆ ಮಾಡುವುದು.
- ಸಮಗ್ರ ಆವಾಸ್ ಯೋಜನೆಯಡಿ ಅರ್ಹ ಫಲಾನುಭವಿಗಳನ್ನು ಗುರುತಿಸುವುದು.
- ಉದ್ಯೋಗ ಖಾತರಿ ಯೋಜನೆಯ ಅವಶ್ಯಕತೆ ಇರುವ ಕಾರ್ಮಿಕರನ್ನು ಗ್ರಾಮೀಣ ಮಟ್ಟದಲ್ಲಿ ಗ್ರಾಮ ಸಭೆಗಳ ಮೂಲಕ ಗುರುತಿಸುವುದು. ಅವರ ಹೆಸರುಗಳನ್ನು ಪಟ್ಟಿ ಮಾಡುವುದು ಮತ್ತು ಫಲಾನುಭವಿಗಳಿಗೆ ಉದ್ಯೋಗ ಪತ್ರಗಳನ್ನು ನೀಡುವುದು.

- ಗ್ರಾಮದ ಎಲ್ಲರಿಗೂ ಉದ್ಯೋಗ ಖಚಿತಪಡಿಸುವುದು.
- ನಿಯಮಾವಳಿಗಳಲ್ಲಿರುವಂತೆ ಯೋಜನೆ ಹಾಗೂ ಕೆಲಸಗಳ ಹಂಚಿಕೆ ಮಾಡುವುದು.
- ಬಡತನ ನಿವಾರಣೆಗೆ ಸಂಬಂಧಿಸಿದ ಯೋಜನೆಗಳನ್ನು ಕಾರ್ಯಗತಗೊಳಿಸಿದ ನಂತರ ಕೆಲಸದ ಗುಣಮಟ್ಟವನ್ನು ಪರಿಶೀಲಿಸುವುದು.

ಹೀಗೆ ಉತ್ಪಾದನಾ ಸಮಿತಿಯ ಮೇಲ್ಕಂಡ ಕಾರ್ಯ ಚಟುವಟಿಕೆಗಳ ಜೊತೆಗೆ ಅದಕ್ಕೆ ಸಂಬಂಧಿಸಿದ ಹಲವಾರು ಕೆಲಸ ಕಾರ್ಯಗಳನ್ನು ನಿರ್ವಹಿಸಬಹುದಾಗಿದೆ.

**2. ಸಾಮಾಜಿಕ ನ್ಯಾಯ ಸಮಿತಿ**

ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಮತ್ತು ಹಿಂದುಳಿದ ವರ್ಗಗಳ ಶೈಕ್ಷಣಿಕ, ಆರ್ಥಿಕ, ಸಾಂಸ್ಕೃತಿಕ, ಸಾಮಾಜಿಕ ಹಿತಕ್ಕಾಗಿ ಪ್ರೋತ್ಸಾಹ ನೀಡುವುದು. ಸಾಮಾಜಿಕ ಅನ್ಯಾಯ ಮತ್ತು ಯಾವುದೇ ರೀತಿಯ ಶೋಷಣೆಗಳಿಗೆ ಒಳಗಾಗಿರುವಂತಹ ಜಾತಿಗಳಿಗೆ ಮತ್ತು ವರ್ಗಗಳಿಗೆ ರಕ್ಷಣೆ ಕೊಡುವುದು.

**ಮಹಿಳೆ ಮತ್ತು ಮಕ್ಕಳಿಗೆ ಸಂಬಂಧಿಸಿದಂತೆ**

- ಮಹಿಳಾ ಸ್ವ ಸಹಾಯ ಗುಂಪುಗಳಿಗೆ ಉತ್ತೇಜನ ನೀಡುವುದು.
- ಮಹಿಳೆಯರಲ್ಲಿ ಅವರ ಹಕ್ಕುಗಳ ಬಗ್ಗೆ ಜಾಗೃತಿ ಉಂಟು ಮಾಡುವುದು.
- ಹೆರಿಗೆ ಸೌಲಭ್ಯ ಯೋಜನೆಯ ಅಡಿಯಲ್ಲಿ ಸೌಲಭ್ಯಗಳನ್ನು ಪಡೆಯಲು ಅರ್ಹರಾಗಿರುವ ಗರ್ಭಿಣಿ ಮಹಿಳೆಯರನ್ನು ಗುರುತಿಸುವುದು ಮತ್ತು ಸೌಲಭ್ಯಗಳನ್ನು ಪಡೆಯಲು ಅವರಿಗೆ ಸಹಾಯ ಮಾಡುವುದು.
- ಗ್ರಾಮೀಣ ಪ್ರದೇಶದಲ್ಲಿ ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿಗೆ ಸಂಬಂಧಿಸಿದಂತೆ ವಾರ್ಷಿಕ ಕ್ರಿಯಾ ಯೋಜನೆಗಳನ್ನು ತಯಾರಿಸುವುದು.
- ಮಹಿಳಾ ಗುಂಪುಗಳಿಗೆ ಬೇಡಿಕೆಯಾಧಾರಿತ ಆದಾಯ ತರಬಲ್ಲ ಚಟುವಟಿಕೆಗಳನ್ನು ಗುರುತಿಸಿ ಅವುಗಳಿಗೆ ಪ್ರೋತ್ಸಾಹ ನೀಡುವುದು.
- ಮಹಿಳೆಯರು ಸಾಲ ಸೌಲಭ್ಯಗಳನ್ನು ಪಡೆದುಕೊಳ್ಳಲು ಅನುಕೂಲವಾಗುವಂತೆ ಸಾಲ ಶಿಬಿರಗಳನ್ನು ನಡೆಸಲು ಸಹಾಯ ಮಾಡುವುದು.
- ಮಹಿಳಾ ಗುಂಪುಗಳಿಗಾಗಿ ಸೇವೆಗಳನ್ನು ಏಕೀಕರಣಗೊಳಿಸುವುದನ್ನು ಖಚಿತಗೊಳಿಸಲು ಸಾಕ್ಷರತೆ, ಆರೋಗ್ಯ, ರೋಗ ನಿರೋಧಕ ಮತ್ತು ಕುಟುಂಬ ಕಲ್ಯಾಣ ಗುಂಪುಗಳಿಗೆ ನೆರವು ನೀಡುವುದು.

- ಮಹಿಳಾ ಗುಂಪುಗಳಿಗೆ ಹೊಸ ಹೊಸ ಕಚ್ಚಾ ವಸ್ತುಗಳನ್ನು ಹೊಂದುವಲ್ಲಿ ನೆರವಾಗುವುದು.
- ಸಮಗ್ರ ಶಿಶು ಅಭಿವೃದ್ಧಿ ಯೋಜನಾ ಸಿಬ್ಬಂದಿಗೆ ಸಮೀಕ್ಷೆಗಳನ್ನು ನಡೆಸಲು ತಾಲ್ಲೂಕು ಪಂಚಾಯತಿಗೆ ನೆರವು ನೀಡುವುದು.
- ಸಮಗ್ರ ಶಿಶು ಅಭಿವೃದ್ಧಿ ಯೋಜನೆಯ ಫಲಾಭವಿಗಳನ್ನು ಗುರುತಿಸುವಲ್ಲಿ ನೆರವು ನೀಡುವುದು.
- ಅಂಗನವಾಡಿ ಕೇಂದ್ರಗಳ ಸ್ಥಾಪನೆಗಾಗಿ ನಿವೇಶನಗಳ ಆಯ್ಕೆಯಲ್ಲಿ ನೆರವು ನೀಡುವುದು.
- ಅಂಗನವಾಡಿ ಕೇಂದ್ರಗಳ ಕಾರ್ಯನಿರ್ವಹಣೆ, ವಿಶೇಷವಾಗಿ ಹಾಜರಾತಿ ದೃಢೀಕರಣ ಸಂದರ್ಭದಲ್ಲಿ ನೈರ್ಮಲ್ಯ ಮತ್ತು ಆರೋಗ್ಯ ನಿರ್ವಹಣೆಯಲ್ಲಿ ಹೆಚ್ಚುವರಿ ಪೌಷ್ಟಿಕಾಂಶಗಳ ಪೂರೈಕೆಗೆ ಸಂಬಂಧವಾಗಿ, ಸರಿಯಾದ ಶಿಶುಪಾಲನೆ ಮತ್ತು ಶೈಕ್ಷಣಿಕ ಅಗತ್ಯಗಳ ಪೂರೈಕೆ, ನಿಯಮಿತವಾದ ಆರೋಗ್ಯ ತಪಾಸಣೆ ಮತ್ತು ರೋಗ ನಿರೋಧಕತ್ವ ಕಾರ್ಯಕ್ರಮಗಳಲ್ಲಿ ಮಹಿಳಾ ಗ್ರಾಮ ಪಂಚಾಯತಿ ಸದಸ್ಯರನ್ನು ತೊಡಗಿಸುವುದು.
- ಮಾತೆ, ಶಿಶುಪಾಲನೆ, ಕುಟುಂಬ ಕಲ್ಯಾಣ ಯೋಜನೆ ಮತ್ತು ರೋಗ ನಿರೋಧಕ ಕಾರ್ಯಕ್ರಮಗಳ ಪ್ರಚಾರದಲ್ಲಿ ನೆರವಾಗುವುದು.
- ಅನಾಥ ಮಕ್ಕಳನ್ನು ಗುರುತಿಸುವುದು ಹಾಗು ಅವರ ಪುನರ್ವಸತಿ ಮತ್ತು ಅಭಿವೃದ್ಧಿಗಾಗಿ ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯಿತಿಗಳೊಂದಿಗೆ ಸಮನ್ವಯ ಹೊಂದುವುದು.
- ಅನಾಥ ಮಕ್ಕಳನ್ನು ದತ್ತು ತೆಗೆದುಕೊಳ್ಳಲು ಬಯಸುವ ತಂದೆ ತಾಯಿಗಳನ್ನು ಗುರುತಿಸುವುದು ಮತ್ತು ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಗಳೊಂದಿಗೆ ಅವರ ಬೆಳವಣಿಗೆಗೆ ಮತ್ತು ಅಭಿವೃದ್ಧಿಗಾಗಿ ಸಮನ್ವಯ ಹೊಂದಿರುವುದು.

**ಪರಿಶಿಷ್ಟ ಜಾತಿ ಮತ್ತು ಪಂಗಡದವರ ಕಲ್ಯಾಣಕ್ಕೆ ಸಂಬಂಧಿಸಿದಂತೆ**

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಕಾಲಂ 213ರ ಅನ್ವಯ ಗ್ರಾಮ ಪಂಚಾಯತಿಯ ಯೋಜನೆಗಳಡಿಯಲ್ಲಿ ಕಲ್ಯಾಣ ಕಾರ್ಯಕ್ರಮಗಳಿಗಾಗಿ ಮೀಸಲಿಟ್ಟ ಹಣದಲ್ಲಿ ಕನಿಷ್ಠ ಶೇಕಡಾ 25ರಷ್ಟು ಹಣವನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಕಲ್ಯಾಣ ಕಾರ್ಯಕ್ರಮಗಳಿಗಾಗಿ ಮೀಸಲಿಡಬೇಕೆಂದು ಸೂಚಿಸಲಾಗಿರುತ್ತದೆ.[27] ಹಾಗೂ ಪರಿಶಿಷ್ಟ ಜಾತಿ ಮತ್ತು ಪಂಗಡದವರ ಏಳಿಗೆಗಾಗಿ ಈ ಮೊತ್ತವನ್ನು ಉಪಯೋಗಿಸಲು ತಿಳಿಸಲಾಗಿದೆ. ಆದ್ದರಿಂದ ಗ್ರಾಮ ಪಂಚಾಯಿತಿಯ ಸಾಮಾಜಿಕ ನ್ಯಾಯ ಸಮಿತಿಯು ಆ ಹಣವನ್ನು ಪರಿಶಿಷ್ಟ ಜಾತಿ ಮತ್ತು ಪಂಗಡದವರ ಕಲ್ಯಾಣಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ಯೋಜನೆಗಳ ಅನುಷ್ಠಾನಕ್ಕಾಗಿ ಬಳಸಬಹುದಾಗಿದೆ.

- ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಬಡ ಜನರಿಗೆ ಗ್ರಾಮೀಣ ಪ್ರದೇಶದಲ್ಲಿ ಆಶ್ರಯ ಮಾದರಿಯಲ್ಲಿ ಮನೆಗಳನ್ನು ಕಟ್ಟಿಸಿಕೊಡುವುದು.
- ಸಮಾಜ ಕಲ್ಯಾಣ ಇಲಾಖೆಯ ಮೂಲಕ ನಡೆಯುವ ವಿದ್ಯಾರ್ಥಿ ನಿಲಯಗಳು ಅಥವಾ ನಿವಾಸಿ ಅಥವಾ ಆಶ್ರಯ ಶಾಲೆಗಳು ಮಾಡಲು ಹಾಗೂ ಹೊಸದಾಗಿ ಅಥವಾ ವಾರ್ಷಿಕ ದುರಸ್ತಿ ಮಾಡಲು ನೆರವು ನೀಡುವುದು.
- ನೇಮಕಾತಿ ಸಮಿತಿಯಿಂದ ಕರೆಯಲ್ಪಟ್ಟ ಸಂದರ್ಶನಕ್ಕೆ ಹಾಜರಾಗಲು ಹಾಗೂ ನಾಗರಿಕ ಹಕ್ಕು ಸಂರಕ್ಷಣಾ ನಿಯಮಾನುಸಾರ ನ್ಯಾಯಾಲಯದಲ್ಲಿ ಸಾಕ್ಷಿ ನೀಡಲು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಹೋಗಲು ಮತ್ತು ಬರಲು ಸಾಧಾರಣ ಬಸ್ ಚಾರ್ಜ ಅಥವಾ 2ನೇ ತರಗತಿ ರೈಲ್ವೆ ಚಾರ್ಜ್‌ನ್ನು ಒದಗಿಸುವುದು.
- ಪರಿಶಿಷ್ಟ ಜಾತಿ ಮತ್ತು ಪಂಗಡದ ಬಡ ಜನರು ನಿರಂತರವಾಗಿ ಕಾಯಿಲೆಯಿಂದ ನರಳುತ್ತಿದ್ದವರಿಗೆ ಹೆಚ್ಚಿನ ಔಷಧೋಪಚಾರಕ್ಕಾಗಿ ಸಹಾಯ ಮಾಡುವುದು.
- ಯಾವುದೆ ನೈಸರ್ಗಿಕ ವಿಕೋಪಕ್ಕೆ ಒಳಗಾದ ನೊಂದ ಪರಿಶಿಷ್ಟ ಜಾತಿ ಮತ್ತು ಪಂಗಡದ ಜನರಿಗೆ ಪರಿಹಾರ ಧನ ಮಂಜೂರು ಮಾಡುವುದು. ಪರಿಶಿಷ್ಟ ಜಾತಿ ಮತ್ತು ಪಂಗಡದವರ ಬಡಾವಣೆಗಳಲ್ಲಿ ಸಮುದಾಯ ಭವನ ಕಟ್ಟಲು ಸಹಾಯ ಮಾಡುವುದು.
- ಅಸ್ಪೃಶ್ಯತೆ ನಿವಾರಣೆ, ದೌರ್ಜನ್ಯಗಳಲ್ಲಿ ನೊಂದ ಪರಿಶಿಷ್ಟ ಜಾತಿ ಮತ್ತು ಪಂಗಡದ ಜನರಿಗೆ ಪರಿಹಾರ ಹಾಗೂ ಪುನರ್ವಸತಿ ಕಲ್ಪಿಸಲು ನೆರವಾಗುವುದು.
- ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿ ನಿಲಯಗಳಿಗೆ ಗ್ರಂಥಾಲಯ ಪುಸ್ತಕ, ಆಟದ ಸಾಮಗ್ರಿ ಮತ್ತು ಅವಶ್ಯಕತೆಯಿರುವ ಉಪಕರಣಗಳನ್ನು ಒದಗಿಸುವುದು.
- ಹೊಸದಾಗಿ ಅಭಿವೃದ್ಧಿ ಪಡಿಸಿದ ಬಡಾವಣೆಗಳಲ್ಲಿ ನಿವೇಶನರಹಿತ ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗೆ ಉಚಿತ ನಿವೇಶನಗಳನ್ನು ಒದಗಿಸುವುದು.
- ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಬಡಾವಣೆಗಳಿಗೆ ನೀರಿನ ಸೌಲಭ್ಯ ಒದಗಿಸುವುದು. ರಸ್ತೆಗಳನ್ನು ನಿರ್ಮಿಸುವುದು ಮನೆಗಳಿಗೆ ವಿದ್ಯುತ್ ದೀಪ ಒದಗಿಸುವುದು ಹಾಗೂ ರಸ್ತೆಗಳಿಗೆ ದೀಪವನ್ನು ಹಾಕಿಸುವುದು.

ಈ ಮೇಲ್ಕಂಡ ಯೋಜನೆಗಳಲ್ಲದೇ ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗೆ ಅನುಕೂಲವಾಗುವ ಯಾವುದೇ ಯೋಜನೆಗಳನ್ನು ಗ್ರಾಮ ಪಂಚಾಯತಿಯ ಸಾಮಾಜಿಕ ನ್ಯಾಯ

ಸಮಿತಿ ತಾಲ್ಲೂಕು ಪಂಚಾಯತಿಯ ಕಾರ್ಯನಿರ್ವಾಹಕ ಅಧಿಕಾರಿಯಿಂದ ಅನುಮೋದನೆ ಪಡೆದ ನಂತರ ಜಾರಿಗೊಳಿಸಬಹುದು.

ಇಷ್ಟೇ ಅಲ್ಲದೆ ಅಂಗವಿಕಲರ, ಮಾನಸಿಕ ಅಸ್ವಸ್ಥರ, ನಿರ್ಗತಿಕರ, ವೃದ್ಧರ, ದುರ್ಬಲವರ್ಗಗಳ ಕಲ್ಯಾಣವೂ ಸೇರಿದಂತೆ ಸಮಾಜ ಕಲ್ಯಾಣ ಕಾರ್ಯಕ್ರಮಗಳಂತಹ ಹಲವಾರು ಕಾರ್ಯಗಳನ್ನು ಸಾಮಾಜಿಕ ಸ್ಥಾಯಿ ಸಮಿತಿಯು ಮಾಡಬಹುದಾಗಿರುತ್ತದೆ.

**3. ಸೌಕರ್ಯಗಳ ಸಮಿತಿ**

ಶಿಕ್ಷಣ, ಸಾರ್ವಜನಿಕ ಆರೋಗ್ಯ ಲೋಕೋಪಯೋಗಿ ಕಾಮಗಾರಿಗಳಿಗೆ ಸಂಬಂಧಿಸಿದ ಕಾರ್ಯಗಳನ್ನು ಮತ್ತು ಗ್ರಾಮ ಪಂಚಾಯತಿಯ ಇತರ ಕಾರ್ಯಗಳನ್ನು ಸೌಕರ್ಯಗಳ ಸಮಿತಿ ನಿರ್ವಹಿಸಬೇಕು. ಇವುಗಳಿಗೆ ಸಂಬಂಧಿಸಿದ ಕಾರ್ಯ ಚಟುವಟಿಕೆಗಳನ್ನು ಈ ಕೆಳಕಂಡಂತೆ ನೋಡಬಹುದು.

ಕುಡಿಯುವ ನೀರಿಗೆ ಸಂಬಂಧಿಸಿದಂತೆ

- ಗ್ರಾಮ ಪಂಚಾಯತಿಯು ತನ್ನದೇ ಆದ ಅಥವಾ ಜಿಲ್ಲಾ ಪಂಚಾಯತ್ ಅಥವಾ ತಾಲ್ಲೂಕು ಪಂಚಾಯತಿಗಳು ವಹಿಸಿದಂತೆ ಬಾವಿಗಳು, ಕೆರೆಗಳು ಮತ್ತು ಗ್ರಾಮ ನೀರು ಪೂರೈಕೆ ಯೋಜನೆಗಳ ನಿರ್ಮಾಣ ಮಾಡುವುದು.
- ನಿಯಮಿತವಾಗಿ ತೆರೆದ ಬಾವಿಗಳ ಕ್ಲೋರಿನೇಶನ್ ಮತ್ತು ಜಲಚಿಕಿತ್ಸೆ ಮಾಡಿಸುವುದು.
- ಎಲ್ಲಾ ಮನೆಗಳಿಗೆ ಸೂಕ್ತ ನೀರು ವಿತರಣೆ ಮಾಡುವ ಭರವಸೆ ಮೂಡಿಸುವುದು.
- ಕುಡಿಯುವ ನೀರಿನ ಪರೀಕ್ಷೆಗಾಗಿ ನೀರಿನ ಮಾದರಿ ಸಂಗ್ರಹಿಸುವುದು.
- ಗ್ರಾಮೀಣ ನೀರು ಪೂರೈಕೆ ಯೋಜನೆಗಳ ಅನುಷ್ಠಾನ ನಿಯಂತ್ರಣ ಮತ್ತು ಪ್ರಗತಿಯ ವರದಿ ಸಲ್ಲಿಸುವುದು.
- ಕುಡಿಯುವ ನೀರಿನ ಯೋಜನೆಗಳ ನಿರ್ವಹಣೆ. ನೀರಿನ ಶುಲ್ಕ ಸಂಗ್ರಹಿಸುವುದು ಮತ್ತು ಅಗತ್ಯವಿರುವಡೆ ನಿರ್ವಾಹಕರ ನೇಮಕ ಮಾಡಿಸುವುದು.
- ರಸ್ತೆ ನಿರ್ಮಾಣ ಯೋಜನೆ ರೂಪಿಸಲು ನೆರವಾಗುವುದು.
- ಗ್ರಾಮ ಸಂಪರ್ಕ ರಸ್ತೆಗಳು ಮತ್ತು ಗ್ರಾಮ ಬೀದಿಗಳನ್ನು ಗುತ್ತಿಗೆದಾರರಿಲ್ಲದೆ ಸ್ಥಳೀಯ ಕಾರ್ಮಿಕರನ್ನು ಬಳಸಿ ನಿರ್ಮಿಸುವುದು.

- ರಸ್ತೆ ನಿರ್ಮಾಣ ಯೋಜನೆಯ ಕಾಮಗಾರಿಯ ಗುಣಮಟ್ಟ ಉಸ್ತುವಾರಿ, ನಿಯಂತ್ರಣ ಮತ್ತು ತಪಾಸಣೆ ಮತ್ತು ವರದಿ ಸಲ್ಲಿಸುವುದು.
- ಅಸ್ತಿತ್ವದಲ್ಲಿರುವ ಗ್ರಾಮ ರಸ್ತೆಗಳ ಸುಧಾರಣೆ, ದುರಸ್ತಿ ಮತ್ತು ವಾರ್ಷಿಕ ನಿರ್ವಹಣೆ ದರ ಅಂದಾಜನ್ನು ಸಿದ್ಧಪಡಿಸುವುದು ಹಾಗೂ ಕಾರ್ಯಗತಗೊಳಿಸುವುದು.
- ವಿದ್ಯುತ್ ಸಂಪರ್ಕ ಕಲ್ಪಿಸಲು ಕಂಬ ನೆಡುವುದಕ್ಕೆ ಭೂಮಿಯನ್ನು ಹುಡುಕಿ ಗುರುತಿಸುವುದು.
- ಬೀದಿ ದೀಪಗಳ ನಿರ್ವಹಣೆ.
- ಪ್ರಮುಖ ಬೆಳೆಕಾಲದಲ್ಲಿ ವಿದ್ಯುತ್ ಪೂರೈಕೆಯ ಪರಿಸ್ಥಿತಿಯ ಬಗ್ಗೆ ವರದಿ ಮಾಡುವುದು.
- ವಿದ್ಯುತ್ ಕಳವು ಹಾಗೂ ಅಕ್ರಮ ಸಂಪರ್ಕಗಳ ವಿರುದ್ಧ ನಿಗಾ ಇಡುವುದು ಮತ್ತು ಕೃಷಿಗೆ ವಿದ್ಯುತ್ ಪೂರೈಸುವುದರ ಮೇಲೆ ನಿಯಂತ್ರಣ ಹೊಂದಿರುವುದು.
- ಗೋಶಾಲೆ ಫಲಕಗಳು, ಗೋಬರ್ ಅನಿಲ ಸ್ಥಾವರಗಳು ಸೇರಿದಂತೆ ಅಸಾಂಪ್ರದಾಯಿಕ ಇಂಧನ ಮೂಲಗಳನ್ನು ಪ್ರೋತ್ಸಾಹಿಸುವುದು ಮತ್ತು ಅದರ ಬಗ್ಗೆ ಶಿಕ್ಷಣ ನೀಡುವುದು.
- ಶಾಲಾ ವಯಸ್ಸಿನ ಎಲ್ಲಾ ಮಕ್ಕಳು ಶಾಲೆಗೆ ಸೇರ್ಪಡೆಯಾಗಿರುವುದರ ಬಗ್ಗೆ ಖಚಿತಪಡಿಸಿ ಕೊಳ್ಳುವುದು.
- ಶಾಲಾ ಕಟ್ಟಡಗಳು ಮತ್ತು ಆಟದ ಮೈದಾನಗಳ ನಿರ್ವಹಣೆ.
- ಉಪಾಧ್ಯಾಯರು ಮತ್ತು ವಿದ್ಯಾರ್ಥಿಗಳು ಶಾಲೆಗೆ ನಿಯಮಿತವಾಗಿ ಹಾಜರಾಗುತ್ತಿರುವುದರ ಬಗ್ಗೆ ಮಾಹಿತಿ ಸಂಗ್ರಹಿಸಿ ನಂತರ ಸಂಬಂಧಿಸಿದವರಿಗೆ ವರದಿ ಸಲ್ಲಿಸುವುದು.
- ಎಲ್ಲಾ ಮಕ್ಕಳನ್ನು ಶಾಲೆಗೆ ಸೇರಿಸುವುದು ಮತ್ತು ಶಾಲೆ ಬಿಡುವುದನ್ನು ತಪ್ಪಿಸಲು ಪ್ರಚಾರ ಮಾಡುವುದು.
- ಶಾಲೆ ಬಿಟ್ಟ ಮಕ್ಕಳ ಬಗ್ಗೆ ಮಾಹಿತಿ ತೆಗೆದುಕೊಂಡು ಅದನ್ನು ತಪ್ಪಿಸಲು ಸೂಕ್ತಕ್ರಮ ತೆಗೆದುಕೊಳ್ಳುವುದು.
- ಸಂಪೂರ್ಣ ಸಾಕ್ಷರತಾ ಆಂದೋಲನದ ಮೂಲಕ ವಯಸ್ಕ ಶಿಕ್ಷಣ ಮತ್ತು ಅನೌಪಚಾರಿಕ ಶಿಕ್ಷಣದ ಯೋಜನೆ ರೂಪಿಸುವುದು ಮತ್ತು ಅನುಷ್ಠಾನಗೊಳಿಸುವುದು.
- ಗ್ರಂಥಾಲಯಗಳ ಸ್ಥಾಪನೆ ಮತ್ತು ನಿರ್ವಹಣೆ ಮಾಡುವುದು.
- ಗ್ರಾಮ ನೈರ್ಮಲ್ಯ, ರಸ್ತೆ ಮತ್ತು ಚರಂಡಿ ಸ್ವಚ್ಛತೆಯ ನಿರ್ವಹಣೆ ಮಾಡುವುದು.

• ಶೌಚಾಲಯ ಗೃಹಗಳ ನಿರ್ಮಾಣ.

• ಸಾಂಕ್ರಮಿಕ ರೋಗಗಳ ಹರಡುವಿಕೆಯ ಬಗ್ಗೆ ವರದಿ ತಯಾರಿಸುವುದು.

ಸೌಕರ್ಯಗಳ ಸಮಿತಿಯ ಮೇಲ್ಕಂಡ ಕಾರ್ಯಗಳನ್ನು ಅಲ್ಲದೆ ಅದಕ್ಕೆ ಸಂಬಂಧಿಸಿದ ಹಲವಾರು ಕೆಲಸಗಳನ್ನು ನಿರ್ವಹಿಸಬಹುದಾಗಿದೆ. ಹೀಗೆ ಗ್ರಾಮ ಪಂಚಾಯತಿಗಳಲ್ಲಿ ಸ್ಥಾಯಿಸಮಿತಿಗಳನ್ನು ರಚಿಸಲಾಗಿದೆ.

## 2.5. ಉಪಸಮಿತಿ ಹಾಗೂ ಇತರೆ ಸಮಿತಿಗಳು

1997ರ ಅಧಿನಿಯಮ ಸಂಖ್ಯೆ 29ರನ್ವಯ ಹೊಸ ಕಾಲಂ '61ಎ'ಯನ್ನು ಸೇರಿಸಲಾಗಿದೆ. ಇದು ದಿನಾಂಕ:29.10.1997 ರಿಂದ ಜಾರಿಗೆ ಬಂದಿದೆ.[29]

ಗ್ರಾಮ ಪಂಚಾಯತ್ ಕಲಂ 61ರಡಿ ನಿರ್ದಿಷ್ಠಪಡಿಸಲಾದ ಉದ್ದೇಶಗಳನ್ನು ಹೊರತುಪಡಿಸಿ ಇತರೆ ಯಾವುದೆ ಉದ್ದೇಶಕ್ಕಾಗಿ ಅದು ನಿರ್ಧರಿಸಬಹುದಾದಂತಹ ಸದಸ್ಯರನ್ನು ಒಳಗೊಂಡಿರುವ ಒಂದು ಅಥವಾ ಅದಕ್ಕಿಂತ ಹೆಚ್ಚು ಸಮತಿಗಳನ್ನು ನೇಮಿಸಬಹುದು. ನೇಮಿಸಲಾದ ಈ ಸಮಿತಿಗಳು ಯಾವ ಉದ್ದೇಶಕ್ಕಾಗಿ ಅದನ್ನು ನೇಮಕ ಮಾಡಲಾಗಿದೆಯೊ ಅದನ್ನು ಈಡೇರಿಸುವುದಕ್ಕೆ ಅವಶ್ಯಕ ಅಥವಾ ಯುಕ್ತವಾಗಬಹುದಾದಂತಹ ಅಧಿಕಾರಗಳನ್ನು ಮತ್ತು ಪ್ರಕಾರ್ಯಗಳನ್ನು ನಿಹಿತಗೊಳಿಸಲುಬಹುದಾಗಿದೆ.

ಗ್ರಾಮ ನೀರು ಮತ್ತು ನೈರ್ಮಲ್ಯ ಸಮಿತಿ, ಗ್ರಾಮ ಆರೋಗ್ಯ ಸಮಿತಿ, ವಸತಿ ಇತ್ಯಾದಿ ಉಪ ಸಮಿತಿಗಳು ಈಗಾಗಲೇ ರಚನೆಗೊಂಡು ಕಾರ್ಯನಿರ್ವಹಿಸುತ್ತಿರುವುದು ಗಮನಾರ್ಹ ಅಂಶವಾಗಿದೆ.

049478

### ಉಪ ಸಮಿತಿ ವ್ಯಾಪ್ತಿ

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಕಲಂ–61ಎ ಅನ್ವಯ ಗ್ರಾಮ ಪಂಚಾಯತ್‌ಗಳಲ್ಲಿ ಇತರ ಸಮಿತಿಗಳ ರಚನೆ ಕುರಿತು ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ/09/ ಜಿಪಸ/2004 ಬೆಂಗಳೂರು ದಿ:6.5.2004ರ ಪ್ರಕಾರ ಗ್ರಾಮ ಪಂಚಾಯತ್ ಶಾಸನಬದ್ಧವಾಗಿ ಕಾರ್ಯನಿರ್ವಹಿಸಬಹುದಾದ ಯಾವುದೇ ಕಾರ್ಯವನ್ನು ತನ್ನ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಅಥವಾ ಯಾವುದಾದರೂ ಪ್ರದೇಶದ ವ್ಯಾಪ್ತಿಯಲ್ಲಿ ಕೈಗೊಳ್ಳಲು ಈ ಸಮಿತಿಗೆ ಸೂಚಿಸಬಹುದು.[30]

### ಉಪ ಸಮಿತಿ ರಚನೆ

ಗ್ರಾಮ ಪಂಚಾಯತ್ ತನ್ನ ಅವಶ್ಯಕತೆ ಹಾಗೂ ಸ್ಥಳೀಯ ಸಂದರ್ಭಕ್ಕೆ ಅನುಗುಣವಾಗಿ ಸದಸ್ಯರನ್ನು ಈ ಸಮಿತಿಗೆ ನೇಮಿಸಬಹುದು. ಸದಸ್ಯರುಗಳ ನೇಮಕಕ್ಕೆ ಗರಿಷ್ಠ ಹಾಗೂ ಕನಿಷ್ಠ

ಮಿತಿ ಇರುವುದಿಲ್ಲ. ಸ್ಥಳೀಯ ಗ್ರಾಮ ಪಂಚಾಯತ್ ಸದಸ್ಯರು ಸಮಿತಿಗೆ ಕಡ್ಡಾಯವಾಗಿ ಸದಸ್ಯರಾಗಿರುತ್ತಾರೆ.

ಈ ಸಮಿತಿಯು ಉದ್ದೇಶಿತ ವಿಷಯಕ್ಕೆ ಪಂಚಾಯತ್ ವ್ಯಾಪ್ತಿಯಲ್ಲಿರುವ ತಜ್ಞರನ್ನು, ಸಂಬಂಧಿಸಿದ ಇಲಾಖಾ ಅಧಿಕಾರಿ/ನೌಕರರನ್ನು ಅಥವಾ ಕನಿಷ್ಠ ಎರಡು ವರ್ಷಗಳಿಂದ ಕಾರ್ಯನಿರ್ವಹಿಸುತ್ತಿರುವ ಸ್ವಯಂ ಸಂಸ್ಥೆಗಳನ್ನು ಅಥವಾ ಸ್ಥಳೀಯ ನಿವಾಸಿಗಳನ್ನು ಸಹ ಆಯ್ಕೆ(ಕೋಆಪ್ಟ್) ಮಾಡಿಕೊಳ್ಳಲು ಅಧಿಕಾರ ಹೊಂದಿದೆ. ಈ ಸಹಆಯ್ಕೆಯಾದ ಸದಸ್ಯರನ್ನು ಆಹ್ವಾನಿತರೆಂದು ಪರಿಗಣಿಸಬಹುದಾಗಿದೆಯೆ ಹೊರತು ಸದಸ್ಯರೆಂದು ಪರಿಗಣಿಸತಕ್ಕದ್ದಲ್ಲ. ಈ ಸಮಿತಿಯ ಯಾವುದೆ ಸಭೆಗಳಲ್ಲಿ ಗ್ರಾಮ ಪಂಚಾಯತ್ ಅಧ್ಯಕ್ಷ/ಉಪಾಧ್ಯಕ್ಷರು ಹಾಜರಾಗಲು ಅರ್ಹತೆ ಹೊಂದಿರುತ್ತಾರೆ.

**ಸಮಿತಿಯ ಅಧ್ಯಕ್ಷತೆ**

ಈ ಸಮಿತಿಯ ಅಧ್ಯಕ್ಷ/ಉಪಾಧ್ಯಕ್ಷರನ್ನು ಸಮಿತಿಯ ಸದಸ್ಯರು ಆಯ್ಕೆ ಮಾಡಬಹುದಾಗಿದೆ.

**ಉಪ ಸಮಿತಿಯ ಕಾರ್ಯವಿಧಾನ**

ಈ ಸಮಿತಿಯನ್ನು ಯಾವ ಉದ್ದೇಶಕ್ಕಾಗಿ ನೇಮಕ ಮಾಡಲಾಗಿದೆಯೋ ಆ ಉದ್ದೇಶವನ್ನು ಈಡೇರಿಸಲು ಅಗತ್ಯವಾಗಬಹುದಾದ ಅಧಿಕಾರಗಳನ್ನು ಗ್ರಾಮ ಪಂಚಾಯತ್ ನೀಡತಕ್ಕದ್ದು. ಸಮಿತಿಯ ಸಭೆಗಳನ್ನು ಗ್ರಾಮ ಪಂಚಾಯತ್ ಸಭೆ ನಡೆಸುವ ರೀತಿಯಲ್ಲಿ/ಕಾರ್ಯವಿಧಾನದಂತೆಯೇ ನಡೆಸತಕ್ಕದ್ದು. ಉದ್ದೇಶ ಪೂರ್ಣಗೊಂಡು ಸಮಿತಿಯು ಗ್ರಾಮ ಪಂಚಾಯತ್‌ಗೆ ವರದಿಯನ್ನು ನೀಡಿದ ನಂತರ ಸದರಿ ಸಮಿತಿ ರದ್ದಾಗತಕ್ಕದ್ದು. ಸಮಿತಿಯು ಕೈಗೊಳ್ಳುವ ತೀರ್ಮಾನಗಳು ಗ್ರಾಮ ಪಂಚಾಯತ್ ಅಂತಿಮ ತೀರ್ಮಾನಕ್ಕೆ ಬದ್ಧವಾಗಿರಬೇಕು.[31]

**ಉಪ ಸಮಿತಿಯ ಹೊಣೆಗಾರಿಕೆ**

ಸಮಿತಿಯು ತನ್ನದೇ ಆದ ನಡವಳಿ ಮತ್ತು ದಾಖಲೆಗಳನ್ನು ಹೊಂದಬಹುದಾಗಿದೆ. ಆದರೆ ಪ್ರತಿ ಸಭೆ ನಡವಳಿಗಳನ್ನು ಮುಂದಿನ ಗ್ರಾಮ ಪಂಚಾಯತ್ ಸಭೆಯಲ್ಲಿ ಮಂಡಿಸತಕ್ಕದ್ದು. ಈ ಸಮಿತಿ ನಡವಳಿಗಳು ಇತರ ಸಮಿತಿಯ ನಡವಳಿಗಳಂತೆಯೇ ಸಾರ್ವಜನಿಕರಿಗೆ ಮುಕ್ತವಾಗಿ ಪರಿವೀಕ್ಷಣೆಗೆ ಲಭ್ಯವಾಗಬೇಕು. ಈ ಸಮಿತಿಗೆ ಹಣ ವಸೂಲಾತಿ ಮಾಡುವ ಹಾಗೂ ವ್ಯಯ ಮಾಡಲು ಸಹ ಗ್ರಾಮ ಪಂಚಾಯತ್ ಅಧಿಕಾರ ನೀಡಬಹುದಾಗಿದೆ. ಈ ಸಮಿತಿಗೆ ಆರ್ಥಿಕ ಅಧಿಕಾರವನ್ನು ಗ್ರಾಮ ಪಂಚಾಯತ್ ನೀಡಿದಲ್ಲಿ ಇದಕ್ಕೆ ಸಂಬಂಧಿಸಿದ ಎಲ್ಲಾ ಲೆಕ್ಕಪತ್ರಗಳು

ಗ್ರಾಮ ಪಂಚಾಯತ್ ಲೆಕ್ಕಪತ್ರಗಳ ಭಾಗವಾಗಿರುತ್ತವೆ. ಈ ಲೆಕ್ಕಪತ್ರಗಳು ಗ್ರಾಮ ಪಂಚಾಯತ್ ಲೆಕ್ಕಪತ್ರಗಳಿಗೆ ಅನ್ವಯವಾಗುವ ರೀತಿಯಲ್ಲಿಯೇ ಲೆಕ್ಕಪರಿಶೋಧಕರ ತಪಾಸಣೆಗೆ ಒಳಪಡುತ್ತವೆ.

ಈ ಸಮಿತಿಯ ಎಲ್ಲಾ ಚಟುವಟಿಕೆಗಳು ಗ್ರಾಮ ಪಂಚಾಯತ್‌ಗಳ ಚಟುವಟಿಕೆಗಳ ಭಾಗವೆಂದೇ ಪರಿಗಣಿಸಬಹುದು. ಅವು ಪಂಚಾಯತ್‌ನ ಜಮಾಬಂದಿಯ ನಿಯಮಾವಳಿಗಳಿಗೆ ಬದ್ಧವಾಗಿರುತ್ತವೆ.

ಅಧಿನಿಯಮ ಕಲಂ–111(3)ರಡಿ ಗ್ರಾಮ ಪಂಚಾಯತ್ ಕಾರ್ಯದರ್ಶಿಯವರಿಗೆ ಸ್ಥಾಯಿ ಸಮಿತಿಗಳ ಮತ್ತು ಇತರೆ ಸಮಿತಿಗಳ ದಾಖಲೆಗಳನ್ನು ಇಡುವ ಹೊಣೆಗಾರಿಕೆ ಹೊಂದಿವೆ.[32]

ಅಧಿನಿಯಮದ ಕಲಂಗಳು 61 ಹಾಗೂ 61–ಎ ಅನ್ವಯ ರಚಿತವಾದ ಸ್ಥಾಯಿ ಸಮಿತಿ ಇತರೆ ಸಮಿತಿಗಳ ವರದಿಯನ್ನು ಗ್ರಾಮ ಪಂಚಾಯತ್ ತನ್ನ ಮುಂಬರುವ ಸಭೆಯ ಕಾರ್ಯಸೂಚಿಯಲ್ಲಿ ಕಡ್ಡಾಯವಾಗಿ ಸೇರಿಸಿ ಚರ್ಚಿಸತಕ್ಕದ್ದು.[33]

ಸಮಿತಿಯು ನೀಡಿದ ವರದಿಯನ್ನು ಸಾರ್ವಜನಿಕರ ಅವಗಾಹನೆಗಾಗಿ ಸೂಚನಾಫಲಕದಲ್ಲಿ ಪ್ರಕಟಿಸತಕ್ಕದ್ದು. ಗ್ರಾಮ ಪಂಚಾಯತ್‌ಗೆ ಚುನಾವಣೆಯ ಮೂಲಕ ಆಯ್ಕೆಯಾದ ಸದಸ್ಯರು ಸರ್ಕಾರವು ಕಾಯಿದೆಯ ಮೂಲಕ ನಿಗದಿಪಡಿಸಿದ ಸಭೆಗಳನ್ನು ನಡೆಸುವ, ಚರ್ಚಿಸುವ ಹಾಗೂ ತೀರ್ಮಾನಗಳನ್ನು ತೆಗೆದುಕೊಂಡು ಅನುಷ್ಠಾನಗೊಳಿಸುವ ಕಾರ್ಯವನ್ನು ಮಾಡಬೇಕು. ಗ್ರಾಮ ಪಂಚಾಯತ್‌ನಲ್ಲಿ ರಚಿಸಬೇಕಾದ ಉಪ ಸಮಿತಿಗಳ ವಿವರ ಈ ಕೆಳಗಿನಂತಿದೆ.[34]

**ಗ್ರಾಮ ಪಂಚಾಯತಿಗಳು ಮತ್ತು ಉಪ ಸಮಿತಿಗಳು**

ಗ್ರಾಮ ಪಂಚಾಯತ್ ಯಾವುದೆ ಉದ್ದೇಶಕ್ಕಾಗಿ ನಿರ್ಧರಿಸಿದ ಸದಸ್ಯರನ್ನು ಒಳಗೊಂಡಂತೆ ಒಂದಕ್ಕಿಂತ ಹೆಚ್ಚಿನ ಸಮಿತಿಗಳನ್ನು ರಚಿಸಬಹುದು ಹಾಗೂ ಅದಕ್ಕೆ ಸೂಕ್ತವಾದ ಅಧಿಕಾರಗಳನ್ನು ಹಾಗೂ ಜವಾಬ್ದಾರಿಯನ್ನು ವಹಿಸಬಹುದು. ಇಂತಹ ಸಮಿತಿಗಳಿಗೆ ಪಂಚಾಯತ್ ಪ್ರದೇಶದ ನಿವಾಸಿಗಳನ್ನು ಸಹ ಆಯ್ಕೆ ಮಾಡಿಕೊಳ್ಳಬಹುದಾಗಿದೆ. ವಿವಿಧ ಇಲಾಖೆಗಳಿಂದ ಅನುಷ್ಠಾನ ಗೊಳಿಸುವ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ಉಪ ಸಮಿತಿಗಳನ್ನು ರಚಿಸಲಾಗಿದ್ದು, ಈ ಸಮಿತಿಗಳ ಕಾರ್ಯವೈಖರಿ ಕುರಿತು ಈ ಕೆಳಕಂಡಂತೆ ಮಾಹಿತಿ ನೀಡಲಾಗಿದೆ.

**1. ಆಹಾರ ಖಾತರಿ ಸಮಿತಿ**

ಸಂವಿಧಾನದ 73ನೇ ತಿದ್ದುಪಡಿ ಅನ್ವಯ ಭಾರತ ಸಂವಿಧಾನದ ಆರ್ಟಿಕಲ್ 243(ಜಿ)ಗೆ 11ನೇ ಅನುಚ್ಛೇದವನ್ನು ಸೇರಿಸಲಾಗಿದೆ. ಈ ಅನುಚ್ಛೇದದ ಪ್ರಕಾರ ರಾಜ್ಯ ಸರ್ಕಾರದಿಂದ ಪಂಚಾಯತ್ ರಾಜ್ ಸಂಸ್ಥೆಗಳಿಗೆ 29 ವಿಷಯಗಳನ್ನು ವರ್ಗಾಯಿಸಲಾಗಿದ್ದು, ಅದರಲ್ಲಿ ಸಾರ್ವಜನಿಕ

ವಿತರಣಾ ಪದ್ಧತಿಯು ಸಹ ಸೇರಿರುತ್ತದೆ. ಈ ವ್ಯವಸ್ಥೆಯ ಕುರಿತು ಗ್ರಾಹಕರಲ್ಲಿ ಅರಿವನ್ನು ಮೂಡಿಸುವುದು ಗ್ರಾಮ ಪಂಚಾಯತಿಯ ಕರ್ತವ್ಯ. ಈ ಕಾರ್ಯವನ್ನು ನಿರ್ವಹಿಸಲು ಗ್ರಾಮ ಪಂಚಾಯತಿಯು ಆಹಾರ ಖಾತರಿ ಸಮಿತಿಯಡಿ ಈ ಕೆಳಕಂಡ ಸದಸ್ಯರನ್ನು ಒಳಗೊಂಡಂತೆ ಉಪಸಮಿತಿಯನ್ನು ರಚಿಸಿಕೊಳ್ಳಬೇಕು.[35] ಇದನ್ನು ಗ್ರಾಮ ಪಂಚಾಯಿತಿ ಕಾರ್ಯದರ್ಶಿಯವರು ಸೂಕ್ತ ಆದೇಶ ಹೊರಡಿಸುವ ಮೂಲಕ ಸಮಿತಿಯ ರಚನೆ ಮಾಡುವುದು.

**ಸಮಿತಿಯ ಸದಸ್ಯರು**

1. ಸಾಮಾಜಿಕ ನ್ಯಾಯ ಸಮಿತಿಯ ಅಧ್ಯಕ್ಷರು : ಅಧ್ಯಕ್ಷರು
2. ಗ್ರಾಮ ಪಂಚಾಯತಿಯ ಪರಿಶಿಷ್ಟ ಜಾತಿಗೆ ಸೇರಿದ ಸದಸ್ಯರು : ಸದಸ್ಯ
3. ಗ್ರಾಮ ಪಂಚಾಯತಿಯ ಪರಿಶಿಷ್ಟ ಪಂಗಡಕ್ಕೆ ಸೇರಿದ ಸದಸ್ಯರು: ಸದಸ್ಯ
4. ಗ್ರಾಮ ಪಂಚಾಯತಿಯ ಮಹಿಳಾ ಸದಸ್ಯರು : ಸದಸ್ಯ
5. ಗ್ರಾಮ ಪಂಚಾಯತಿಯ ಕಾರ್ಯದರ್ಶಿ : ಕಾರ್ಯದರ್ಶಿ

**ಸಮಿತಿಯ ಜವಾಬ್ದಾರಿಗಳು**

- ಗ್ರಾಮ ಪಂಚಾಯತಿಯ ವ್ಯಾಪ್ತಿಯಲ್ಲಿರುವ ನ್ಯಾಯಬೆಲೆ ಅಂಗಡಿಗಳ ಮೇಲ್ವಿಚಾರಣೆ ಮತ್ತು ನಿರ್ವಹಣೆ
- ನ್ಯಾಯಬೆಲೆ ಅಂಗಡಿಗಳ ತಪಾಸಣೆ ಮತ್ತು ಮುಕ್ತಾಯದ ಶಿಲ್ಕಿನ ಪರಿಶೀಲನೆ
- ಆಹಾರ ಧಾನ್ಯಗಳ ಸ್ವೀಕೃತಿಗಳು ಮತ್ತು ಪಡಿತರ ವಿತರಣೆದಾರರಿಗೆ ವಿತರಿಸಿದ ಆಹಾರಧಾನ್ಯಗಳು ತಾಳೆ ಹೊಂದುತ್ತವೆಯೇ ಎಂಬುದನ್ನು ಖಾತರಿಪಡಿಸಿಕೊಳ್ಳಬೇಕು. ಇದನ್ನು ಆಹಾರ ಸಂಗ್ರಹಣೆ ಮತ್ತು ಮಾರಾಟದ ರಿಜಿಸ್ಟರ್‌ಗಳ ತಪಾಸಣೆ, ಬಿಲ್ ಪುಸ್ತಕಗಳನ್ನು ತಪಾಸಿಸುವ ಮೂಲಕ ಖಾತರಿಪಡಿಸಿಕೊಳ್ಳಬೇಕು.
- ಆಹಾರ ಧಾನ್ಯಗಳನ್ನು ಸರಿಯಾದ ತೂಕ, ಸರ್ಕಾರ ನಿಗದಿಪಡಿಸಿದ ದರದಲ್ಲಿ ಮಾರಾಟ ಮಾಡಲಾಗುತ್ತಿದೆಯೋ ಎಂಬುದನ್ನು ತನಿಖೆ ಮಾಡಬೇಕು.
- ಆಹಾರ ಧಾನ್ಯಗಳ ಗುಣಮಟ್ಟ ನಿರ್ದಿಷ್ಟ ಮಟ್ಟದಲ್ಲಿದೆಯೇ ಎಂಬುದನ್ನು ಸಹ ಸಮಿತಿಯು ಖಾತರಿಪಡಿಸಿಕೊಳ್ಳಬೇಕು.
- ನ್ಯಾಯಬೆಲೆ ಅಂಗಡಿಗಳು ಸರ್ಕಾರ ನಿಗದಿಪಡಿಸಿದ ವೇಳೆಯಲ್ಲಿ ತೆರೆಯುತ್ತಿವೆಯೇ ಎಂಬುದನ್ನು ಸಹ ಸಮಿತಿ ಗಮನಿಸಬೇಕು.

• ಗ್ರಾಮ ಪಂಚಾಯತ್ ಮಟ್ಟದಲ್ಲಿ ಆಹಾರ ಖಾತರಿ ಸಮಿತಿಯನ್ನು ಗ್ರಾಮ ಪಂಚಾಯತಿಯ ಉಪಸಮಿತಿಯಾಗಿ ರಚಿಸಬೇಕಾಗಿದ್ದು, ಈ ಸಮಿತಿಯ ಕೆಳಗಡೆ ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ಇರುವ ಎಲ್ಲಾ ನ್ಯಾಯಬೆಲೆ ಅಂಗಡಿಗಳಿಗೆ ಸಂಬಂಧಿಸಿ ಏಳು ಜನ ಸದಸ್ಯರಿರುವ ಆಹಾರ ಜಾಗೃತಿ ಸಮಿತಿಗಳನ್ನು ರಚಿಸಲು ಕ್ರಮ ಕೈಗೊಳ್ಳುವುದು ಗ್ರಾಮ ಪಂಚಾಯತಿಯ ಜವಾಬ್ದಾರಿಯಾಗಿದೆ. ಈ ಸಮಿತಿಯಲ್ಲಿ ಬಿಪಿಎಲ್ ಮತ್ತು ಅಂತ್ಯೋದಯ ಅನ್ನ ಯೋಜನೆಯ ಪಡಿತರ ಚೀಟಿಯನ್ನು ಹೊಂದಿರುವ ಐದು ಮಹಿಳಾ ಸದಸ್ಯರಿರಬೇಕು. ಇವರಲ್ಲಿ ಒಬ್ಬರು ಪರಿಶಿಷ್ಟ ಜಾತಿ, ಒಬ್ಬರು ಪರಿಶಿಷ್ಟ ಪಂಗಡಕ್ಕೆ ಸೇರಿದವರು, ಇಬ್ಬರು ಹಿಂದುಳಿದ ವರ್ಗದವರು, ಹಾಗೂ ಒಬ್ಬರು ಸಾಮಾನ್ಯ ವರ್ಗಕ್ಕೆ ಸೇರಿದವರಾಗಿರಬೇಕು.

**2. ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿ (ಎಸ್‌ಡಿಎಂಸಿ)**

ನಾಗರಿಕ ಸೌಲಭ್ಯಗಳ ಸಮಿತಿಯು(ಗ್ರಾಮ ಪಂಚಾಯತಿಯ ಮೂಲಭೂತ ಸೌಕರ್ಯ ಸ್ಥಾಯಿಸಮಿತಿ) ಪಂಚಾಯತ್ ಪ್ರದೇಶದ ವ್ಯಾಪ್ತಿಯೊಳಗೆ ಪ್ರತಿಯೊಂದು ಶಾಲೆಗಾಗಿ ಒಂದು ಶಾಲಾ ಅಭಿವೃದ್ಧಿಯ ಮತ್ತು ಮೇಲುಸ್ತುವಾರಿ ಸಮಿತಿಯನ್ನು ರಚಿಸಲು ಕ್ರಮಕೈಗೊಳ್ಳಬೇಕು ಸದರಿ ಶಾಲೆಯ ಮುಖ್ಯಸ್ಥರು ಇಂತಹ ಸಮಿತಿಯನ್ನು ರಚಿಸುವ ಜವಾಬ್ದಾರಿ ಹೊರಬೇಕು. ಈ ಸಮಿತಿಯು ಈ ಕೆಳಕಂಡ ಸದಸ್ಯರನ್ನು ಒಳಗೊಂಡಿರುತ್ತದೆ.[36]

**ಸಮಿತಿಯ ಸದಸ್ಯರು**

1. ತಂದೆ ತಾಯಿಯರ ಪರಿಷತ್ತು ತಮ್ಮ ಪೈಕಿ ಒಂಭತ್ತು ಪ್ರತಿನಿಧಿಗಳನ್ನು ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಗೆ ಆಯ್ಕೆ ಮಾಡಬೇಕು. ಈ ಪ್ರತಿನಿಧಿಗಳ ಪೈಕಿ ಕನಿಷ್ಠ ಮೂವರು ಮಹಿಳಾ ಸದಸ್ಯರು, ಪರಿಶಿಷ್ಟ ಜಾತಿ ಮತ್ತು ಪಂಗಡಕ್ಕೆ ಸೇರಿದ ತಲಾ ಒಬ್ಬರು ಹಾಗೂ ಅಲ್ಪಸಂಖ್ಯಾತರ ಸಮುದಾಯದ ಒಬ್ಬ ಪ್ರತಿನಿಧಿಯನ್ನು ಒಳಗೊಂಡಿರಬೇಕು.

2. ಶಾಲೆಯ ಮುಖ್ಯ ಶಿಕ್ಷಕರು, ಆರೋಗ್ಯ ಕಾರ್ಯಕರ್ತರು ಹಾಗೂ ಅಂಗನವಾಡಿಯ ಕಾರ್ಯಕರ್ತೆ ಇವರು ಸಮಿತಿಯ ಪದನಿಮಿತ್ತ ಸದಸ್ಯರಾಗಿರುತ್ತಾರೆ.

3. ಸಾಧ್ಯವಿರುವ ಕಡೆಗಳಲ್ಲಿ ಶಾಲೆಯ ಉನ್ನತ ತರಗತಿಯಿಂದ ಸಂಬಂಧಪಟ್ಟ ತರಗತಿಗಳ ವಿದ್ಯಾರ್ಥಿಗಳೇ ಆಯ್ಕೆ ಮಾಡಿದ ಇಬ್ಬರು ವಿದ್ಯಾರ್ಥಿಗಳು(ಒಬ್ಬ ವಿದ್ಯಾರ್ಥಿ ಹಾಗೂ ಒಬ್ಬ ವಿದ್ಯಾರ್ಥಿನಿ) ಇವರು ವಿದ್ಯಾರ್ಥಿಗಳ ಪ್ರತಿನಿಧಿಗಳಾಗಿರುತ್ತಾರೆ.

4. ಗ್ರಾಮದಲ್ಲಿ ಯುವಕ/ಯುವತಿ ಮಂಡಳಿಯಿಂದ ಅಥವಾ ಸ್ವ ಸಹಾಯ ಗುಂಪಿನಿಂದ ಒಬ್ಬ ಪ್ರತಿನಿಧಿ.

5. ಗ್ರಾಮದಲ್ಲಿ ವಾಸವಾಗಿರುವ ಒಬ್ಬ ಶಿಕ್ಷಣತಜ್ಞ(ನಿವೃತ್ತ ಶಿಕ್ಷಕರನ್ನು ಒಳಗೊಂಡಂತೆ) ಅಥವಾ ಸ್ವಯಂ ಸೇವಾ ಸಂಸ್ಥೆಯಿಂದ ಒಬ್ಬ ಪ್ರತಿನಿಧಿ.

6. ರೂ, 10,000/–ಗಳಿಗೆ ಸಮನಾದ ಅಥವಾ ಅದಕ್ಕಿಂತ ಅಧಿಕ ಮೌಲ್ಯ ಹೊಂದಿರುವ ಜಮೀನನ್ನು ಅಥವಾ ನಗದು ಅಥವಾ ವಸ್ತುವನ್ನು ಶಾಲೆಗೆ ನೀಡಿರುವ ಒಬ್ಬ ದಾನಿ.

ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಯು ತಂದೆತಾಯಿಯರ ಪರಿಷತ್ತಿನ ಪ್ರತಿನಿಧಿಗಳಾಗಿರುವ ಸದಸ್ಯರ ಪೈಕಿ ಒಬ್ಬ ಅಧ್ಯಕ್ಷ ಹಾಗೂ ಒಬ್ಬ ಉಪಾಧ್ಯಕ್ಷರನ್ನು ಆಯ್ಕೆ ಮಾಡಬೇಕು. ಇದರಲ್ಲಿ ಒಬ್ಬರು ಮಹಿಳೆಯಾಗಿರಬೇಕು.

**ಸಮಿತಿಯ ಜವಾಬ್ದಾರಿಗಳು**

- ಶಾಲೆಯ ವಾರ್ಷಿಕ ಕ್ರಿಯಾ ಯೋಜನೆ ತಯಾರಿಯಲ್ಲಿ ಸದಸ್ಯ–ಕಾರ್ಯದರ್ಶಿಗಳಿಗೆ ಮಾರ್ಗದರ್ಶನ ನೀಡುವುದು.
- ಶಿಕ್ಷಕರು, ಬೋಧಕೇತರ ಸಿಬ್ಬಂದಿ ಹಾಗೂ ವಿದ್ಯಾರ್ಥಿಗಳ ಹಾಜರಾತಿಯ ಮೇಲ್ವಿಚಾರಣೆ ಮಾಡುವುದು.
- ಸಮಿತಿಯ ಸದಸ್ಯರು ಶಾಲೆಯಲ್ಲಿ ನಿರ್ವಹಿಸಿರುವ ಎಲ್ಲಾ ದಾಖಲಾತಿಯನ್ನು ಪರಿಶೀಲಿಸುವ ಅಧಿಕಾರ ಹೊಂದಿರುತ್ತಾರೆ.
- ಗ್ರಾಮದಲ್ಲಿ ಶಾಲೆಗೆ ಹೋಗದಿರುವ ಎಲ್ಲಾ ಮಕ್ಕಳು ಶಾಲೆಗೆ ದಾಖಲಾಗುವುದನ್ನು ಖಚಿತಪಡಿಸಿಕೊಳ್ಳಬೇಕು.
- ಗ್ರಾಮದಲ್ಲಿರುವ ದೈಹಿಕ ವಿಕಲತೆಯ ಅಥವಾ ಮಾನಸಿಕವಾಗಿ ಅಸ್ವಸ್ಥಗೊಂಡ ಮಕ್ಕಳ ವಿರುದ್ಧ ತಾರತಮ್ಯ ನಡೆಯದಿರುವುದನ್ನು ಖಚಿತಪಡಿಸಿಕೊಳ್ಳಬೇಕು. ಅಲ್ಲದೇ ಅವರು ಶಾಲೆಗೆ ಹಾಜರಾಗಲು ಸಮರ್ಥರಾಗುವಂತೆ ಶ್ರವಣ ಸಾಧನಗಳು, ಬ್ರೇಲ್ ಮುಂತಾದ ವಿಶೇಷ ಸೌಲಭ್ಯಗಳನ್ನು ಒದಗಿಸುವುದು.
- ಶಾಲೆಯಿಂದ ಹೊರಗುಳಿದ ಮಕ್ಕಳ ಪ್ರಮಾಣವನ್ನು ನಿಯತಕಾಲಿಕವಾಗಿ ಮೇಲ್ವಿಚಾರಣೆ ಮಾಡುವುದು. ಉಚಿತ ಪುಸ್ತಕಗಳು, ಮಧ್ಯಾಹ್ನದ ಬಿಸಿಯೂಟ, ಸಮವಸ್ತ್ರ ಮತ್ತು ವಿದ್ಯಾರ್ಥಿವೇತನಗಳು ಮುಂತಾದ ಪ್ರೋತ್ಸಾಹಕಗಳ ವಿತರಣೆಯನ್ನು ಖಚಿತಪಡಿಸಿಕೊಳ್ಳುವುದು.
- ಕನಿಷ್ಠ ಮೂರು ತಿಂಗಳಿಗೊಮ್ಮೆ ತಂದೆತಾಯಿಯರ ಪರಿಷತ್ತಿನ ಸಭೆಯನ್ನು ಕರೆಯುವುದು.
- ಶಾಲೆಗೆ ಮಕ್ಕಳನ್ನು ಕಳುಹಿಸಲು ವಿಫಲರಾಗುವ ತಂದೆತಾಯಿಯರ ಸಭೆಗಳನ್ನು ನಿಯತಕಾಲಿಕ ವಾಗಿ ನಡೆಸಿ ಮಕ್ಕಳನ್ನು ಶಾಲೆಗೆ ಕಳುಹಿಸುವಂತೆ ಪ್ರೋತ್ಸಾಹಿಸುವುದು.

- ಶಾಲೆಯಲ್ಲಿ ಸಂಪೂರ್ಣ ನೈರ್ಮಲ್ಯ ವ್ಯವಸ್ಥೆಯು ಸುಸ್ಥಿತಿಯಲ್ಲಿರುವಂತೆ ನೋಡಿಕೊಳ್ಳುವುದು.
- ಆಟದ ಮೈದಾನ, ಆವರಣ ಗೋಡೆಗಳು, ಕೊಠಡಿಗಳು, ಶೌಚಾಲಯ, ಪೀಠೋಪಕರಣ, ಕುಡಿಯುವ ನೀರಿನ ಸೌಲಭ್ಯ ಮುಂತಾದ ಮೂಲಭೂತ ಸೌಕರ್ಯಗಳಿಗಾಗಿ ಹೆಚ್ಚಿನ ನೆರವನ್ನು ನೀಡುವುದು. ಇದಕ್ಕಾಗಿ ಸಮಿತಿಯು ಯಾವುದೇ ಕಟ್ಟಡ ಅಥವಾ ಕಾಮಗಾರಿಗಳ ನಿರ್ಮಾಣ, ನಿರ್ವಹಣೆ, ಸುಧಾರಣೆ ಇತ್ಯಾದಿ ಮಾಡಬಹುದು.
- ಈ ಉಪ–ವಿಧಿಗಳ 10ನೇ ಖಂಡದ ಅಡಿಯಲ್ಲಿ ಅದರ ಯಾವುದೇ/ಕೆಲವು ಅಥವಾ ಎಲ್ಲಾ ಪ್ರಕಾರ್ಯಗಳ ಮುಂದುವರಿಕೆಗೆ ಅವಶ್ಯವೆನಿಸುವ ಅಥವಾ ಅನುಕೂಲಕರವೆನಿಸುವ ಸ್ಥಿರ ಅಥವಾ ಚರ ಸ್ವತ್ತು ಅಥವಾ ಯಾವುದೆ ಹಕ್ಕುಗಳು ಅಥವಾ ವಿಶೇಷ ಸೌಲಭ್ಯಗಳನ್ನು ಅರ್ಜಿಸುವುದು, ಖರೀದಿಸುವುದು, ಸ್ವಂತವಾಗಿ ಹೊಂದುವುದು, ತಾತ್ಕಾಲಿಕವಾಗಿ ಅಥವಾ ಶಾಶ್ವತವಾಗಿ ಗುತ್ತಿಗೆಗೆ, ಬಾಡಿಗೆಗೆ ಪಡೆಯಬಹುದು.
- ಸ್ವ ಇಚ್ಛೆ ಮೇರೆಗೆ ಅಥವಾ ಶಾಲಾನಿಧಿಯಿಂದ ವೆಚ್ಚವನ್ನು ಭರಿಸಿ ನಿಗದಿಪಡಿಸಿದ ಸಂಭಾವನೆ ಯನ್ನು ಸಂದಾಯ ಮಾಡುವುದರ ಮೂಲಕ ಅವಶ್ಯವಿರುವ ಕಡೆ, ಸಂದರ್ಭಾನುಸಾರ, ಶಿಕ್ಷಕರಾಗಿ ಅಥವಾ ಬೋಧಕರಾಗಿ ಸ್ಥಳೀಯ ವ್ಯಕ್ತಿಗಳ ಸೇವೆಯನ್ನು ಪಡೆಯಬಹುದು. ಆದರೆ ನಿಯತ ಹುದ್ದೆಯನ್ನು ಈ ರೀತಿಯಲ್ಲಿ ಭರ್ತಿ ಮಾಡಬಾರದು.
- ವರ್ಷದಲ್ಲಿ ಕನಿಷ್ಠ 220 ಬೋಧನಾ ದಿನಗಳನ್ನು ಖಚಿತಪಡಿಸುವುದು.
- ಶಿಕ್ಷಕರ ಸಾಧನೆಯನ್ನು ನಿಯತಕಾಲಿಕವಾಗಿ ಅವಲೋಕಿಸುವುದು. ಸರ್ವ ಶಿಕ್ಷಣ ಅಭಿಯಾನ ಅಥವಾ ಸರ್ಕಾರದ ಯಾವುದೇ ಕಾರ್ಯಕ್ರಮದ ಅಡಿಯಲ್ಲಿ ಗೊತ್ತುಪಡಿಸಿದ ಕನಿಷ್ಠ ಅರ್ಹತಾ ಮಾನದಂಡಗಳನ್ನು ಪಾಲಿಸುವಂತೆ ಮಾಡುವುದು.
- ಶಿಕ್ಷಕರ ಬೇಡಿಕೆಗಳನ್ನು ಆಧರಿಸಿ ಅವಶ್ಯಕತೆಯಾಧಾರಿತ ತರಬೇತಿಗಳನ್ನು ಒದಗಿಸಲು ಅನೂಕೂಲ ಕಲ್ಪಿಸುವುದು.
- ವಿದ್ಯಾರ್ಥಿಗಳ ಸಾಧನೆಯನ್ನು ನಿಯತಕಾಲಿಕವಾಗಿ ಅವಲೋಕಿಸುವುದು. ಎನ್.ಸಿ.ಇ.ಆರ್.ಟಿ ಮತ್ತು ರಾಜ್ಯ ಸರ್ಕಾರದ ಮಾನದಂಡಗಳನ್ನು ಪಾಲಿಸುವಂತೆ ನೋಡಿಕೊಳ್ಳುವುದು.
- ಶಾಲೆಯಲ್ಲಿ ಆರೋಗ್ಯ ಕಾರ್ಯಕ್ರಮಗಳನ್ನು ನಿಯಮಿತವಾಗಿ ಆಯೋಜಿಸಿ, ಮೇಲ್ವಿಚಾರಣೆ ನಡೆಸುವುದು.
- ಶಾಲೆಯ ಮತ್ತು ಎಸ್.ಡಿ.ಎಂ.ಸಿ. ಸಮಿತಿಯ ಎಲ್ಲಾ ಸ್ವತ್ತುಗಳು, ನಿಧಿಗಳು ಮತ್ತು ಹಣಕಾಸಿನ ಮೇಲ್ವಿಚಾರಣೆ ನಡೆಸುವುದು.

- ಈ ಉಪವಿಧಿಯ 10ನೇ ಖಂಡದ ಪ್ರಕಾರ್ಯಗಳ ಮುಂದುವರಿಕೆಗೆ ಹಣ ಮತ್ತು ನಿಧಿಗಳನ್ನು ಪಡೆಯಲು ಮನವಿಗಳು ಹಾಗೂ ಅರ್ಜಿಗಳನ್ನು ನೀಡಬಹುದು. ಅಲ್ಲದೇ, ನಗದು ರೂಪದಲ್ಲಿ ಯಾವುದೇ ದಾನಗಳು, ದೇಣಿಗೆಗಳು, ಭದ್ರತೆಗಳು ಅಥವಾ ಸ್ಥಿರ/ಚರ ರೂಪದಲ್ಲಿ ಯಾವುದೇ ಸ್ವತ್ತನ್ನು ಸ್ವೀಕರಿಸಬಹುದು.
- ಶಾಲಾ ಅಭಿವೃದ್ಧಿಯ ಕಾರ್ಯವನ್ನು ಅವಲೋಕಿಸಿ ಕನಿಷ್ಠ ಮೂರು ತಿಂಗಳಿಗೊಮ್ಮೆ ತಂದೆ ತಾಯಿಯರ ಪರಿಷತ್ತು ಮತ್ತು ಮೂಲಭೂತ ಸೌಕರ್ಯ ಸ್ಥಾಯಿಸಮಿತಿಗೆ ವರದಿಮಾಡುವುದು.
- ವರ್ಷದಲ್ಲಿ ನಾಲ್ಕು ದಿನಗಳಿಗೆ ಹೆಚ್ಚಿಲ್ಲದಂತೆ ಸ್ಥಳೀಯ ರಜಾದಿನಗಳನ್ನು ನಿರ್ಣಯಿಸುವುದು.
- ಮಕ್ಕಳು ಮಕ್ಕಳ ಸಹಾಯವಾಣಿಯ ಉಪಯೋಗ ಮತ್ತು ಉದ್ದೇಶವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುವ ರೀತಿಯ ಶಾಲೆಯಲ್ಲಿ ಮಕ್ಕಳ ಸಹಾಯವಾಣಿ ಸಂಖ್ಯೆ 1098ನ್ನು ಪ್ರದರ್ಶಿಸುವಂತೆ ಮತ್ತು ಪ್ರಚಾರ ಮಾಡುವಂತೆ ನೋಡಿಕೊಳ್ಳುವುದು.
- ಒತ್ತುವರಿ ಮತ್ತು ಯಾವುದೇ ಅಡಚಣೆಯಾಗದಂತೆ ಶಾಲಾ ಆವರಣವನ್ನು ರಕ್ಷಿಸುವುದು.
- ವಿದ್ಯಾರ್ಥಿಗಳ, ತಂದೆತಾಯಿಯರ, ಶಿಕ್ಷಕರ ಹಾಗೂ ಬೋಧಕೇತರ ಸಿಬ್ಬಂದಿ ವರ್ಗದವರ ಕುಂದುಕೊರತೆಗಳನ್ನು ಬಗೆಹರಿಸುವುದು.

**3. ಮಹಿಳೆಯರು ಮತ್ತು ಮಕ್ಕಳ ಸಾಗಾಣಿಕೆ ತಡೆ ಸಮಿತಿ**

ಮಹಿಳೆಯರ ಮತ್ತು ಮಕ್ಕಳ ಸಾಗಣೆ ಹಾಗೂ ಬಾಲವೇಶ್ಯಾ ಪದ್ಧತಿಯನ್ನು ತಡೆಗಟ್ಟಲು ಹಾಗೂ ಸಾಗಣೆಗೊಳಗಾದ ಮಹಿಳೆಯರ ರಕ್ಷಣೆ ಮತ್ತು ಪುನರ್ವಸತಿ ಕಲ್ಪಿಸುವ ಗ್ರಾಮಮಟ್ಟದ ಸಮಿತಿಯನ್ನು ರಚಿಸಬೇಕು.[37]

ಸದಸ್ಯರು

1. ಗ್ರಾಮ ಪಂಚಾಯತ್ ಅಧ್ಯಕ್ಷರು : ಅಧ್ಯಕ್ಷರು
2. ಶಾಲಾ ಮುಖ್ಯೋಪಾಧ್ಯಾಯರು : ಅಧ್ಯಕ್ಷರು
3. ಗ್ರಾಮ ಪಂಚಾಯತ್ ಕಾರ್ಯದರ್ಶಿ : ಸದಸ್ಯರು
4. ಗ್ರಾಮ ಲೆಕ್ಕಿಗರು(ಮಹಿಳೆಗೆ ಆದ್ಯತೆ) : ಸದಸ್ಯರು
5. ಎಲ್ಲಾ ಅಂಗನವಾಡಿ ಕಾರ್ಯಕರ್ತೆಯರು : ಸದಸ್ಯರು

6. ಕಿರಿಯ ಮಹಿಳಾ ಆರೋಗ್ಯ ಕಾರ್ಯಕರ್ತೆ : ಸದಸ್ಯರು

7. ಪ್ರತಿ ಗ್ರಾಮದಿಂದ ಒಬ್ಬ ಸ್ತ್ರೀ ಗುಂಪಿನ ಪ್ರತಿನಿಧಿ : ಸದಸ್ಯರು

8. ಮಹಿಳಾ ಮಂಡಳಿ ಸದಸ್ಯರು : ಸದಸ್ಯರು

9. ಯುವತಿ ಮಂಡಳಿಯ ಸದಸ್ಯರು : ಸದಸ್ಯರು

10. ಮೇಲ್ವಿಚಾರಕಿ, ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ : ಸದಸ್ಯ ಕಾರ್ಯದರ್ಶಿ

**ಸಮಿತಿಯ ಕರ್ತವ್ಯಗಳು**

- ಗ್ರಾಮ ಪಂಚಾಯತಿ ವ್ಯಾಪ್ತಿಯ 18 ವರ್ಷದೊಳಗಿನ ಎಲ್ಲಾ ಮಕ್ಕಳ ಮಾಹಿತಿಯನ್ನು ಹೊಂದುವಂತೆ ನೋಡಿಕೊಳ್ಳಬೇಕು.
- ಗ್ರಾಮ ಪಂಚಾಯತ್ ಕಛೇರಿ, ಶಾಲೆ, ಪೊಲೀಸ್, ಅಂಗನವಾಡಿ, ಮಹಿಳಾ ಸ್ವಸಹಾಯ ಸಂಘಗಳು ಮತ್ತು ಯುವ ಸಂಘಟನೆಗಳು ಮಕ್ಕಳ ಬಗ್ಗೆ ಪರಸ್ಪರ ಮಾಹಿತಿಯನ್ನು ವಿನಿಮಯ ಮಾಡಿಕೊಳ್ಳಬೇಕು.
- ಮಾರಾಟ ಅಥವಾ ಸಾಗಣೆಗೊಳಗಾದ ಮಹಿಳೆಯರಿಗೆ ಮತ್ತು ಮಕ್ಕಳಿಗೆ ರಕ್ಷಣೆ ನೀಡುವುದು. ಅವರಿಗೆ ಹಾಗೂ ಅವರ ಕುಟುಂಬದವರಿಗೆ ಆರ್ಥಿಕ, ನೈತಿಕ, ಸಾಮಾಜಿಕ, ವೈದ್ಯಕೀಯ ಹಾಗೂ ಶೈಕ್ಷಣಿಕ ಸಹಾಯ ನೀಡಬಲ್ಲವರನ್ನು ಗುರುತಿಸುವುದು.
- ಸಮುದಾಯದ ಭಾಗವಹಿಸುವಿಕೆಯೊಂದಿಗೆ ಸಾಗಣೆಯನ್ನು ನಿಷೇಧಿಸುವಲ್ಲಿ ಉಸ್ತುವಾರಿ ವಹಿಸುವುದು.
- ಮಕ್ಕಳ ಸಾಗಾಣಿಕೆ ವಿರುದ್ಧ ಕೈಗೊಳ್ಳಬಹುದಾದ ಕ್ರಮಗಳ ಕುರಿತು ಶಾಲೆಗಳಲ್ಲಿ ಹಾಗೂ ಅಂಗನವಾಡಿ ಕೇಂದ್ರಗಳಲ್ಲಿ ಅರಿವು ಮೂಡಿಸುವುದು.
- ಹೊಸ ವ್ಯಕ್ತಿಗಳು ಗ್ರಾಮಕ್ಕೆ ಆಗಮಿಸಿದ ಬಗ್ಗೆ ದಾಖಲಿಸುವುದು.
- ಗ್ರಾಮದಿಂದ ಕಾಣೆಯಾದ ಮಹಿಳೆಯರ ಮತ್ತು ಮಕ್ಕಳ ವಿವರಗಳನ್ನು ದಾಖಲಿಸುವುದು.

**4. ಬಾಲ ವಿಕಾಸ ಸಮಿತಿ**

ಸಮಗ್ರ ಬಾಲವಿಕಾಸ ಯೋಜನೆಯಡಿಯಲ್ಲಿ ಅಂಗನವಾಡಿ ಕೇಂದ್ರಗಳ ಕಾರ್ಯದಕ್ಷತೆ, ಪೂರಕ ಆಹಾರ ಕಾರ್ಯಕ್ರಮದ ಸಮರ್ಪಕ ನಿರ್ವಹಣೆ, ಪ್ರಮಾಣ, ಗುಣಮಟ್ಟ, ಆಹಾರ ಪದಾರ್ಥಗಳ ಸರಬರಾಜು ಕುರಿತಾದ ತೂಕ, ಮುಂತಾದವುಗಳ ಬಗ್ಗೆ ಪರಿಶೀಲಿಸಲು ಹಾಗೂ

ಅಂಗನವಾಡಿ ಕಾರ್ಯಕರ್ತೆಯರಿಗೆ ಅಂಗನವಾಡಿ ಕೇಂದ್ರಗಳಲ್ಲಿ ನಿರ್ವಹಿಸಬೇಕಾದ ಕಾರ್ಯ ಚಟುವಟಿಕೆಗಳಲ್ಲಿ ಸಹಕರಿಸಲು ಈ ಸಮಿತಿ ರಚಿಸಲಾಗಿದೆ. ಈ ಸಮಿತಿಯನ್ನು ಸರ್ಕಾರದ ಆದೇಶ ಸಂ.ಮಮಇ235ಐಸಿಡಿ07, ಬೆಂಗಳೂರು, ದಿನಾಂಕ:3.11.2007ರನ್ವಯ ಪುನರ್ ರಚಿಸಲಾಗಿದೆ.[38]

**ಸಮಿತಿ ಸದಸ್ಯರು**

1. ಗ್ರಾಮ ಪಂಚಾಯತ್ ಸಮಿತಿಯಿಂದ ಆಯ್ಕೆ ಮಾಡುವ ಸದಸ್ಯ(ಆಯಾ ವಾರ್ಡ್‌ನ ಸದಸ್ಯ)
2. ಮುಖ್ಯೋಪಾಧ್ಯಾಯರು(ಪ್ರಾಥಮಿಕ/ಹಿರಿಯ ಪ್ರಾಥಮಿಕ ಶಾಲೆ)
3. ವೃತ್ತ ಮೇಲ್ವಿಚಾರಕಿಯಿಂದ ಆಯ್ಕೆಯಾದ ಆ ಪ್ರದೇಶದ ಸ್ತ್ರೀಶಕ್ತಿ ಗುಂಪುಗಳ ನಾಲ್ಕು ಪ್ರತಿನಿಧಿಗಳು.
4. ವೃತ್ತ ಮೇಲ್ವಿಚಾರಕಿಯಿಂದ ಆಯ್ಕೆಯಾದ ಅಂಗನವಾಡಿ ಮಕ್ಕಳ ನಾಲ್ಕು ಜನ ತಾಯಂದಿರು (ಒಬ್ಬರು ಪ.ಜಾ./ಪ.ಪಂ.ಗೆ ಸೇರಿದವರು)
5. ಆರೋಗ್ಯ ಇಲಾಖೆಯ ಆಶಾ/ಕಿರಿಯ ಮಹಿಳಾ ಆರೋಗ್ಯ ಸಹಾಯಕಿ
6. ಒಬ್ಬ ಸ್ಥಳೀಯ ಹಿರಿಯ ನಾಗರಿಕರು
7. ಅಂಗನವಾಡಿ ಕಾರ್ಯಕರ್ತೆ

**ಬಾಲವಿಕಾಸ ಸಮಿತಿಯ ಸದಸ್ಯರ ಜವಾಬ್ದಾರಿಗಳು**

- ವರ್ಷಕ್ಕೆರಡು ಬಾರಿ ಅಂಗನವಾಡಿ ಕೇಂದ್ರದ ಸಮಿತಿಯು ಅಂಗನವಾಡಿ ಕೆಂದ್ರದ ಸುಧಾರಣೆಗಾಗಿ, ಕ್ರಿಯಾ ಯೋಜನೆಯನ್ನು ಫಲಾನುಭವಿಗಳ ಹಿತದೃಷ್ಟಿಯಿಂದ ರೂಪಿಸುವುದು. ಪ್ರತಿ ತಿಂಗಳಲ್ಲಿ ಅಂಗನವಾಡಿ ಕೇಂದ್ರಕ್ಕೆ ದಾಖಲಾಗಿರುವ ಮಕ್ಕಳ ತಾಯಂದಿರುಗಳ ಸಭೆ ನಡೆಸಿ ಕ್ರಿಯಾ ಯೋಜನೆಯಂತೆ ಮಕ್ಕಳು ಕಲಿತ ಆಟಪಾಠಗಳನ್ನು ಪ್ರದರ್ಶಿಸಿ ಪಾಲಕರಿಂದ ಸಲಹೆ ಪಡೆಯುವುದು.
- ಶಾಲಾಪೂರ್ವ ಶಿಕ್ಷಣಕ್ಕೆ ವರ್ಷಕ್ಕೊಮ್ಮೆ ನೀಡುವ ರೂ, 500/–ರಲ್ಲಿ ಮಕ್ಕಳಿಗೆ ಆಕರ್ಷಣೀಯ ಆಟಿಕೆಗಳನ್ನು ಖರೀದಿಸಿ ಮಕ್ಕಳ ಸರ್ವತೋಮುಖ ಬೆಳವಣಿಗೆಗೆ ಸಹಕಾರಿಯಾಗುವಂತೆ ಮಾಡಿಕೊಡಬೇಕು. 1–3 ವರ್ಷದ ಮಕ್ಕಳಿಗೆ ಯೋಗ್ಯವಾದ ಆಟಿಕೆಗಳನ್ನು ಮೊದಲನೆಯ ವರ್ಷದಲ್ಲಿ, ನಂತರ 3–6 ವರ್ಷದ ಮಕ್ಕಳಿಗೆ ಮುಂದಿನ ಸಾಲಿನಲ್ಲಿ ಖರೀದಿಸಲು ಕ್ರಮವಹಿಸುವುದು ಹಾಗೂ ಪೂರಕ ಸಾಮಗ್ರಿ ಒದಗಿಸುವುದು.
- ಅಂಗನವಾಡಿ ಕಟ್ಟಡ ಕಟ್ಟಲು ಸೂಕ್ತವಾದ ನಿವೇಶನ ಹಾಗೂ ಸೂಕ್ತವಾದ ಕಟ್ಟಡವನ್ನು ಒದಗಿಸಿಕೊಡುವುದು.

- ಅಂಗನವಾಡಿ ಕಟ್ಟಡ ನಿರ್ಮಾಣದ ವೇಳೆಯಲ್ಲಿ ಗುಣಾತ್ಮಕವಾದ ಕಟ್ಟಡ ನಿರ್ಮಾಣ ವಾಗುವಂತೆ ಮೇಲ್ವಿಚಾರಣೆ ನಡೆಸುವುದು. ಆ ಸಮಯದಲ್ಲಿ ಅಂಗವಿಕಲ ಮಕ್ಕಳ ಉಪಯೋಗಕ್ಕಾಗಿ ರ್‍ಯಾಂಪ್‌ಗಳನ್ನು ಕಡ್ಡಾಯವಾಗಿ ಇಡುವಂತೆ ಗಮನಿಸುವುದು.
- ಅಂಗನವಾಡಿ ಕಟ್ಟಡಗಳ ಸಣ್ಣಪುಟ್ಟ ದುರಸ್ತಿಗಳು, ಸುಣ್ಣಬಣ್ಣವನ್ನು ಕಾಲಕಾಲಕ್ಕೆ ಮಾಡಿಸುವುದು. ಅಂಗನವಾಡಿಗಳಲ್ಲಿ ಶೌಚಾಲಯ ನಿರ್ಮಿಸುವ ಹಂತದಲ್ಲಿ ಅಂಗವಿಕಲ ಮಕ್ಕಳ ಅನುಕೂಲವನ್ನು ಪರಿಗಣಿಸುವುದು. ಶೌಚಾಲಯಗಳಿಗೆ ನೀರಿನ ಸೌಕರ್ಯವನ್ನು ಒದಗಿಸುವುದು ಹಾಗೂ ಅದನ್ನು ಸದುಪಯೋಗಪಡಿಸಿಕೊಳ್ಳುವಂತೆ ಮೇಲುಸ್ತುವಾರಿ ಮಾಡುವುದು.
- ಅಂಗನವಾಡಿ ಕಾರ್ಯಕರ್ತೆಯು ಪ್ರತಿ ವರ್ಷ ತಪ್ಪದೇ ತನ್ನ ವ್ಯಾಪ್ತಿಯ ಸಮೀಕ್ಷಾ ಕಾರ್ಯವನ್ನು ನಡೆಸುವ ರೀತಿ ಮೇಲ್ವಿಚಾರಣೆ ಮಾಡುವುದು. ಸಮೀಕ್ಷಾ ವ್ಯಾಪ್ತಿ ಪ್ರದೇಶದಲ್ಲಿನ ಆರು ವರ್ಷದೊಳಗಿನ ಎಲ್ಲಾ ಮಕ್ಕಳು, ಗರ್ಭಿಣಿ ಹಾಗೂ ಬಾಣಂತಿಯರು ಅಂಗನವಾಡಿಯಲ್ಲಿ ಫಲಾನುಭವಿಗಳಾಗಿ ದಾಖಲಾಗುವಂತೆ ನೋಡಿಕೊಳ್ಳುವುದು ಹಾಗೂ ಪರಿಶೀಲಿಸುವುದು. ಅವಶ್ಯವಿದ್ದಲ್ಲಿ ವರ್ಷಕ್ಕೊಂದು ಬಾರಿ ದಾಖಲಾತಿ ಆಂದೋಲನ ನಡೆಸುವುದು.
- ಅಂಗನವಾಡಿ ಕೇಂದ್ರವು ಬೆಳಿಗ್ಗೆ 9.30ರಿಂದ ಮಧ್ಯಾಹ್ನ 1.30ರ ವರೆಗೆ ಸಮರ್ಪಕವಾಗಿ ನಡೆಯುವಂತೆ ಮೇಲ್ವಿಚಾರಣೆ ಮಾಡುವುದು. ಅಂಗನವಾಡಿ ಕಾರ್ಯಕರ್ತೆಯು ಮಧ್ಯಾಹ್ನ 2.30ರಿಂದ 4.30ರ ವರೆಗೆ ಮನೆ ಭೇಟಿ ಹಾಗೂ ಸ್ತ್ರೀಶಕ್ತಿ ಗುಂಪುಗಳ ಸಭೆಗಳನ್ನು ನಡೆಸುವಂತೆ ಮೇಲ್ವಿಚಾರಣೆ ಮಾಡುವುದು.
- ಅಂಗನವಾಡಿ ಕೇಂದ್ರಕ್ಕೆ ಆಹಾರ ಸಾಮಗ್ರಿಗಳ ಸರಬರಾಜು ಆಗುವ ವೇಳೆಯಲ್ಲಿ ಸಮಿತಿಯ ಇಬ್ಬರು ಸದಸ್ಯರು ಖುದ್ದಾಗಿ ಹಾಜರಿದ್ದು ಗುಣಮಟ್ಟ ಮತ್ತು ಸರಿಯಾದ ಪ್ರಮಾಣದಲ್ಲಿರುವಂತೆ ದೃಢೀಕರಿಸುವುದು.
- ಅಂಗನವಾಡಿ ಕೇಂದ್ರದಲ್ಲಿ ಪೂರಕ ಪೌಷ್ಟಿಕ ಆಹಾರ ವಿತರಣಾ ಕಾರ್ಯಕ್ರಮ ಯಾವುದೇ ಕುಂಠಿತವಿಲ್ಲದೆ ನಡೆಯುವಂತೆ ಮೇಲ್ವಿಚಾರಣೆ ನಡೆಸುವುದು. ಸ್ಥಳೀಯವಾಗಿ ದೊರಕುವ ಆಹಾರ ಪದಾರ್ಥಗಳಾದ ತರಕಾರಿ, ಸೊಪ್ಪು ಮತ್ತು ಹಣ್ಣುಗಳನ್ನು ಉಚಿತವಾಗಿ ದೊರಕಿಸಲು ಪ್ರಯತ್ನಿಸುವುದು.
- ತೀವ್ರ ನ್ಯೂನ್ಯ ಪೋಷಣೆಗೆ ಒಳಗಾದ ಮಕ್ಕಳು ಬಡ ಕುಟುಂಬದಲ್ಲಿ ಇದ್ದು, ಅವರ ತಂದೆ ತಾಯಿಗಳು ಹೆಚ್ಚಿನ ಪೌಷ್ಟಿಕ ಆಹಾರ ಮತ್ತು ಔಷಧೋಪಚಾರ ನೀಡಲು ಅಶಕ್ತರಾಗಿದ್ದಲ್ಲಿ ಅಂತಹ ಮಕ್ಕಳಿಗೆ ಪ್ರಾಯೋಜಕತೆ ಮೂಲಕ ಸಹಾಯವನ್ನು ಒದಗಿಸುವುದು.

- ಆರೋಗ್ಯ ಸೇವೆಗಳಾದ ಚುಚ್ಚುಮದ್ದು ಕಾರ್ಯಕ್ರಮ, ಆರೋಗ್ಯ ತಪಾಸಣೆ ಹಾಗೂ ಆರೋಗ್ಯ ಮತ್ತು ಪೌಷ್ಠಿಕ ಶಿಬಿರ ಕ್ರಮವಾಗಿ ನಡೆಯುವಂತೆ ನೋಡಿಕೊಳ್ಳುವುದು.
- ಅಂಗನವಾಡಿ ಕೇಂದ್ರದಲ್ಲಿ ದಾಖಲಾಗಿರುವ ಮಕ್ಕಳ ಹುಟ್ಟುಹಬ್ಬಗಳನ್ನು ಆಚರಿಸುವಂತೆ ಕ್ರಮವಹಿಸುವುದು.
- ಅಂಗನವಾಡಿ ಕೇಂದ್ರಗಳಲ್ಲಿ ರಾಷ್ಟ್ರೀಯ ಹಬ್ಬಗಳು ಹಾಗೂ ಮಕ್ಕಳ ದಿನಾಚರಣೆ ವಿಜೃಂಭಣೆ ಯಿಂದ ನಡೆಯುವಂತೆ ಏರ್ಪಾಡು ಮಾಡುವುದು.
- ಅಂಗನವಾಡಿ ಕಾರ್ಯಕರ್ತೆ ಹಾಗೂ ಶಿಶು ಅಭಿವೃದ್ಧಿ ಯೋಜನೆಯ ಮೇಲ್ವಿಚಾರಕ ಸಿಬ್ಬಂದಿ ಹಾಗೂ ಗ್ರಾಮ ಪಂಚಾಯತ್ ನಡುವೆ ಸಂಪರ್ಕ ಸೇತುವೆಯಾಗಿರುವುದು.
- ಬಾಲ ವಿಕಾಸ ಸಮಿತಿಯು ಪ್ರತಿ ತಿಂಗಳೂ ತಪ್ಪದೇ ಸಭೆ ನಡೆಸುವುದು, ಕುಂದುಕೊರತೆಗಳ ಬಗ್ಗೆ ಚರ್ಚಿಸುವುದು ಹಾಗೂ ಕ್ರಮವಹಿಸುವುದು.
- ಆರು ವರ್ಷದೊಳಗಿನ ಮಕ್ಕಳು ಅಂಗನವಾಡಿ ಕೇಂದ್ರ ಬಿಡದಂತೆ ಪೋಷಕರಿಗೆ ಅರಿವು ಮೂಡಿಸುವುದು.
- ಅಂಗನವಾಡಿ ಕೇಂದ್ರಗಳನ್ನು ಬಿಟ್ಟ ಆರು ವರ್ಷದ ಮೇಲ್ಪಟ್ಟ ಮಕ್ಕಳು ಶಾಲೆಗೆ ಸೇರುವಂತೆ ಪೋಷಕರಿಗೆ ತಿಳಿಸಿ ಅನುಪಾಲನೆ ಮಾಡುವುದು.
- ಅಂಗನವಾಡಿ ಕೇಂದ್ರಗಳ ಅಭಿವೃದ್ಧಿಗೆ ಅವಶ್ಯವಿರುವ ಇತರೆ ವಿವಿಧ ಚಟುವಟಿಕೆಗಳನ್ನು ಹಮ್ಮಿಕೊಳ್ಳುವುದು

**5. ಗ್ರಾಮ ಆರೋಗ್ಯ, ನೈರ್ಮಲ್ಯ ಸಮಿತಿ ಮತ್ತು ಗ್ರಾಮ ಆರೋಗ್ಯ ಮೇಲ್ವಿಚಾರಣಾ ಸಮಿತಿ**

ಗ್ರಾಮೀಣ ಪ್ರದೇಶದ ಬಡವರಿಗೆ, ಮಹಿಳೆಯರಿಗೆ ಮತ್ತು ಮಕ್ಕಳಿಗೆ ಪರಿಣಾಮಕಾರಿಯಾದ ಹಾಗೂ ಗುಣಮಟ್ಟದ ಆರೋಗ್ಯ ರಕ್ಷಣೆಯನ್ನು ಒದಗಿಸುವ ಸಲುವಾಗಿ ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನವನ್ನು ಆರಂಭಿಸಲಾಗಿದೆ. ಈ ಅಭಿಯಾನದ ಮುಖ್ಯ ಉದ್ದೇಶವೆಂದರೆ, ತಾಯಂದಿರ ಹಾಗೂ ಶಿಶು ಮರಣ ಪ್ರಮಾಣ ಕಡಿಮೆ ಮಾಡುವುದು. ಸಾರ್ವಜನಿಕ ಆರೋಗ್ಯ ಸೇವೆಗಳು ಎಲ್ಲರಿಗೂ ಲಭ್ಯವಾಗುವಂತೆ ಮಾಡುವುದು, ಸಾಂಕ್ರಾಮಿಕ ಹಾಗೂ ಸಾಂಕ್ರಾಮಿಕವಲ್ಲದ ರೋಗಗಳನ್ನು ನಿಯಂತ್ರಿಸುವುದು, ಅಲ್ಲದೇ ಸ್ಥಳೀಯ ಆರೋಗ್ಯ ಸಂಪ್ರದಾಯಗಳನ್ನು ಪುನಶ್ಚೇತನ ಗೊಳಿಸಿ, ಆರೋಗ್ಯಕರ ಜೀವನಶೈಲಿಯನ್ನು ಪ್ರಚುರಗೊಳಿಸುವುದೇ ಈ ಸಮಿತಿ ಉದ್ದೇಶವಾಗಿದೆ.[39]

ಈ ನಿಟ್ಟಿನಲ್ಲಿ ಯೋಜನೆಯ ಮೇಲ್ವಿಚಾರಣೆ ಹಾಗೂ ಅನುಷ್ಠಾನಕ್ಕಾಗಿ ಎಲ್ಲಾ ಹಂತಗಳಲ್ಲಿ ಸಮಿತಿಗಳನ್ನು ರಚಿಸಲಾಗಿದೆ. ಮುಖ್ಯವಾಗಿ ಗ್ರಾಮಮಟ್ಟದಲ್ಲಿ ಗ್ರಾಮ ಆರೋಗ್ಯ ಹಾಗೂ ನೈರ್ಮಲ್ಯ ಸಮಿತಿ/ಗ್ರಾಮ ಆರೋಗ್ಯ ಮತ್ತು ಮೇಲ್ವಿಚಾರಣಾ ಸಮಿತಿಯನ್ನು ರಚಿಸಲಾಗಿದೆ.

**ಸಮಿತಿ ಸದಸ್ಯರು**

1. 1000 ಜನಸಂಖ್ಯೆ ಮೀರಿರುವ ಕಂದಾಯ ಗ್ರಾಮಕ್ಕೆ ಒಂದು ಸಮಿತಿ ರಚನೆಯಾದಬೇಕು. ಸಮಿತಿಯು ಗ್ರಾಮ ಸಭೆಯಿಂದ ಆಯ್ಕೆಯಾದ 15 ಸದಸ್ಯರನ್ನು ಹೊಂದಿರಬೇಕು.
2. ಸಮಿತಿಯಲ್ಲಿ ಕನಿಷ್ಠ ಎಂಟು ಮಂದಿ ಮಹಿಳೆಯರಿದ್ದು, ಅವರಲ್ಲಿ ಮೂವರು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದ್ದು, ಇಬ್ಬರು ಸ್ವಸಹಾಯ ಸಂಘಗಳ ಸದಸ್ಯರಾಗಿರಬೇಕು. ಉಳಿದ ಏಳು ಸದಸ್ಯರಲ್ಲಿ ಕನಿಷ್ಠ ಇಬ್ಬರು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿರಬೇಕು.
3. ಕಂದಾಯ ಗ್ರಾಮಕ್ಕೆ ಸೇರಿದ ಉಪ ಗ್ರಾಮಗಳಿಂದಲೂ ಕಡ್ಡಾಯ ಸದಸ್ಯತ್ವ ಹೊಂದಿರಬೇಕು.
4. ಮಾನ್ಯತೆ ಪಡೆದ ಸಾಮಾಜಿಕ ಆರೋಗ್ಯ ಕಾರ್ಯಕರ್ತೆ(ಆಶಾ) ಪದನಿಮಿತ್ತ ಸದಸ್ಯೆ ಹಾಗೂ ಸಮಿತಿಯ ಕಾರ್ಯದರ್ಶಿಯಾಗುವರು.
5. ಗ್ರಾಮ ಪಂಚಾಯತಿಯ ಕೇಂದ್ರಸ್ಥಾನದ ಗ್ರಾಮವಾದರೆ ಪಂಚಾಯತ್ ಅಧ್ಯಕ್ಷರೇ ಈ ಸಮಿತಿಯ ಅಧ್ಯಕ್ಷರು. ಪಂಚಾಯತ್ ವ್ಯಾಪ್ತಿಯಲ್ಲಿ ಒಂದಕ್ಕಿಂತ ಹೆಚ್ಚು ಗ್ರಾಮಗಳಿದ್ದಲ್ಲಿ ಆ ಗ್ರಾಮಗಳ ಗ್ರಾಮ ಪಂಚಾಯತ್ ಸದಸ್ಯರು ಸಮಿತಿಯ ಅಧ್ಯಕ್ಷರಾಗುವರು. ಒಬ್ಬರಿಗಿಂತ ಹೆಚ್ಚು ಸದಸ್ಯರು ಈ ಗ್ರಾಮದಲ್ಲಿ ಆಯ್ಕೆಯಾಗಿದ್ದರೆ ಅವರ ಪೈಕಿ ಒಬ್ಬರನ್ನು ಗ್ರಾಮ ಪಂಚಾಯತಿಯಿಂದ ನಾಮ ನಿರ್ದೇಶನ ಮಾಡಬೇಕು.
6. ಆಯಾ ಗ್ರಾಮಕ್ಕೆ ಸೇರಿದ ಕಿರಿಯ ಆರೋಗ್ಯ ಸಹಾಯಕಿ, ಕಿರಿಯ ಪುರುಷ ಆರೋಗ್ಯ ಸಹಾಯಕ, ಪ್ರಾಥಮಿಕ ಶಾಲಾ ಶಿಕ್ಷಕರು(ಮಹಿಳೆಯರಿಗೆ ಆದ್ಯತೆ), ಗ್ರಾಮದ ಎಲ್ಲಾ ಅಂಗನವಾಡಿ ಕಾರ್ಯಕರ್ತೆಯರು, ಸಮಿತಿಯ ಪದನಿಮಿತ್ತ ಸದಸ್ಯರಾಗಿರುತ್ತಾರೆ.
7. ಸಮಿತಿಯ ಒಟ್ಟು ಸದಸ್ಯರಲ್ಲಿ ಮೂರನೇ ಒಂದು ಭಾಗದ ಸದಸ್ಯರನ್ನು ಲಾಟರಿ ಎತ್ತುವ ಮೂಲಕ ಮೊದಲ ವರ್ಷದ ಕೊನೆಗೆ ನಿವೃತ್ತಿಗೊಳಿಸಿ ಅವರ ಸ್ಥಾನಕ್ಕೆ ಅದೇ ಪ್ರವರ್ಗದ ಹೊಸ ಸದಸ್ಯರನ್ನು ನೇಮಿಸಿಕೊಳ್ಳಬೇಕು. ಈ ಪ್ರಕ್ರಿಯೆ ಎರಡು ಮತ್ತು ಮೂರನೇ ವರ್ಷದ ಕೊನೆಗೂ ಅನ್ವಯವಾಗುತ್ತದೆ. ಪ್ರತಿ ವರ್ಷ ಸಮಿತಿಯ ಸದಸ್ಯರ ನಿವೃತ್ತಿ ಮತ್ತು ಹೊಸ ಸದಸ್ಯರ ಆಯ್ಕೆ ಪ್ರಕ್ರಿಯೆಯನ್ನು ಗ್ರಾಮ ಪಂಚಾಯತ್ ಕಾರ್ಯದರ್ಶಿ ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರದ ವೈದ್ಯಾಧಿಕಾರಿಗಳು ಜಂಟಿಯಾಗಿ ನಿರ್ವಹಿಸಬೇಕು.

**ಸಮಿತಿಯ ಜವಾಬ್ದಾರಿಗಳು**

- ಗ್ರಾಮ ಸಭೆಗಳಲ್ಲಿ ಗ್ರಾಮ ಪಂಚಾಯತ್ ವ್ಯಾಪ್ತಿಗೆ ಒಳಪಡುವ ಗ್ರಾಮಗಳ ಆರೋಗ್ಯ ಸಮಸ್ಯೆಗಳನ್ನು ಚರ್ಚಿಸುವುದು.

- ಎನ್.ಆರ್.ಹೆಚ್.ಎಮ್. ಕಾರ್ಯಕ್ರಮದಡಿಯಲ್ಲಿ ಬರುವ ಆರೋಗ್ಯ ಚಟುವಟಿಕೆಗಳನ್ನು ಗ್ರಾಮ ಸಭೆಯಲ್ಲಿ ಸಿದ್ಧಪಡಿಸಿ ಅದರ ಪ್ರಗತಿಯನ್ನು ಪರಿಶೀಲಿಸುವುದು.
- ಗ್ರಾಮ ಆರೋಗ್ಯ ಯೋಜನೆಯನ್ನು ಜನಸಹಭಾಗಿತ್ವ ಪ್ರಕ್ರಿಯೆ ಮೂಲಕ ತಯಾರಿಸುವುದು.
- ಜನನ ಮತ್ತು ಮರಣ ನೋಂದಣಿಯನ್ನು ಪ್ರೋತ್ಸಾಹಿಸುವುದು.
- ತಾಯಂದಿರ, ನವಜಾತ ಶಿಶು ಹಾಗೂ ಐದು ವರ್ಷದೊಳಗಿನ ಮಕ್ಕಳ ಮರಣಗಳ ಬಗ್ಗೆ ಪರಿಶೋಧನೆ ಮಾಡುವುದು.
- ಸಾಂಕ್ರಾಮಿಕ ರೋಗಗಳು ಕಾಣಿಸಿಕೊಂಡಾಗ ಅವುಗಳ ಬಗ್ಗೆ ಅಧಿಕಾರಿಗಳಿಗೆ ವರದಿ ಮಾಡಬೇಕು ಹಾಗೂ ಅವುಗಳ ನಿಯಂತ್ರಣಕ್ಕಾಗಿ ಕ್ರಮಗಳನ್ನು ಕೈಗೊಳ್ಳುವುದು.
- ಗ್ರಾಮಮಟ್ಟದಲ್ಲಿ ಹಾನಿಕರ ಹಾಗೂ ಅನೈತಿಕ ಚಿಕಿತ್ಸಾ ಪದ್ಧತಿಯಲ್ಲಿ ತೊಡಗಿರುವವರ ಮೇಲೆ ಗಮನವಿಡುವುದು.
- ಎನ್.ಆರ್.ಎಚ್.ಎಮ್. ಕಾರ್ಯಕ್ರಮದಡಿಯಲ್ಲಿ ಅನುಷ್ಠಾನದ ಪ್ರಗತಿಯನ್ನು ಖಚಿತಪಡಿಸಿ ಕೊಳ್ಳಲು ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ ಸಮಿತಿಯು ಪ್ರತಿ ತಿಂಗಳ ಮೊದಲ ಸೋಮವಾರ ಅಪರಾಹ್ನ ಕಡ್ಡಾಯವಾಗಿ ಸಭೆ ಸೇರಬೇಕು. ಸಭೆಯ ನೋಟಿಸನ್ನು ಕನಿಷ್ಠ ಮೂರು ದಿನಗಳಿಗೆ ಮುಂಚಿತವಾಗಿ ಕಳುಹಿಸಬೇಕು.
- ಸಮಿತಿಯ ನೇತೃತ್ವದಲ್ಲಿ ವರ್ಷಕ್ಕೆ ನಾಲ್ಕು ಬಾರಿ "ಆರೋಗ್ಯ ಜನಸಂವಾದ" ಕಾರ್ಯಕ್ರಮವನ್ನು ಹಮ್ಮಿಕೊಂಡು ಆರೋಗ್ಯ ಇಲಾಖೆಯ ಸೇವೆಗಳು ಮತ್ತು ಕೊರತೆಗಳ ಬಗ್ಗೆ ಸಾರ್ವಜನಿಕರಿಂದ ಅಭಿಪ್ರಾಯ ಪಡೆದು ಸೇವೆಗಳನ್ನು ಉತ್ತಮಪಡಿಸುವ ನಿಟ್ಟಿನಲ್ಲಿ ಕಾರ್ಯನಿರ್ವಹಿಸುವುದು.

**ಮುಕ್ತನಿಧಿಯ ಬಳಕೆ**

ಪ್ರತಿ ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ ಸಮಿತಿಗೆ ವಾರ್ಷಿಕ ರೂ.10,000/–ಗಳ ಮುಕ್ತ ಅನುದಾನವನ್ನು ನೀಡಲಾಗುತ್ತಿದೆ. ಈ ಅನುದಾನವನ್ನು ಕೆಳಕಂಡ ಆರೋಗ್ಯ ಚಟುವಟಿಕೆಗಳಿಗೆ ಬಳಸಬಹುದಾಗಿದೆ.

1. ಅವಶ್ಯವಿದ್ದಾಗ ಕಷ್ಟದಲ್ಲಿರುವ ಗ್ರಾಮದ ಕುಟುಂಬಗಳಿಗೆ ಹಣದ ಸಹಾಯ ಮಾಡಿ ಕಂತುಗಳಲ್ಲಿ ಮರುಪಾವತಿ ಮಾಡಲು ಸುತ್ತುನಿಧಿಯಾಗಿ ಬಳಸಬಹುದಾಗಿದೆ.
2. ಗ್ರಾಮ ನೈರ್ಮಲ್ಯ, ಸ್ವಚ್ಛತೆ, ಶಾಲಾ ಚಟುವಟಿಕೆ, ಸಮಗ್ರ ಮಕ್ಕಳ ಅಭಿವೃದ್ಧಿ ಕಾರ್ಯಕ್ರಮ, ಅಂಗನವಾಡಿ ಚಟುವಟಿಕೆ, ಕುಟುಂಬಗಳ ಸಮೀಕ್ಷೆಯ ಕಾರ್ಯಕ್ಕಾಗಿ ಬಳಸಬಹುದಾಗಿದೆ.

3. ವಿಶೇಷ ಸಂದರ್ಭಗಳಲ್ಲಿ ನಿರಾಶ್ರಿತ ಮಹಿಳೆ, ಬಡ ಕುಟುಂಬಗಳ ಆರೋಗ್ಯಪಾಲನೆಗಾಗಿ ಉಪಯೋಗಿಸಬಹುದಾಗಿದೆ.

4. ಮುಕ್ತನಿಧಿಯನ್ನು ಸಾಧ್ಯವಾದಷ್ಟು ಸಮುದಾಯ ಚಟುವಟಿಕೆಗಳಾದ ಪೌಷ್ಟಿಕಾಂಶ, ವಿದ್ಯಾಭ್ಯಾಸ, ನೈರ್ಮಲ್ಯ, ಪರಿಸರ ಸಂರಕ್ಷಣೆ, ಸಾರ್ವಜನಿಕ ಆರೋಗ್ಯ ಮುಂತಾದವುಗಳಿಗೆ ಬಳಸಬಹುದಾಗಿದೆ.

5. ಪ್ರತಿ ಗ್ರಾಮವು ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ ಸಮಿತಿಗೆ ವಂತಿಗೆ ನೀಡಬಹುದಾಗಿದೆ.

**6. ಗ್ರಾಮ ನೀರು ಸರಬರಾಜು ಮತ್ತು ನೈರ್ಮಲ್ಯ ಸಮಿತಿ**

ಗ್ರಾಮಮಟ್ಟದಲ್ಲಿ ನೀರು ಸರಬರಾಜು ಮತ್ತು ನೈರ್ಮಲ್ಯ ಯೋಜನೆಗಳನ್ನು ಸಮರ್ಪಕವಾಗಿ ರೂಪಿಸಲು, ಅನುಷ್ಠಾನಗೊಳಿಸಲು ಮತ್ತು ನಿರ್ವಹಿಸುವ ಸಲುವಾಗಿ ಗ್ರಾಮ ಸಭೆಯ ಮೂಲಕ ಗ್ರಾಮ ನೀರು ಸರಬರಾಜು ಮತ್ತು ನೈರ್ಮಲ್ಯ ಸಮಿತಿಯನ್ನು ಗ್ರಾಮ ಪಂಚಾಯತಿಯ ಉಪ ಸಮಿತಿಯನ್ನಾಗಿ ರಚಿಸಬೇಕಿದೆ.[40] ಸಮಿತಿಯ ರಚನೆ ಮತ್ತು ಕಾರ್ಯನಿರ್ವಹಣೆ ಕುರಿತ ವಿವರಗಳು ಈ ಕೆಳಗಿನಂತಿವೆ.

**ಸಮಿತಿಯ ಸದಸ್ಯರುಗಳು**

1. ಗ್ರಾಮ ಪಂಚಾಯತಿಯ ಎಲ್ಲಾ ಸದಸ್ಯರು ಅಥವಾ ಗ್ರಾಮ ಪಂಚಾಯತಿಯ ತೀರ್ಮಾನದಂತೆ ನೇಮಕವಾಗುವ ಸದಸ್ಯರುಗಳು.

2. ಮಹಿಳಾ ಮಂಡಳಿ ಅಥವಾ ಯುವಕ ಮಂಡಳಿ ಇತ್ಯಾದಿ ಸಂಘಗಳ ಪ್ರತಿನಿಧಿಗಳು.

3. ಗ್ರಾಮದ ಮುಖಂಡರು.

4. ಪದನಿಮಿತ್ತ ಸದಸ್ಯರಾಗಿ ಗ್ರಾಮ ಪಂಚಾಯತಿಯ ಕಾರ್ಯದರ್ಶಿ, ಸಹಾಯಕ ಕಿರಿಯ ಅಭಿಯಂತರರು (ಜೆ.ಇ.) ಹಾಗೂ ಕಿರಿಯ ಆರೋಗ್ಯ ಸಹಾಯಕರು.

ಒಟ್ಟು ಸದಸ್ಯರಲ್ಲಿ ಮೂರನೇ ಒಂದು ಭಾಗಕ್ಕಿಂತ ಕಡಿಮೆ ಇರದಂತೆ ಮಹಿಳಾ ಸದಸ್ಯರಿರಬೇಕು. ಶೇ.18ರಷ್ಟ ಪರಿಶಿಷ್ಟ ಜಾತಿ/ಪಂಗಡಕ್ಕೆ ಸೇರಿದ ಸದಸ್ಯರು ಇರಲೇಬೇಕು. ಗ್ರಾಮ ಪಂಚಾಯತಿಯ ಸದಸ್ಯರಲ್ಲದೇ, ಸಮಿತಿಯ ಇತರ ಸದಸ್ಯರ ಸಂಖ್ಯೆ ಎಂಟನ್ನು ಮೀರಬಾರದು.

**ಸಮಿತಿಯ ಜವಾಬ್ದಾರಿಗಳು**

- ಪ್ರಯೋಜನೆ ಮೂಲಕ ಜಾರಿಗೊಳಿಸುವ ಕಾರ್ಯಕ್ರಮಗಳಿಗೆ ಗ್ರಾಮಸ್ಥರು ಕೊಡಬೇಕಾದ ವಂತಿಗೆಯನ್ನು ಸಂಗ್ರಹ ಮಾಡುವುದು ಹಾಗೂ ಯೋಜನೆಯಿಂದ ಮಾಡಿದ ಸಮಸ್ತ ಆಸ್ತಿಯನ್ನು ನಿರಂತರ ಬಳಕೆ ಮಾಡುವುದು ಹಾಗೂ ಉತ್ತಮವಾಗಿ ನಿರ್ವಹಿಸುವುದು.

- ನೀರು ಸರಬರಾಜು ಮತ್ತು ನೈರ್ಮಲ್ಯ ಸೌಲಭ್ಯಗಳ ನಿರ್ಮಾಣ ಸಮಯದಲ್ಲಿ ಮೇಲುಸ್ತುವಾರಿಯನ್ನು ನೋಡಿಕೊಳ್ಳುವುದು ಅಲ್ಲದೇ ವ್ಯವಸ್ಥೆಯನ್ನು ಬಳಕೆಗೆ ಸಿದ್ಧಪಡಿಸುವ ಸಮಯದಲ್ಲಿ ಜಂಟಿ ಮೇಲ್ವಿಚಾರಣೆ ಮಾಡುವುದು.
- ನೈರ್ಮಲ್ಯಕ್ಕೆ ಸಂಬಂಧಿಸಿದ ಕಾಮಗಾರಿಗಳಿಗೆ ವಸ್ತುಗಳು, ಕಾರ್ಮಿಕರನ್ನು ಒದಗಿಸಿದ್ದಲ್ಲಿ ಅಂತಹ ಕೆಲಸಗಳಿಗೆ ಒರ್ವ ಮೇಲ್ವಿಚಾರಕನನ್ನು ನೇಮಿಸುವುದು.
- ಪ್ರಾಯೋಜನೆಯ ಚಟುವಟಿಕೆಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಗ್ರಾಮದ ಮಹಿಳೆಯರು ಭಾಗವಹಿಸುವಂತೆ ಪ್ರೇರೇಪಣೆ ನೀಡುವುದು.
- ನೀರು ಮತ್ತು ನೈರ್ಮಲ್ಯಕ್ಕೆ ಸಂಬಂಧಿಸಿದಂತೆ ದೈನಂದಿನ ಸಮಸ್ಯೆಗಳನ್ನು ಬಗೆಹರಿಸುವುದು ಹಾಗೂ ಈ ವ್ಯವಸ್ಥೆಯ ನಿರ್ವಹಣೆಯ ಜವಾಬ್ದಾರಿಯನ್ನು ಹೊರುವುದು.
- ಬಳಕೆದಾರರಿಂದ ನೀರಿನ ಕರವನ್ನು ವಸೂಲಿ ಮಾಡುವುದು. ನೀರಿನ ಕರವನ್ನು ಕಾಲಕಾಲಕ್ಕೆ ಅವಶ್ಯವೆಂದು ಕಂಡುಬಂದಲ್ಲಿ ಪರಿಷ್ಕರಿಸಿ ಗ್ರಾಮ ಪಂಚಾಯತ್‌ನ ಅನುಮೋದನೆ ಪಡೆದುಕೊಳ್ಳುವುದು.
- ಪ್ರತಿ ಆರು ತಿಂಗಳಿಗೊಮ್ಮೆ ಗ್ರಾಮ ಸಭೆಯಲ್ಲಿ ಕುಡಿಯುವ ನೀರಿನ ಯೋಜನೆಗಳ ಆದಾಯ ಮತ್ತು ಖರ್ಚಿನ ವಿವರವನ್ನು ಸಮುದಾಯಕ್ಕೆ ಮಂಡಿಸುವುದು.
- ನೀರು ಹಾಗೂ ನೈರ್ಮಲ್ಯ ಯೋಜನೆಯ ತಯಾರಿ ಹಂತದಲ್ಲಿ ಗ್ರಾಮಸ್ಥರಿಗೆ ಮಾಹಿತಿ ನೀಡಬೇಕು. ಹಾಲಿ ಇರುವ ನೀರು ಸರಬರಾಜು ಮತ್ತು ನೈರ್ಮಲ್ಯ ವ್ಯವಸ್ಥೆಗಳ ಕುಂದುಕೊರತೆಗಳನ್ನು ಚರ್ಚಿಸಬೇಕು. ವ್ಯವಸ್ಥೆ ಅಭಿವೃದ್ಧಿಪಡಿಸಲು ಇರುವ ವಿವಿಧ ಮಾರ್ಗಗಳ ಕುರಿತು ಗ್ರಾಮಸ್ಥರೊಡನೆ ಚರ್ಚಿಸಬೇಕು.
- ಯೋಜನೆಯ ಅನುಷ್ಠಾನದ ಹಂತದಲ್ಲಿ ಕಾಮಗಾರಿಯಲ್ಲಿ ಉಪಯೋಗಿಸುವ ಪೈಪು, ಸಿಮೆಂಟ್, ವಾಲ್ವ್, ಮೋಟಾರ್, ಪ್ಯಾನಲ್ ಬೋರ್ಡ್, ಮರಳು, ಜಲ್ಲಿ ಇತ್ಯಾದಿ ಸಾಮಗ್ರಿಗಳ ವಾಸ್ತವ ಗುಣಮಟ್ಟವನ್ನು ಪರಿಶೀಲಿಸುವುದು. ಯೋಜನೆಯ ವಿನ್ಯಾಸದಂತೆ ಕಾಮಗಾರಿಗಳ ಅನುಷ್ಠಾನವಾಗುತ್ತಿರುವುದನ್ನು ಖಾತ್ರಿಪಡಿಸಿಕೊಳ್ಳುವುದು.
- ಸಮಿತಿ ಅಂದಾಜು ಪಟ್ಟಿಯಲ್ಲಿ ಶಿಫಾರಸ್ಸು ಮಾಡಿರುವ ಕಂಪನಿಗಳಿಂದಲೇ ಗುತ್ತಿಗೆದಾರರು ಸಾಮಗ್ರಿಗಳನ್ನು ಖರೀದಿಸುವಂತೆ ತಾಕೀತು ಮಾಡಬೇಕು. ಸಾಮಗ್ರಿಗಳ ದಾಸ್ತಾನು ಸಂದರ್ಭದಲ್ಲಿ ಅದರ ಗುಣಮಟ್ಟ ಪರಿಶೀಲಿಸಬೇಕು. ಕಳಪೆ ಗುಣಮಟ್ಟದ ಸಾಮಗ್ರಿಗಳನ್ನು ಬಳಸಲು ಆಸ್ಪದ ನೀಡಬಾರದು.

- ನೀರಿನ ಯೋಜನೆಗಳು ಪೂರ್ಣಗೊಂಡ ನಂತರ ಸಮಿತಿಯು ಗ್ರಾಮಸ್ಥರ ಸಮ್ಮುಖದಲ್ಲಿ ಕೊಳವೆಬಾವಿ, ಪೈಪ್‌ಲೈನ್ ಮತ್ತು ನಳಗಳ ಕಾರ್ಯನಿರ್ವಹಣೆಯ ಖಾತ್ರಿಗಾಗಿ ಪರೀಕ್ಷಾರ್ಥ ಚಾಲನೆಯನ್ನು ಕೈಗೊಂಡು ಸ್ಥಾವರಗಳು ಸಮಾಧಾನಕರವಾಗಿ ಕಾರ್ಯನಿರ್ವಹಿಸುತ್ತವೆಯೇ ಎಂಬುದನ್ನು ಖಚಿತಪಡಿಸಿಕೊಳ್ಳಬೇಕು.

**7. ಜಲಾನಯನ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಉಪ ಸಮಿತಿಯ ರಚನೆ:**

ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ವ್ಯಾಪ್ತಿಯಲ್ಲಿ ಜಲಾನಯನ ಕಾರ್ಯಕ್ರಮಗಳಾದ ಡಿ.ಪಿ.ಎ.ಪಿ/ಡಿ.ಡಿ.ಪಿ/ಐ.ಡಬ್ಲ್ಯೂ.ಡಿ.ಪಿ ಯೋಜನೆಗಳನ್ನು ಅನುಷ್ಠಾನಗೊಳಿಸ ಲಾಗುತ್ತಿದೆ. ಈ ಯೋಜನೆಗಳನ್ನು ತ್ವರಿತವಾಗಿ ಹಾಗೂ ಸರಳವಾಗಿ ಅನುಷ್ಠಾನಗೊಳಿಸಲು ಅನುವಾಗುವಂತೆ ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆ 1993, ಕಲಂ 61(ಎ) ಅಡಿಯಲ್ಲಿ ಜಲಾನಯನ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ಗ್ರಾಮ ಪಂಚಾಯತ್‌ನ ಉಪ ಸಮಿತಿಯನ್ನು ರಚಿಸಲು ಕ್ರಮಕೈಗೊಳ್ಳಲಾಗಿದೆ.[41]

**ಸಮಿತಿಯ ಸದಸ್ಯರು**

ಕಿರು ಜಲಾನಯನ ಕಾರ್ಯಕ್ರಮಗಳು ಒಂದಕ್ಕಿಂತ ಹೆಚ್ಚು ಗ್ರಾಮ ಪಂಚಾಯತಿಗಳ ವ್ಯಾಪ್ತಿಯೊಳಗೆ ಬಂದಲ್ಲಿ ಯಾವ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಹೆಚ್ಚಿನ ಜಲಾನಯನ ಪ್ರದೇಶದ ವಿಸ್ತೀರ್ಣವಿರುತ್ತದೆಯೋ ಅಂತಹ ಗ್ರಾಮ ಪಂಚಾಯತಿಯ ಅಧ್ಯಕ್ಷರು ಮತ್ತು ಕಾರ್ಯದರ್ಶಿಯವರು ಜಲಾನಯನ ಉಪ ಸಮಿತಿಯ ಅಧ್ಯಕ್ಷರು ಹಾಗೂ ಕಾರ್ಯದರ್ಶಿ ಯಾಗುತ್ತಾರೆ. ಸಮಿತಿಯು ಈ ಕೆಳಕಂಡ ಇತರ ಸದಸ್ಯರುಗಳನ್ನು ಒಳಗೊಂಡಿದೆ.

- ಗ್ರಾಮ ಪಂಚಾಯತಿಯಿಂದ ನಿರ್ದೇಶಿಸಲ್ಪಟ್ಟ ಕಿರು/ಉಪ ಜಲಾನಯನ ಪ್ರದೇಶದ ಜನರನ್ನು ಪ್ರತಿನಿಧಿಸುವ ಕನಿಷ್ಠ ಇಬ್ಬರು ಮತ್ತು ಗರಿಷ್ಠ ಮೂವರು ಗ್ರಾಮ ಪಂಚಾಯತ್ ಸದಸ್ಯರು.
- ಸ್ವ-ಸಹಾಯ ಗುಂಪುಗಳಿಂದ ಮೂವರು ಸದಸ್ಯರು.
- ಬಳಕೆದಾರರ ಗುಂಪುಗಳಿಂದ ಮೂವರು ಸದಸ್ಯರು.
- ಜಲಾನಯನ ಅಭಿವೃದ್ಧಿ ಇಲಾಖೆಯಿಂದ ಖಜಾಂಚಿಯಾಗಿ ಆಯಾ ಕ್ಷೇತ್ರದಲ್ಲಿರುವ ಕೃಷಿ ಸಹಾಯಕರನ್ನಾಗಲಿ/ತೋಟಗಾರಿಕೆ ಸಹಾಯಕರನ್ನಾಗಲೀ/ಫಾರೆಸ್ಟರ್‌ರನ್ನಾಗಲೀ ಅವರ ನೈಪುಣ್ಯತೆಯನ್ನು ಗುರುತಿಸಿ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರ ಸಹಮತ ಪಡೆದು ನೇಮಿಸುವುದು.

ಈ ಸಮಿತಿಯಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದ ಕನಿಷ್ಠ ಇಬ್ಬರು ಸದಸ್ಯರಿರಬೇಕು. (ಗ್ರಾಮ ಪಂಚಾಯತ್/ಸ್ವ-ಸಹಾಯ ಗುಂಪು/ಬಳಕೆದಾರರ ಗುಂಪುಗಳಿಂದ ಸದಸ್ಯರನ್ನು ಮಾಡುವಾಗ) ಒಟ್ಟು ಸದಸ್ಯರಲ್ಲಿ $^1/_3$ಭಾಗ ಮಹಿಳೆಯರಿರಬೇಕು.

**ಸಮಿತಿಯ ಜವಾಬ್ದಾರಿಗಳು**

- ಸಂಪನ್ಮೂಲ ನಿರ್ವಹಣೆಗೆ ಮತ್ತು ಚಟುವಟಿಕೆಗಳನ್ನು ಕೈಗೊಳ್ಳಲು ಜನರನ್ನು ಸಂಘಟಿಸಿ ಜಲಾನಯನ ಮಟ್ಟದ ಸಭೆ ನಡೆಸುವುದು.
- ಮಣ್ಣು ಮತ್ತು ನೀರು ಸಂರಕ್ಷಣೆ, ಅರಣ್ಯ, ತೋಟಗಾರಿಕೆ ಮತ್ತು ಪಶುಸಂಗೋಪನಾ ಚಟುವಟಿಕೆಗಳನ್ನು ಜಲಾನಯನ ಯೋಜನೆಯಲ್ಲಿ ಕಾರ್ಯಗತಗೊಳಿಸಿ ಸುಸ್ಥಿರ ಜಲಾನಯನ ಅಭಿವೃದ್ಧಿಯನ್ನು ಸಾಧಿಸುವುದು.
- ಮಹಿಳಾ ಅಭಿವೃದ್ಧಿ ಚಟುವಟಿಕೆಗಳಿಗೆ ಒತ್ತು ನೀಡಿ ಯೋಜನೆಯ ಸೂಕ್ತ ಚಟುವಟಿಕೆಗಳಲ್ಲಿ ಭಾಗವಹಿಸಲು ಮಹಿಳೆಯರಿಗೆ ಅವಕಾಶ ನೀಡುವುದು.
- ಚಟುವಟಿಕೆಗಳ ಅನುಷ್ಠಾನಕ್ಕೆ ಸಂಪನ್ಮೂಲಗಳ ಚಾಲನೆ, ವಂತಿಕೆ ಸಂಗ್ರಹ, ಸೇವಾ ಶುಲ್ಕ ವಿಧಿಸುವುದು, ಅನುದಾನ ಮತ್ತು ಸಂಘ-ಸಂಸ್ಥೆಗಳಿಂದ ಸಹಾಯ ಪಡೆಯುವುದು ಮತ್ತು ವೈಯಕ್ತಿಕ ಕೊಡುಗೆಗಳಿಂದ ಸಂಪನ್ಮೂಲ ಕ್ರೋಢೀಕರಿಸುವುದು.
- ಜಲಾನಯನ ಅಭಿವೃದ್ಧಿಗೆ ಸಂಬಂಧಿಸಿದಂತೆ ಎಲ್ಲಾ ತೀರ್ಮಾನಗಳನ್ನು ಗ್ರಾಮ ಪಂಚಾಯತಿ ಹಾಗೂ ಗ್ರಾಮ ಸಭೆಯಲ್ಲಿ ಕೈಗೊಳ್ಳುವುದು.
- ಜಲಾನಯನ ಉಪ ಸಮಿತಿಯು ತಿಂಗಳಿಗೆ ಒಮ್ಮೆ ಸಭೆ ಸೇರಿ ಕಾರ್ಯಚಟುವಟಿಕೆಗಳ ಬಗ್ಗೆ ಚರ್ಚಿಸಿ ಸೂಕ್ತ ತೀರ್ಮಾನ ತೆಗೆದುಕೊಳ್ಳಬೇಕು.
- ಕಿರು ಜಲಾನಯನ ಅಭಿವೃದ್ಧಿ ಕ್ರಿಯಾ ಯೋಜನೆಯನ್ನು ಬಳಕೆದಾರರ ಗುಂಪು, ಸ್ವ-ಸಹಾಯ ಗುಂಪುಗಳ ನೆರವಿನಿಂದ ಮತ್ತು ಜಲಾನಯನ ತಂಡದ ತಾಂತ್ರಿಕ ನೆರವಿನಿಂದ ತಯಾರಿಸಿ ಗ್ರಾಮ ಪಂಚಾಯತಿಯ ಅನುಮೋದನೆ ಪಡೆದು ಯೋಜನಾ ಅನುಷ್ಠಾನ ಏಜೆನ್ಸಿಗೆ ಕ್ರಮಕ್ಕಾಗಿ ಸಲ್ಲಿಸುವುದು.
- ಅನುಮೋದಿತ ಕ್ರಿಯಾ ಯೋಜನೆ ಪ್ರಕಾರ ಜಲಾನಯನ ಅಭಿವೃದ್ಧಿ ತಂಡದ ನೆರವಿನಿಂದ ಸವಿವರ ಅಂದಾಜುಪತ್ರಿಕೆ ತಯಾರಿಸಿ ಜಲಾನಯನ ಅಭಿವೃದ್ಧಿ ಇಲಾಖೆಯಿಂದ ತಾಂತ್ರಿಕ ಮಂಜೂರಾತಿ ಪಡೆದು ಅನುದಾನ ಬಿಡುಗಡೆಯಾದ ನಂತರ ಫಲಾನುಭವಿಗಳಿಂದ ಸ್ವ-

ಸಹಾಯ ಗುಂಪುಗಳು/ಕ್ಷೇತ್ರ ಗುಂಪಿನ ಕುಶಲ ಮತ್ತು ಇತರ ಕಾರ್ಮಿಕರ ಮೂಲಕ ಕಾಮಗಾರಿಗಳನ್ನು ಅನುಷ್ಠಾನಗೊಳಿಸುವುದು.

- ಕಾಮಗಾರಿಗಳಿಗೆ ಸಂಬಂಧಿಸಿದಂತೆ ಯೋಜನೆಗಳ ಅಡಿಯಲ್ಲಿ ನಿಗದಿಪಡಿಸಿದ ವಂತಿಗೆಯನ್ನು ಫಲಾನುಭವಿಗಳಿಗೆ/ಕ್ಷೇತ್ರ/ಬಳಕೆದಾರರ ಸ್ವಸಹಾಯ ಗುಂಪುಗಳಿಂದ ನಗದು, ಸಾಮಗ್ರಿ, ಕೂಲಿ ರೂಪದಲ್ಲಿ ಸಂಗ್ರಹಿಸಿ ಕಾರ್ಪಸ್ ಮೂಲ ಕ್ರೋಡೀಕೃತ ಖಾತೆಗೆ ಜಮಾ ಮಾಡುವುದು. ಈ ಮೂಲಕ ಯೋಜನೆಯ ಅನುಷ್ಠಾನದಲ್ಲಿ ಜನಸಹಭಾಗಿತ್ವ ಪಡೆದುಕೊಳ್ಳುವುದು.
- ಜಲಾನಯನ ಅಭಿವೃದ್ಧಿ ಕಾಮಗಾರಿಗಳ ಅನುಷ್ಠಾನದಲ್ಲಿ ಗುಣಮಟ್ಟ ಕಾಯ್ದುಕೊಳ್ಳಲು ಮೇಲ್ವಿಚಾರಣೆ.
- ಯೋಜನೆಗಳ ಕಡತಗಳು, ಪ್ರಗತಿ ವರದಿ ಮತ್ತು ಲೆಕ್ಕಪತ್ರಗಳ ನಿರ್ವಹಣೆಯನ್ನು ಖಜಾಂಚಿಯ ಮುಖಾಂತರ ವ್ಯವಸ್ಥಿತವಾಗಿ ಮಾಡಿಸಬೇಕು.
- ಅನುಷ್ಠಾನದ ಪ್ರಗತಿ ವರದಿ, ಅನುದಾನಕ್ಕೆ ಬೇಡಿಕೆ, ಲೆಕ್ಕಪತ್ರಗಳು, ಅನುದಾನ ಬಳಕೆ ಪತ್ರ ಮತ್ತು ಮುಕ್ತಾಯ ವರದಿಗಳನ್ನು ಯೋಜನಾ ಅನುಷ್ಠಾನ ಏಜೆನ್ಸಿ ಮುಖಾಂತರ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಯವರಿಗೆ ಸಲ್ಲಿಸುವುದು.
- ಸಮಿತಿಯ ಯೋಜನೆಗಳ ಕಾಮಗಾರಿಗಳ ಅನುದಾನ ಬಿಡುಗಡೆ ಮಾಡುವ ಮುನ್ನ ಅನುಷ್ಠಾನ ಏಜೆನ್ಸಿ(ಕೃಷಿ ಅಧಿಕಾರಿ) ಇವರು ಶಿಫಾರಸ್ಸು ಮಾಡಬೇಕು.
- ಕಾರ್ಯದರ್ಶಿ/ಖಜಾಂಚಿ ಇವರನ್ನು ಹೊರತುಪಡಿಸಿ ಉಳಿದ ಸದಸ್ಯರು ಯಾವುದೇ ಪ್ರತಿಫಲ ವಿಲ್ಲದೇ ಕಾರ್ಯನಿರ್ವಹಿಸಬೇಕು.

**8. ವಸತಿ ಸಮಿತಿ**

ಕರ್ನಾಟಕ ರಾಜ್ಯಾದ್ಯಂತ ಗ್ರಾಮೀಣ ಪ್ರದೇಶಗಳಲ್ಲಿ ವಸತಿರಹಿತ ಬಡಜನರ ಸಮಸ್ಯೆಯ ವ್ಯವಸ್ಥಿತ ನಿರ್ವಹಣೆಗಾಗಿ ಗ್ರಾಮ ಪಂಚಾಯತ್ ಮಟ್ಟದಲ್ಲಿ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993 ಪ್ರಕರಣ 61(ಎ) ಪ್ರಕಾರ ವಸತಿ ಸಮಿತಿಯನ್ನು ರಚಿಸಲಾಗಿದೆ. ಈ ರೀತಿಯ ಸಮಿತಿಯಲ್ಲಿ ಇರಬೇಕಾದ ಸದಸ್ಯರು. ನಿರ್ವಹಿಸಬೇಕಾದ ಜವಾಬ್ದಾರಿಗಳು ಹಾಗೂ ಕರ್ತವ್ಯಗಳ ಮಾಹಿತಿಯನ್ನು ಈ ಕೆಳಗೆ ನೀಡಲಾಗಿದೆ.

**ಸಮಿತಿಯ ಸದಸ್ಯರು**

ಈ ಸಮಿತಿಯಲ್ಲಿ ಐವರು ಸದಸ್ಯರಿರುತ್ತಾರೆ. ಗ್ರಾಮ ಪಂಚಾಯತ್ ಅಧ್ಯಕ್ಷರು, ಉಪಾಧ್ಯಕ್ಷರು ಸೇರಿದಂತೆ ಕನಿಷ್ಠ ಒಬ್ಬ ಮಹಿಳಾ ಅಭ್ಯರ್ಥಿ ಹಾಗೂ ಒಬ್ಬ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ

ಪಂಗಡಕ್ಕೆ ಸೇರಿರುವ ಅಭ್ಯರ್ಥಿ ಇರಬೇಕು. ಈ ಸಮಿತಿಯ ಸದಸ್ಯ ಕಾರ್ಯದರ್ಶಿಯು ಕಡ್ಡಾಯವಾಗಿ ಗ್ರಾಮ ಪಂಚಾಯತಿಯ ಕಾರ್ಯದರ್ಶಿಯಾಗಿರುತ್ತಾರೆ. ಸಮಿತಿಯು ನೆರವೇರಿಸಬೇಕಾದ ಎಲ್ಲಾ ಕರ್ತವ್ಯಗಳು ಹಾಗೂ ಜವಾಬ್ದಾರಿಯ ಬಗ್ಗೆ ಹಾಗೂ ಅಂಗೀಕರಿಸಲಾಗುವ ನಿರ್ಣಯ ಠರಾವುಗಳ ಕುರಿತು ನಿಯಮಾನುಸಾರವಾಗಿ ಪೂರ್ಣದಾಖಲೆಗಳನ್ನು ಇರಿಸಿ ನೆರವೇರಿಸಬೇಕು. ಪ್ರತಿ ತಿಂಗಳು ಕನಿಷ್ಠ ಒಂದು ಬಾರಿಯಾದರೂ ಹಾಗೂ ಅಗತ್ಯ ಇದ್ದಲ್ಲಿ ಒಂದಕ್ಕಿಂತ ಹೆಚ್ಚು ಬಾರಿ ಸಭೆ ಸೇರಿ ಇತರ ವಿಷಯಗಳ ಜೊತೆಗೆ ವಸತಿ ಕಾರ್ಯಕ್ರಮಗಳ ಅನುಷ್ಠಾನದ ಪರಾಮರ್ಶೆ ನಡೆಸಿ ಪ್ರಗತಿ ಹಾಗೂ ಸಾಲ ವಸೂಲಾತಿ ಬಗ್ಗೆ ಪರಿಶೀಲಿಸಿ ನಿಯಮಾನುಸಾರ ಸೂಕ್ತ ಕ್ರಮಗಳನ್ನು ತೆಗೆದು ಕೊಳ್ಳಬೇಕು.

**ನಿರ್ವಹಿಸಬೇಕಾದ ಕರ್ತವ್ಯಗಳು ಹಾಗೂ ಹೊಂದಿರುವ ಜವಾಬ್ದಾರಿಗಳು**

- ಪಂಚಾಯತ್‌ರಾಜ್ ಸಂಸ್ಥೆಗಳ ಮೂಲಕ ವಸತಿ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ನೀಡಿರುವ ಸುತ್ತೋಲೆ ಸಂಖ್ಯೆ:ಹೆಚ್‌ಎವೈ 2004 ದಿನಾಂಕ:20.11.04ರಲ್ಲಿ ತಿಳಿಸಿರುವ ಮಾರ್ಗಸೂಚಿಗಳನ್ನು ತಪ್ಪದೇ ಅನುಸರಿಸುವುದು.

- ವಸತಿ ಸಹಾಯಕ್ಕಾಗಿ ಕೋರಿ ಬರುವ ಫಲಾನುಭವಿಗಳ ಅರ್ಜಿಗಳನ್ನು ನಿಗದಿತ ನಮೂನೆಯಲ್ಲಿ ಪಡೆದು ಅಂತಹ ಅರ್ಜಿಗಳನ್ನು ಅದಕ್ಕಾಗಿ ನಿಗದಿಪಡಿಸಿರುವ ಅರ್ಜಿಗಳ ಮತ್ತು ಫಲಾನುಭವಿಗಳ ರಿಜಿಸ್ಟರ್(ಆರ್.ಎ.ಬಿ)ನಲ್ಲಿ ದಾಖಲಿಸುವ ಮತ್ತು ಅರ್ಜಿ ಪಡೆದಿರುವುದಕ್ಕಾಗಿ ನಮೂನೆ-1 ಎಫ್‌ನಲ್ಲಿ ಸ್ವೀಕೃತಿ ನೀಡುವುದು.

- ಅರ್ಜಿಗಳ ಹಾಗೂ ಫಲಾನುಭವಿಗಳ ರಿಜಿಸ್ಟರ್‌ಗಳನ್ನು ಆಗಿಂದಾಗ್ಗೆ ಕಡ್ಡಾಯವಾಗಿ ಪರಿಶೀಲನೆ ಮಾಡುವುದು. ವಸತಿರಹಿತ ಪಲಾನುಭವಿಗಳ ಸಮೀಕ್ಷೆಯನ್ನು ನಿಯಮಿತವಾಗಿ ನಡೆಸುವುದು. ಹಾಗೂ ಈಗಾಗಲೇ ಮಾಡಲಾಗಿರುವ ಪಟ್ಟಿಯನ್ನು ಪರಿಷ್ಕರಿಸಿ ಬಿಟ್ಟುಹೋಗಿರುವ ಅರ್ಹ ಫಲಾನುಭವಿಗಳನ್ನು ಸೇರಿಸುವುದು. ಈಗಾಗಲೆ ಸಿದ್ಧಪಡಿಸಿರುವ ಪಟ್ಟಿಯಲ್ಲಿ ಈಗಾಗಲೆ ಮನೆಗಳನ್ನು ಹಂಚಿಕೆ ಮಾಡಿರುವುದು, ಬಡತನ ರೇಖೆಗಿಂತ ಮೇಲೆ ಇರುವವರು ಮತ್ತು ಇನ್ನಿತರ ಕಾರಣಗಳಿಂದ ಅನರ್ಹ ಫಲಾನುಭವಿಗಳು ಪಟ್ಟಿಯಲ್ಲಿ ಸೇರಿದ್ದಲ್ಲಿ ಅಂತಹವರನ್ನು ಠರಾವಿನ ಮೂಲಕ ತೆಗೆದುಹಾಕುವುದು.

- ಫಲಾನುಭವಿ ನಿಧಿ ಖಾತೆಯನ್ನು ತೆರೆದು ಅದರಲ್ಲಿ ಫಲಾನುಭವಿಗಳಿಂದ ಸಂಗ್ರಹಿಸಲಾದ ಸಾಲ ಮರುಪಾವತಿ ಮೊತ್ತಗಳನ್ನು ಜಮಾ ಮಾಡಿಸುವುದು ಹಾಗೂ ಫಲಾನುಭವಿಗಳು ನಿಧಿ ಬಡ್ಡಿ ಖಾತೆ ತೆರೆಯಲು ವ್ಯವಸ್ಥೆ ಮಾಡಿ ಆ ಖಾತೆಗೆ ಫಲಾನುಭವಿಯ ನಿಧಿಖಾತೆಯಿಂದ ಬರುವ ಬಡ್ಡಿಯನ್ನು ವರ್ಗಾಯಿಸಿ ಜಮಾ ಮಾಡುವಂತೆ ವ್ಯವಸ್ಥೆ ಮಾಡುವುದು.

- ವಿವಿಧ ವಸತಿ ಯೋಜನೆಗಳಗಡಿಯಲ್ಲಿ ಸರ್ಕಾರ ಹಾಗೂ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದಿಂದ ನೀಡಲಾಗುವ ಸಾಮಾನ್ಯ ಕಾರ್ಯಕ್ರಮಗಳ ಮಾರ್ಗಸೂಚಿಗಳ ಅನ್ವಯ ನಿಗದಿತ ಗುರಿಯನ್ನು ಪರಿಗಣಿಸಿ ಫಲಾನುಭವಿ ಆಯ್ಕೆಯನ್ನು ಸುಸೂತ್ರವಾಗಿ ನೆರವೇರಿಸುವುದು.
- ನಿಗದಿಪಡಿಸಿರುವ ದಾಖಲೆಗಳನ್ನು ಫಲಾನುಭವಿಗಳಿಂದ ಪಡೆದು ಅಡಮಾನ ಪತ್ರ ಫಾರಂ-3/3ಎಯನ್ನು ಪ್ರಥಮ ಕಂತಿನ ಹಣ ಬಿಡುಗಡೆ ಮಾಡುವ ಮುನ್ನ ಉಪನೋಂದಣಿ ಮಾಡುವುದು. ಗ್ರಾಮ ಪಂಚಾಯತ್ ಮೂಲಕ ಅನುಷ್ಠಾನಗೊಳಿಸುವ ಎಲ್ಲಾ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ನಿಗಮವು ನಿಗದಿಗೊಳಿಸುವ ನಮೂನೆಗಳಲ್ಲಿ ದಾಖಲೀಕರಣ ನೆರವೇರಿಸುವುದು. ಈ ಸಂಬಂಧವಾಗಿ 1993–94ರಿಂದ ಆಚೆಗೆ ಆಯಾ ಗ್ರಾಮೀಣ ಪ್ರದೇಶಗಳಲ್ಲಿ ವಸತಿ ಸೌಲಭ್ಯ ಪಡೆದಿರುವ ಫಲಾನುಭವಿಗಳಿಂದ ನಿಗದಿತ ನಮೂನೆಯಲ್ಲಿ ದಾಖಲಿಸಿ ಅವುಗಳನ್ನು ಸುರಕ್ಷಿತವಾಗಿ ಗ್ರಾಮ ಪಂಚಾಯತ್ ಮಟ್ಟದಲ್ಲಿ ಇರಿಸುವುದು.

## 9. ಜೈವಿಕ ವೈವಿಧ್ಯ ನಿರ್ವಹಣಾ ಸಮಿತಿ

### ಸಮಿತಿಯ ರಚನೆ

1. ಜೈವಿಕ ವೈವಿಧ್ಯ ನಿಯಮಗಳು, 2004ರ ನಿಯಮ 22(2)ರ ಪ್ರಕಾರ ಈ ಸಮಿತಿಯು ಸ್ಥಳೀಯ ಸಂಸ್ಥೆಯಿಂದ ನಾಮನಿರ್ದೇಶಿತರಾದ ಏಳು ಜನರಿಗಿಂತ ಹೆಚ್ಚಿಲ್ಲದಷ್ಟು ಸಂಖ್ಯೆಯ ಸದಸ್ಯರನ್ನು ಹೊಂದಿರತಕ್ಕದ್ದು. ಅವರಲ್ಲಿ 1/3ಕ್ಕಿಂತ ಕಡಿಮೆ ಇಲ್ಲದಷ್ಟು ಮಹಿಳೆಯರು(ಅಂದರೆ ಇಬ್ಬರು) ಮತ್ತು ಪ್ರತಿಶತ 18ಕ್ಕಿಂತ ಕಡಿಮೆಯಿಲ್ಲದಷ್ಟು ಸದಸ್ಯರು(ಅಂದರೆ ಒಬ್ಬರು) ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳಿಗೆ ಸೇರಿದವರಾಗಿರತಕ್ಕದ್ದು.
2. ಜೈವಿಕ ವೈವಿಧ್ಯ ನಿರ್ವಹಣಾ ಸಮಿತಿಯ ಅಧ್ಯಕ್ಷರನ್ನು, ಸ್ಥಳೀಯ ಸಂಸ್ಥೆಯ ಅಧ್ಯಕ್ಷರು ಅಧ್ಯಕ್ಷರಾಗಿರುವ ಸಭೆಯಲ್ಲಿ ಸಮಿತಿಯ ಸದಸ್ಯರ ಪೈಕಿ ಚುನಾಯಿಸತಕ್ಕದ್ದು. ಮತಗಳು ಸರಿಸಮನಾಗಿ ಬಿದ್ದ ಸಂದರ್ಭದಲ್ಲಿ ಸ್ಥಳೀಯ ಸಂಸ್ಥೆಯ ಅಧ್ಯಕ್ಷರು ನಿರ್ಣಾಯಕ ಮತವನ್ನು ಚಲಾಯಿಸತಕ್ಕದ್ದು.
3. ಜೈವಿಕ ವೈವಿಧ್ಯ ನಿರ್ವಹಣಾ ಸಮಿತಿಯ ಅಧ್ಯಕ್ಷರು ಮೂರು ವರ್ಷಗಳ ಪದಾವಧಿಯನ್ನು ಹೊಂದಿರತಕ್ಕದ್ದು.
4. ಗ್ರಾಮ ಪಂಚಾಯತಿ, ತಾಲ್ಲೂಕು ಪಂಚಾಯತಿ, ಜಿಲ್ಲಾ ಪಂಚಾಯತಿ ಮತ್ತು ಪುರಸಭೆಯ ಕಾರ್ಯದರ್ಶಿ, ಕಾರ್ಯನಿರ್ವಾಹಣಾಧಿಕಾರಿ, ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಮುಖ್ಯಾಧಿಕಾರಿಗಳು ಅನುಕ್ರಮವಾಗಿ ಆಯಾ ಸಮಿತಿಗಳ ಕಾರ್ಯದರ್ಶಿಗಳಾಗಿರುತ್ತಾರೆ.

5. ವಿಧಾನ ಸಭೆಯ ಸ್ಥಳೀಯ ಸದಸ್ಯರು/ವಿಧಾನ ಪರಿಷತ್ತಿನ ಸದಸ್ಯರು ಮತ್ತು ಸಂಸತ್ ಸದಸ್ಯರು ಸಮಿತಿಯ ಸಭೆಗಳಿಗೆ ವಿಶೇಷ ಆಹ್ವಾನಿತರಾಗಿರತಕ್ಕದ್ದು.[42]

**ಸಮಿತಿಗಳ ಪ್ರಕಾರ್ಯಗಳು**

1. ಜೈವಿಕ ವೈವಿಧ್ಯ ಅಧಿನಿಯಮ–2002ರ ಪ್ರಕರಣ 41(3)ರ ಪ್ರಕಾರ ಸಮಿತಿಯು ತನ್ನ ಕೇಂದ್ರಾಡಳಿತದ ವ್ಯಾಪ್ತಿಯೊಳಗೆ ಬರುವ ಪ್ರದೇಶಗಳಲ್ಲಿ, ವಾಣಿಜ್ಯ ಉದ್ದೇಶಗಳಿಗಾಗಿ, ಯಾವುದೇ ಜೈವಿಕ ಸಂಪನ್ಮೂಲವನ್ನು ಪಡೆಯುವುದಕ್ಕಾಗಿ ಅಥವಾ ಸಂಗ್ರಹಿಸುವುದಕ್ಕಾಗಿ ಯಾವುದೇ ವ್ಯಕ್ತಿಗೆ ಶುಲ್ಕವನ್ನು ವಿಧಿಸುವುದು.

2. ಸ್ಥಳೀಯ ಜನರೊಡನೆ ಸಮಾಲೋಚಿಸಿ ಜನತಾ ವೈವಿಧ್ಯ ದಾಖಲಾತಿಯನ್ನು ಸಿದ್ಧಪಡಿಸುವುದು ಮತ್ತು ಸಿಂಧುಗೊಳಿಸುವುದು. ಈ ದಾಖಲಾತಿ, ಸ್ಥಳೀಯ ಜೈವಿಕ ಸಂಪನ್ಮೂಲಗಳ ಲಭ್ಯತೆ ಮತ್ತು ಜ್ಞಾನ, ಅವುಗಳ ಔಷಧೀಯ ಅಥವಾ ಯಾವುದೇ ಇತರ ಬಳಕೆ ಅಥವಾ ಅವುಗಳ ಬಗೆಗಿನ ಯಾವುದೇ ಇತರ ಸಾಂಪ್ರದಾಯಿಕ ಜ್ಞಾನ–ಇವುಗಳ ಬಗ್ಗೆ ಸಮಗ್ರ ಮಾಹಿತಿಯನ್ನು ಒಳಗೊಂಡಿರತಕ್ಕದ್ದು.

3. ಅನುಮೋದನೆ ನೀಡುವುದಕ್ಕಾಗಿ ರಾಜ್ಯ ಜೈವಿಕ ವೈವಿಧ್ಯ ಮಂಡಳಿ ಅಥವಾ ರಾಷ್ಟ್ರೀಯ ಜೈವಿಕ ವೈವಿಧ್ಯ ಪ್ರಾಧಿಕಾರವು ತನಗೆ ಕಳುಹಿಸಿದ ಯಾವುದೇ ವಿಷಯಗಳ ಬಗ್ಗೆ ಸಲಹೆ ನೀಡುವುದು. ಜೈವಿಕ ಸಂಪನ್ಮೂಲಗಳನ್ನು ಬಳಸುವ ಸ್ಥಳೀಯ ವೈದ್ಯರು ಮತ್ತು ವೃತ್ತಿ ನಿರತರ ಬಗ್ಗೆ ಅಂಕಿ ಅಂಶಗಳ ಮಾಹಿತಿಯನ್ನು ನಿರ್ವಹಿಸುವುದು.

**10. ಗ್ರಾಮ ಪಂಚಾಯತಿ ಲೋಕ ಶಿಕ್ಷಣ ಸಮಿತಿ**

ಗ್ರಾಮ ಪಂಚಾಯತಿ ಅಧ್ಯಕ್ಷರು ಈ ಸಮಿತಿಯ ಅಧ್ಯಕ್ಷರಾಗಿರುವರು, ಈ ಸಮಿತಿ ಸದಸ್ಯರಲ್ಲಿ ಒಬ್ಬರು ಉಪಧ್ಯಕ್ಷರಾಗಿರುವರು.

ಸಮಿತಿಯ ಸದಸ್ಯರೆಂದರೆ–ಗ್ರಾಮ ಪಂಚಾಯತಿಯ ಇಬ್ಬರು ಮಹಿಳಾ ಪ್ರತಿನಿಧಿಗಳು, ಸ್ಥಳೀಯ ಸರ್ಕಾರಿ ಶಾಲಾ ಮುಖ್ಯೋಪಾಧ್ಯಾಯರು/ಶಿಕ್ಷಕರು.

ಮೂವರು ಅಲ್ಪಸಂಖ್ಯಾತರು/ಪ.ಜಾತಿ/ಪ.ವರ್ಗ ಸಮುದಾಯದ ಪ್ರತಿನಿಧಿಗಳು(ತಲಾ ಒಬ್ಬರಂತೆ) ಶಿಕ್ಷಣ ಸ್ಥಾಯಿ ಸಮಿತಿ ಸದಸ್ಯರು, ಮಹಿಳಾ ಮಂಡಳಿ ಅಥವಾ ಸ್ವ–ಸಹಾಯ ಸಂಘದ ಸದಸ್ಯರು, ಇಬ್ಬರು ಪಾಲಕರ ಗುಂಪಿನಿಂದ ಆರಿಸಿದ ಸದಸ್ಯರು, ಸಮಾಜ ಸೇವಾ ಕಾರ್ಯಕರ್ತರು, ಸಾಕ್ಷರಸ್ಥರು/ಹಿರಿಯ ಪ್ರೇರಕರು ಸದಸ್ಯರಾಗಿರುವರು.

ಗ್ರಾಮ ಪಂಚಾಯತಿ ವ್ಯಾಪ್ತಿಯ ಸರ್ಕಾರಿ ಪ್ರೌಢ ಶಾಲೆಯ ಮುಖ್ಯೋಪಾಧ್ಯಾಯರು, ಹಿರಿಯ ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಯರು ಸದಸ್ಯ ಕಾರ್ಯದರ್ಶಿಗಳಾಗಿರುವರು.

**ಗ್ರಾಮ ಪಂಚಾಯತಿ ಲೋಕ ಶಿಕ್ಷಣ ಸಮಿತಿ ಜವಾಬ್ದಾರಿಗಳು**

1. ಗ್ರಾಮ ಪಂಚಾಯತಿ ಲೋಕ ಶಿಕ್ಷಣ ಸಮಿತಿ ರಚನೆ(ಗ್ರಾಮ ಪಂಚಾಯಿತಿ ಜವಾಬ್ದಾರಿ).
2. ಗ್ರಾಮ ಪಂಚಾಯಿತಿ ಲೋಕ ಶಿಕ್ಷಣ ಸಂಯೋಜಕರ ಆಯ್ಕೆ.
3. ಕಾರ್ಯಕ್ರಮ ಪರಿಣಾಮಕಾರಿ ಅನುಷ್ಠಾನಕ್ಕೆ ಸೂಕ್ಷ್ಮ ಕ್ರಿಯಾ ಯೋಜನೆ ಸಿದ್ಧಪಡಿಸುವುದು.
4. ಸಮೀಕ್ಷೆಯನ್ನು ನಡೆಸಿ ಕಲಿಕಾರ್ಥಿಗಳನ್ನು ಗುರ್ತಿಸುವುದು.
5. ಕಲಿಕಾರ್ಥಿಗಳ ಪಟ್ಟಿಯನ್ನು ವರ್ಗೀಕರಣ ಮಾಡಿ ಹೊಂದಾಣಿಕೆ ಪಟ್ಟಿ ಸಿದ್ಧಪಡಿಸುವುದು.
6. ಲೋಕ ಶಿಕ್ಷಣ ಕೇಂದ್ರದ ಸ್ಥಳ ಗುರುತಿಸುವುದು.
7. ಕಲಿಕಾ ಮತ್ತು ಬೋಧನಾ ಸಲಕರಣೆಗಳ ಪೂರೈಕೆ ಮತ್ತು ವಿತರಣೆ.
8. ಗ್ರಾಮ ಪಂಚಾಯತಿ ಮಟ್ಟದ ಲೋಕಶಿಕ್ಷಣ ಕೇಂದ್ರದ ಬ್ಯಾಂಕ್ ಖಾತೆ ತೆರೆಯುವುದು.
9. ಗ್ರಾಮ ಪಂಚಾಯತಿ ಕಛೇರಿಯಲ್ಲಿ ಅಂತರ್ ಜಾಲಾ ವ್ಯವಸ್ಥೆ ಮಾಡುವುದು.
10. ಸಮಾನ ಶಿಕ್ಷಣ ಕಾರ್ಯಕ್ರಮದ ಅನುಷ್ಠಾನ.
11. ವೃತ್ತಿ ಕೌಶಲ್ಯ ತರಬೇತಿ ಅನುಷ್ಠಾನ(ಆಯ್ದ ಕಲಿಕಾರ್ಥಿಗಳು).
12. ಮೇಲ್ವಿಚಾರಣೆ ಮತ್ತು ಪರಿವೀಕ್ಷಣೆ ಹಾಗೂ ವರದಿ ಮಾಡುವುದು.
13. ಕಲಿಕೆಯ ಪ್ರಗತಿ ದಾಖಲೆ.
14. ಲೆಕ್ಕ ಪತ್ರಗಳ ನಿರ್ವಹಣೆ, ಬ್ಯಾಂಕ್ ಪ್ರಮಾಣ ಪತ್ರ/ಗೌರವ ಧನ ವಿತರಣೆ.
15. ಸಾಕ್ಷರತಾ ಪ್ರಗತಿಯ ಘೋಷಣೆ.

**11. ಜಾಗೃತಿ ಮತ್ತು ಉಸ್ತುವಾರಿ ಸಮಿತಿ(ಮಹಾತ್ಮಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆ)**

ಯೋಜನೆಯ ಅನುಷ್ಠಾನ, ಉಸ್ತುವಾರಿ, ಮೌಲ್ಯಮಾಪನ ಮತ್ತು ಪರಿಶೀಲನೆಗೆ ಸಂಬಂಧಿಸಿದಂತೆ ಪ್ರತಿ ಕಂದಾಯ ಗ್ರಾಮಗಳಲ್ಲಿ ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ಜಾಗೃತಿ ಮತ್ತು ಉಸ್ತುವಾರಿ ಸಮಿತಿಗಳನ್ನು ಗ್ರಾಮಸಭೆಯಲ್ಲಿ ಕಡ್ಡಾಯವಾಗಿ ರಚಿಸಬೇಕು.

- ಜಾಗೃತಿ ಮತ್ತು ಉಸ್ತುವಾರಿ ಸಮಿತಿಯಲ್ಲಿ ಒಂಭತ್ತು ಜನ ಸದಸ್ಯರಿರಬೇಕು. ಈ ಪೈಕಿ ಶೇಕಡಾ 50ರಷ್ಟು ಸದಸ್ಯರು ಯೋಜನೆಯಡಿ ತೊಡಗಿಸಿಕೊಂಡ ಕೆಲಸಗಾರರಾಗಿರಬೇಕು.
- ಜಾಗೃತಿ ಮತ್ತು ಉಸ್ತುವಾರಿ ಸಮಿತಿಯಲ್ಲಿ ಪರಿಶಿಷ್ಟ ಜಾತಿ, ಪಂಗಡ ಮತ್ತು ಮಹಿಳೆಯರಿಗೆ ಪ್ರಾತಿನಿಧ್ಯ ಇರಬೇಕು.
- ಸಮಿತಿಯ ಅವಧಿ ಒಂದು ವರ್ಷವಾಗಿರುತ್ತದೆ.
- ಸಮಿತಿಯು ಪ್ರತಿಯೊಂದು ಕಾಮಗಾರಿ ನಡೆಯುವ ಸ್ಥಳಕ್ಕೆ ವಾರದಲ್ಲಿ ಕನಿಷ್ಠ ಎರಡು ಬಾರಿ ಭೇಟಿ ನೀಡಿ, ಈ ಕೆಳಕಂಡ ಅಂಶಗಳನ್ನು ಪರಿಶೀಲಿಸಬೇಕು.
- ಕಾಮಗಾರಿ ಸ್ಥಳದಲ್ಲಿ ಹಾಜರಾತಿ ಪಟ್ಟಿ ನಿರ್ವಹಣೆ
- ಹಾಜರಾತಿ ಪಟ್ಟಿಯಲ್ಲಿ ದಾಖಲು ಮಾಡಿರುವ ಹಾಗೂ ಚಾಲ್ತಿ ತೊಡಗಿಸಿಕೊಂಡಿರುವ ಕೂಲಿಗಾರರ ವಿವರ
- ಕಾಮಗಾರಿ ಸ್ಥಳದಲ್ಲಿನ ಸವಲತ್ತುಗಳು
- ಕಾಮಗಾರಿಗಾಗಿ ಬಳಕೆ ಮಾಡಿರುವ ಸಾಮಾಗ್ರಿಗಳು ಗುಣಮಟ್ಟ ಹಾಗೂ ವೆಚ್ಚದ ವಿವರಗಳು
- ಕೂಲಿಕಾರರಿಗೆ ಸರಿಯಾಗಿ ಹಣ ಪಾವತಿಯಾಗುತ್ತಿರುವ ಬಗ್ಗೆ ಮಾಹಿತಿ.
- ಕಾಮಗಾರಿಯ ಅಂದಾಜು ಮೊತ್ತ, ಗುಣಮಟ್ಟ ಇತ್ಯಾದಿ ಅಂಶಗಳು
- ಕಾಮಗಾರಿ ಸ್ಥಳದಲ್ಲಿನ ದಾಖಲಾತಿಗಳನ್ನು ಕಾಮಗಾರಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಕನಿಷ್ಠ ಐದು ಕೂಲಿಗಾರರು ದೃಢೀಕರಿಸಿರುವುದು.

ಪರಿಶೀಲನೆಯ ನಂತರ ನಿಗದಿತ ನಮೂನೆಯಲ್ಲಿ ಪ್ರತಿ ಕಾಮಗಾರಿಗೆ ಸಂಬಂಧಿಸಿದ ವರದಿಯನ್ನು ತಪ್ಪದೆ ಪ್ರತಿ ತಿಂಗಳು ಗ್ರಾಮ ಪಂಚಾಯತಿಗೆ ಹಾಗೂ ಸಂಬಂಧಪಟ್ಟ ಕಾರ್ಯ ಕ್ರಮಾಧಿಕಾರಿ(ಕಾರ್ಯ ನಿರ್ವಾಹಕ ಅಧಿಕಾರಿ) ಮತ್ತು ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿ ಯವರಿಗೆ(ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ) ಜಾಗೃತಿ ಮತ್ತು ಉಸ್ತುವಾರಿ ಸಮಿತಿಗಳು ಸಲ್ಲಿಸಬೇಕು.

**12. ಸಾಮಾಜಿಕ ಲೆಕ್ಕ ಪರಿಶೋಧನೆ ಸಮಿತಿ**(ಮಹಾತ್ಮಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಗೆ ಸಂಬಂಧಿಸಿದಂತೆ)

ಪ್ರತಿ ಗ್ರಾಮ ಪಂಚಾಯಿತಿಯಲ್ಲಿ ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ಸಾಮಾಜಿಕ ಲೆಕ್ಕ ಪರಿಶೋಧನೆ ಸಮಿತಿಯನ್ನು ಗ್ರಾಮ ಸಭೆಯಲ್ಲಿ ಕಡ್ಡಾಯವಾಗಿ ರಚಿಸಬೇಕು.

- ಸಾಮಾಜಿಕ ಲೆಕ್ಕ ಪರಿಶೋಧನೆ ಸಮಿತಿ ಸದಸ್ಯರ ಸಂಖ್ಯೆ ಐದನ್ನು ಮೀರುವಂತಿಲ್ಲ.
- ಸಮಿತಿಯ ಒಟ್ಟು ಸದಸ್ಯರಲ್ಲಿ ಮೂರನೆಯ ಒಂದು ಭಾಗದಷ್ಟು ಮಹಿಳಾ ಸದಸ್ಯರಿರಬೇಕು.
- ಹಾಲಿ ಹಾಗೂ ಹಿಂದಿನ ವರ್ಷಗಳಲ್ಲಿ ಕೆಲಸ ನಿರ್ವಹಿಸಿರುವ ಕೆಲಸಗಾರರು ಸಮಿತಿಯಲ್ಲಿರಬೇಕು.
- ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿ(ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ) ಅಥವಾ ಕಾರ್ಯಕ್ರಮ ಅಧಿಕಾರಿ(ಕಾರ್ಯ ನಿರ್ವಾಹಕ ಅಧಿಕಾರಿ) ತಮ್ಮ ವ್ಯಾಪ್ತಿಯಲ್ಲಿ ಬರುವ ಪ್ರತಿ ಗ್ರಾಮ ಪಂಚಾಯತಿಗಳಲ್ಲಿ ನಡೆಸಲಾಗುವ ಸಾಮಾಜಿಕ ಲೆಕ್ಕ ಪರಿಶೋಧನೆಗೆ ಸಂಬಂಧಿಸಿ ಗ್ರಾಮ ಪಂಚಾಯತಿಯೊಂದಿಗೆ ಪೂರ್ವಭಾವಿ ಸಭೆ ನಡೆಸಬೇಕು. ಸಭೆಯಲ್ಲಿ ಸಮಾಲೋಚಿಸಿ ದಿನಾಂಕಗಳನ್ನು ನಿಗದಿಪಡಿಸಿ ಮೂವತ್ತು ದಿನಗಳ ಮುಂಚಿತವಾಗಿ ಪ್ರಚಾರ ಮಾಡಲು ಕ್ರಮ ವಹಿಸಬೇಕು.
- ಸಾಮಾಜಿಕ ಲೆಕ್ಕ ಪರಿಶೋಧನೆ ಸಮಿತಿಯ ಪರಿಶೀಲನೆಗಾಗಿ ಸಂಬಂಧಪಟ್ಟ ಗ್ರಾಮ ಪಂಚಾಯಿತಿಯಲ್ಲಿ ಎಲ್ಲಾ ಕಾಮಗಾರಿಗಳ ವಿವರ ಹಾಗೂ ದಾಖಲಾತಿಗಳು ಲಭ್ಯವಾಗುವಂತೆ ನೋಡಿಕೊಳ್ಳುವ ಜವಾಬ್ದಾರಿ ಕಾರ್ಯಕ್ರಮಾಧಿಕಾರಿಯವರದ್ದಾಗಿರುತ್ತದೆ.
- ಗ್ರಾಮ ಪಂಚಾಯಿತಿಯು ಯೋಜನೆಗೆ ಸಂಬಂಧಿಸಿದ ಅಗತ್ಯ ಮಾಹಿತಿ ಮತ್ತು ದಾಖಲಾತಿಗಳನ್ನು ಹದಿನೈದು ದಿನಗಳ ಮುಂಚಿತವಾಗಿ ಸಾಮಾಜಿಕ ಲೆಕ್ಕ ಪರಿಶೋಧನೆ ಸಮಿತಿಗೆ ಒದಗಿಸಬೇಕು. ಆಗ ಸಮಿತಿಯು ಎಲ್ಲಾ ಮಾಹಿತಿ ಹಾಗೂ ದಾಖಲಾತಿಗಳನ್ನು ಪರಿಶೀಲಿಸುತ್ತದೆ.
- ಪರಿಶೀಲನೆಯ ಸಂದರ್ಭದಲ್ಲಿ ಜಾಗೃತಿ ಮತ್ತು ಉಸ್ತುವಾರಿ ಸಮಿತಿಗಳು ಸಹಕರಿಸಬೇಕು. ಯಾವುದೇ ವ್ಯಕ್ತಿ ಯೋಜನೆಯ ಅನುಷ್ಠಾನ ಸಂಬಂಧ ಯಾವುದೇ ಮಾಹಿತಿಯನ್ನು ಸಮಿತಿಗೆ ಸಲ್ಲಿಸಬಹುದಾಗಿರುತ್ತದೆ.
- ಕಾರ್ಯಕ್ರಮ ಅಧಿಕಾರಿಗಳು ಸಾಮಾಜಿಕ ಲೆಕ್ಕ ಪರಿಶೋಧನೆ ನಡೆಯುವ ವಿಚಾರವನ್ನು ಮತ್ತು ಪ್ರಕ್ರಿಯೆಗಳ ಕುರಿತು ಲಿಖಿತವಾಗಿ ಎಲ್ಲಾ ಜನಪ್ರತಿನಿಧಿಗಳು ಹಾಗೂ ಅನುಷ್ಠಾನ ಅಧಿಕಾರಿಗಳಿಗೆ ಮುಂಚಿತವಾಗಿ ತಿಳಿಸಬೇಕು. ಎಲ್ಲಾ ಜನಪ್ರತಿನಿಧಿಗಳು ಹಾಗೂ ಅನುಷ್ಠಾನ ಅಧಿಕಾರಿಗಳು ಸಾಮಾಜಿಕ ಲೆಕ್ಕ ಪರಿಶೋಧನೆ ಪ್ರಕ್ರಿಯೆ ಮತ್ತು ಗ್ರಾಮಸಭೆ ನಡೆಯುವ ವೇಳೆಯಲ್ಲಿ ಹಾಜರಿರುವಂತೆ ಖಚಿತಪಡಿಸಿಕೊಳ್ಳಬೇಕು.
- ಸಾಮಾಜಿಕ ಲೆಕ್ಕ ಪರಿಶೋಧನೆ ಸಮಿತಿಯು ತನ್ನ ಪರಿಶೀಲನಾ ವರದಿ ಹಾಗೂ ಜಾಗೃತಿ ಮತ್ತು ಉಸ್ತುವಾರಿ ಸಮಿತಿಗಳ ಕ್ರೋಡೀಕೃತ ವರದಿಗಳನ್ನು ಗ್ರಾಮ ಸಭೆಯಲ್ಲಿ ಓದಿ ತಿಳಿಸಬೇಕು.

- ಜನಸಾಮಾನ್ಯರು ಯೋಜನೆಯ ಅನುಷ್ಠಾನ ಸಂಬಂಧ ಯಾವುದೇ ಮಾಹಿತಿಯನ್ನು ಗ್ರಾಮ ಪಂಚಾಯತಿ ಹಾಗೂ ಸಂಬಂಧಪಟ್ಟ ಅನುಷ್ಠಾನ ಅಧಿಕಾರಿಗಳಿಂದ ಪಡೆಯಲು ಮತ್ತು ಪರಿಶೀಲಿಸಲು ಸಾಮಾಜಿಕ ಲೆಕ್ಕಪರಿಶೋಧನೆ ಸಮಿತಿಯು ಅವಕಾಶ ಕಲ್ಪಿಸಬೇಕು.
- ಹಿಂದಿನ ಸಾಮಾಜಿಕ ಲೆಕ್ಕಪರಿಶೋಧನೆ ವರದಿ/ನಡಾವಳಿಯ ಮೇಲೆ ಕೈಗೊಂಡ ಕ್ರಮಗಳ ಕುರಿತು ಗ್ರಾಮಸಭೆಯಲ್ಲಿ ಮಂಡಿಸಬೇಕು.
- ಸಾಮಾಜಿಕ ಲೆಕ್ಕಪರಿಶೋಧನೆಯ ವರದಿ/ನಡಾವಳಿಗಳನ್ನು ಗ್ರಾಮ ಪಂಚಾಯತಿ ಕಾರ್ಯದರ್ಶಿ/ ಪಂಚಾಯತಿ ಅಭಿವೃದ್ಧಿ ಅಧಿಕಾರಿಯವರು ದಾಖಲಿಸಬೇಕು.
- ಗ್ರಾಮಸಭೆಯಲ್ಲಿ ಹಾಜರಿರುವ ಎಲ್ಲಾ ಸದಸ್ಯರ ಹಾಜರಾತಿಯನ್ನು ಸಭೆಯ ಮುನ್ನ ಮತ್ತು ನಂತರದಲ್ಲಿ ಪಡೆಯಬೇಕು.
- ಸ್ಥಳದಲ್ಲಿಯೇ ಗ್ರಾಮ ಸಭೆ ನಡಾವಳಿ ದಾಖಲಿಸಲು ಕ್ರಮ ವಹಿಸಬೇಕು.
- ಸಾಮಾಜಿಕ ಲೆಕ್ಕಪರಿಶೋಧನೆಯ ಗ್ರಾಮಸಭೆಯಲ್ಲಿ ಗ್ರಾಮಸಭೆಯ ಸದಸ್ಯರ ಜೊತೆಗೆ ಇತರೆ ಗ್ರಾಮಗಳ ಜನರೂ ಕೂಡಾ ಸಭೆಯಲ್ಲಿ ಉಪಸ್ಥಿತರಿರಬಹುದು. ಆದರೆ, ಇತರೆ ಗ್ರಾಮಗಳ ಜನರು ಗ್ರಾಮಸಭೆಯಲ್ಲಿ ವೀಕ್ಷಕರಾಗಿರಬಹುದೇ ಹೊರತು ಚರ್ಚೆಯಲ್ಲಿ ಭಾಗವಹಿಸಲು ಅವಕಾಶವಿರುವುದಿಲ್ಲ.
- ಸಾಮಾಜಿಕ ಲೆಕ್ಕಪರಿಶೋಧನೆ ವರದಿಯ/ನಡವಳಿಗಳ ಎಲ್ಲಾ ಅಂಶಗಳ ಮೇಲೆ ಒಂದು ತಿಂಗಳ ಒಳಗಾಗಿ ಸಂಬಂಧಿಸಿದ ಅಧಿಕಾರಿಗಳು ಕ್ರಮ ಕೈಗೊಂಡು ವರದಿ ನೀಡಬೇಕು.
- ಸಾಮಾಜಿಕ ಲೆಕ್ಕಪರಿಶೋಧನೆಯ ಸಂದರ್ಭದಲ್ಲಿ ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮದ ಯಾವುದೇ ನಿಯಮಗಳ ಉಲ್ಲಂಘನೆಯಾಗಿರುವುದು ಕಂಡು ಬಂದು, ಸಭೆಯಲ್ಲಿ ತೀರ್ಮಾನವಾಗದೇ ಬಾಕಿ ಇದ್ದಲ್ಲಿ ಅಂತಹ ವಿಷಯವನ್ನು ಕಾರ್ಯ ಕ್ರಮಾಧಿಕಾರಿ ದೂರು ಪ್ರಕರಣವೆಂದು ಪರಿಗಣಿಸಿ ವಿಚಾರಣೆ ನಡೆಸಿ ಸೂಕ್ತ ಕ್ರಮ ಕೈಗೊಳ್ಳಬೇಕು.
- ಅನುದಾನ ಬಳಕೆಯಲ್ಲಿ ಯಾವುದೇ ದುರುಪಯೋಗ ಕಂಡುಬಂದಲ್ಲಿ ಕಾರ್ಯಕ್ರಮಾಧಿಕಾರಿಯು ಕೂಡಲೇ ಸಂಬಂಧಿಸಿದ ಅಧಿಕಾರಿ ಅಥವಾ ವ್ಯಕ್ತಿಯ ವಿರುದ್ಧ ಕ್ರಮ ಕೈಗೊಳ್ಳಬೇಕು. ತುರ್ತಾಗಿ ಅಂತಹ ಪ್ರಕರಣಗಳಲ್ಲಿ ಹಣ ವಸೂಲಿಗೆ ಕ್ರಮ ವಹಿಸಬೇಕು.
- ಗ್ರಾಮ ಪಂಚಾಯಿತಿಗಳಲ್ಲಿ ವಾರ್ಷಿಕವಾಗಿ ನಡೆಯುವ ಶಾಸನಬದ್ಧ ಲೆಕ್ಕಪರಿಶೋಧನೆಯಲ್ಲಿ ಯೋಜನೆಗೆ ಸಂಬಂಧಿಸಿದ ಸಾಮಾಜಿಕ ಲೆಕ್ಕಪರಿಶೋಧನೆಯಲ್ಲಿ ಯಾವುದಾದರೂ ಆರ್ಥಿಕ

ವಿಷಯಗಳಿಗೆ ಸಂಬಂಧಿಸಿದ ದೂರುಗಳು/ದುರುಪಯೋಗದಂತಹ ಪ್ರಕರಣಗಳು ಕಂಡು ಬಂದಿವೆಯೇ ಎಂಬುವುದನ್ನು ಲೆಕ್ಕಪತ್ರಗಳನ್ನು ದೃಢೀಕರಿಸುವ ಮುನ್ನ ಲೆಕ್ಕಾಧಿಕಾರಿಗಳು ಗಮನಿಸಿ ದಾಖಲಿಸಬೇಕು.

- ಸಾಮಾಜಿಕ ಲೆಕ್ಕಪರಿಶೋಧನೆಯಲ್ಲಿ ಕಂಡುಬಂದ ಯೋಜನೆಯ ಅನುಷ್ಠಾನದಲ್ಲಿ ಉತ್ತಮ ಅಂಶಗಳು, ಲೋಪದೋಷಗಳು ಮತ್ತು ಹಣ ದುರುಪಯೋಗದಂತಹ ಅಂಶಗಳನ್ನು ನಿಗದಿತ ನಮೂನೆಯಲ್ಲಿ ದಾಖಲಿಸಿ ಗ್ರಾಮಸಭಾ ನಡವಳಿಯೊಂದಿಗೆ ಅಧಿಕೃತ ಅಧಿಕಾರಿಗಳಿಗೆ ಮುಂದಿನ ಕ್ರಮಕ್ಕಾಗಿ ವರದಿ ಸಲ್ಲಿಸಬೇಕು.
- ಪರಿಶೀಲನೆಯಲ್ಲಿ ಕಂಡುಬಂದ ಅಂಶಗಳ ಕ್ರೋಢೀಕೃತ ವರದಿ ಹಾಗೂ ಸಾಮಾಜಿಕ ಲೆಕ್ಕಪರಿಶೋಧನೆ ಸಮಿತಿ ವರದಿಗಳನ್ನು ಗ್ರಾಮಸಭೆಯಲ್ಲಿ ಮಂಡಿಸಿ ಸಮುದಾಯ ಪರಿಶೀಲನೆಗೆ ಒಳಪಡಿಸಿ ವರದಿ ದಾಖಲಿಸುವುದು ಸಾಮಾಜಿಕ ಲೆಕ್ಕಪರಿಶೋಧನೆಯ ಪ್ರಮುಖ ಕಾರ್ಯ ವಾಗಿರುತ್ತದೆ.

**ಸಾಮಾಜಿಕ ಲೆಕ್ಕಪರಿಶೋಧನೆ**

ಜಾಗೃತಿ ಮತ್ತು ಉಸ್ತುವಾರಿ ಸಮಿತಿಗಳು ನೀಡುವ ವರದಿ ಹಾಗೂ ಸಾಮಾಜಿಕ ಲೆಕ್ಕ ಪರಿಶೋಧನೆ ಸಮಿತಿ ವರದಿಯಲ್ಲಿ ಯೋಜನೆ ಅನುಷ್ಠಾನ ಸಂಬಂಧ ಯಾವುದಾದರೂ ಲೋಪ ದೋಷಗಳ ಅಥವಾ ದುರುಪಯೋಗದಂತಹ ಅಂಶಗಳಿದ್ದಲ್ಲಿ ಅಂತಹ ವರದಿಗಳನ್ನು ಜಿಲ್ಲಾ/ ತಾಲ್ಲೂಕು ಸಂಯೋಜಕರುಗಳು ಕೂಡಲೇ ಸಂಬಂಧಿಸಿದ ಕಾರ್ಯಕ್ರಮ ಅಧಿಕಾರಿಯವರಿಗೆ ಸಲ್ಲಿಸಬೇಕು. ಕಾರ್ಯಕ್ರಮ ಅಧಿಕಾರಿಯವರು ಅಂತಹ ಪ್ರಕರಣಗಳನ್ನು ನಿಯಮಾನುಸಾರ ವಿಚಾರಣೆ ಮಾಡಿ ಸೂಕ್ತ ಕ್ರಮ ಕೈಗೊಳ್ಳಬೇಕು.

- ಕಾರ್ಯಕ್ರಮ ಅಧಿಕಾರಿಗಳು ವಿಚಾರಣೆಯ ನಂತರ ಕೈಗೊಂಡಿರುವ ಕ್ರಮಗಳ ಕ್ರೋಢೀಕೃತ ವರದಿಯನ್ನು ಕನಿಷ್ಠ 6 ತಿಂಗಳಿಗೊಮ್ಮೆ ನಡೆಯುವ ಸಾಮಾಜಿಕ ಲೆಕ್ಕಪರಿಶೋಧನೆಯ ಗ್ರಾಮ ಸಭೆಗಳಲ್ಲಿ ಮಂಡಿಸಲು ಅನುವಾಗುವಂತೆ ಸಂಬಂಧಿಸಿದ ಗ್ರಾಮ ಪಂಚಾಯಿತಿಗಳಿಗೆ ಗ್ರಾಮಸಭೆ ನಡೆಯುವ ದಿನಾಂಕಕ್ಕಿಂತ ಒಂದು ವಾರ ಮುಂಚಿತವಾಗಿ ಕಳುಹಿಸಬೇಕು.
- ಸಾಮಾಜಿಕ ಲೆಕ್ಕಪರಿಶೋಧನೆಯ ಗ್ರಾಮಸಭೆಯಲ್ಲಿ ವರದಿಯ ಅಂಶಗಳ ಮೇಲೆ ನಡೆದ ಪ್ರಮುಖ ಚರ್ಚಾ ವಿಷಯಗಳು ಹಾಗೂ ಅವುಗಳ ಸಂಬಂಧ ಕೈಗೊಂಡ ತೀರ್ಮಾನಗಳನ್ನು ದಾಖಲಿಸಲು ಕ್ರಮ ವಹಿಸಬೇಕು.
- ಸಾಮಾಜಿಕ ಲೆಕ್ಕಪರಿಶೋಧನೆಯ ಗ್ರಾಮಸಭೆಯಲ್ಲಿ ಮಂಡಿಸಲಾಗುವ ವರದಿಯನ್ನು ಹೊರತುಪಡಿಸಿ ಇತರೆ ವಿಚಾರಗಳು ಚರ್ಚೆಗೆ ಬಂದು ಏನಾದರೂ ಕ್ರಮ ಜರುಗಿಸಬೇಕಾದಲ್ಲಿ

ಅಂತಹ ವಿಷಯಗಳ ಸಂಬಂಧವು ಕೂಡ ಮೇಲೆ ತಿಳಿಸಿದಂತೆ ಜಾಗೃತಿ ಮತ್ತು ಉಸ್ತುವಾರಿ ಸಮಿತಿಗಳು ಹಾಗೂ ಸಾಮಾಜಿಕ ಲೆಕ್ಕಪರಿಶೋಧನೆ ಸಮಿತಿಗಳು ನೀಡುವ ವರದಿಗಳ ಮೇಲೆ ಯಾವ ರೀತಿಯ ಕ್ರಮ ಅನುಸರಿಸಲಾಗುತ್ತದೆಯೋ ಅದೇ ರೀತಿ ಕ್ರಮ ಜರುಗಿಸಬೇಕು.

- ಪ್ರತಿಯೊಂದು ಕಾಮಗಾರಿಯು ಪೂರ್ಣಗೊಂಡ ವರದಿಯ ಜೊತೆಯಲ್ಲಿ ಜಾಗೃತಿ ಮತ್ತು ಉಸ್ತುವಾರಿ ಸಮಿತಿಯು ನೀಡಿರುವ ವರದಿಯನ್ನು ಗ್ರಾಮ ಪಂಚಾಯತಿಯು ಕಡ್ಡಾಯವಾಗಿ ಲಗತ್ತಿಸಬೇಕು.

## 2.6. ಜಂಟಿ ಸಮಿತಿಗಳು

**ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ವಿಧಿ 79 ರ ಪ್ರಕಾರ ಜಂಟಿ ಸಮಿತಿಗಳ ನೇಮಕ**

1. ಒಂದು ತಾಲೂಕಿನೊಳಗಿನ ಅಥವಾ ಒಂದು ಜಿಲ್ಲೆಯ ಎರಡು ಅಥವಾ ಹೆಚ್ಚು ತಾಲೂಕಿನೊಳಗಿನ ಎರಡು ಅಥವಾ ಹೆಚ್ಚು ಗ್ರಾಮ ಪಂಚಾಯತಿಗಳು ಅಥವಾ ಒಂದು ಗ್ರಾಮ ಪಂಚಾಯತಿ ಮತ್ತು ಒಂದು ಅಥವಾ ಹೆಚ್ಚು ಇತರ ಸ್ಥಳೀಯ ಪ್ರಾಧಿಕಾರಗಳು ಅಥವಾ ಶಾಸನ ಬದ್ದ ನಿಕಾಯಗಳು, ಅವುಗಳಿಗೆ ಸಾಮಾನ್ಯವಾದ ಯಾವುದೇ ನಿರ್ದಿಷ್ಠ ಉದ್ದೇಶಕ್ಕಾಗಿ ಅಥವಾ ಅವುಗಳ ಜಂಟಿಯಾಗಿ ಹಿತಾಸಕ್ತಿಯನ್ನು ಹೊಂದಿರುವ ಅಥವಾ ಅವುಗಳ ಜಂಟಿಯಾಗಿ ಹೊಣೆಯಾಗಿರುವ ಯಾವುದೇ ಉದ್ದೇಶಕ್ಕಾಗಿ ಅವುಗಳಲ್ಲಿ ಪ್ರತಿಯೊಂದು ಅಂಗೀಕರಿಸಿದ ಅದೇ ರೀತಿಯ ನಿರ್ಣಯದ ಮೂಲಕ ಅಂತಹ ಉದ್ದೇಶಕ್ಕಾಗಿ ಒಂದು ಜಂಟಿ ಸಮಿತಿಯನ್ನು ನೇಮಕ ಮಾಡಬಹುದು.[43]

2. (1) ನೇ ಉಪ ಪ್ರಕರಣದ ಅಡಿಯಲ್ಲಿ ರಚಿಸಲಾದ ಸಮಿತಿಯು ನಿಯಮಿಸಬಹುದಾದ ಅಂತಹ ವಿಧಾನದಲ್ಲಿ ಸಂಬಂಧಪಟದಟ್ಟ ಪಂಚಾಯತಿ ಪ್ರದೇಶದ ನಿವಾಸಿಗಳನ್ನು ಕೋಆಪ್ಟ್ ಮಾಡಿಕೊಳ್ಳಲು ಸಕ್ಷಮವಾಗಿರತಕ್ಕದ್ದು.

3. ಜಂಟಿ ಸಮಿತಿಯು, ಸಂಬಂಧಪಟ್ಟ ಸ್ಥಳೀಯ ಪ್ರಾಧಿಕಾರಿಗಳ ಅಥವಾ ಶಾಸನ ಬದ್ದ ನಿಕಾಯಗಳ ಸದಸ್ಯರಾಗಿರದ, ಆದರೆ ಅಂತಹ ಸಮಿತಿಗಳಲ್ಲಿ ಸೇವೆ ಸಲ್ಲಿಸುವುದಕ್ಕಾಗಿ ವಿಶೇಷ ಅರ್ಹತೆ ಅಥವಾ ವಿಶೇಷ ಹಿತಾಸಕ್ತಿಯನ್ನು ಪಡೆದಿರುವರೆಂದು ಅದು ಅಭಿಪ್ರಾಯಪಡುವ ಅಂತಹ ವ್ಯಕ್ತಿಗಳನ್ನು ಸೇರಿಸಿಕೊಳ್ಳಬಹುದು. ಆದರೆ ಅಂತಹ ವ್ಯಕ್ತಿಗಳ ಸಂಖ್ಯೆಯು ಜಂಟಿ ಸಮಿತಿ ಸದಸ್ಯರ ಒಟ್ಟು ಸಂಖ್ಯೆಯ ಮೂರನೆ ಒಂದರಷ್ಟನ್ನು ಮೀರತಕ್ಕದಲ್ಲ.

4. ಸರ್ಕಾರವು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ (ಎ) ಜಂಟಿ ಸಮಿತಿಯ ಕಾರ್ಯವಿಧಾನ ಹಾಗು (ಬಿ) ಸಮಿತಿಯ ಸದಸ್ಯರ ಒಟ್ಟು ಸಂಖ್ಯೆಯ ಬಗ್ಗೆ ಆದೇಶ ಹೊರಡಿಸಬಹುದು.

5. ಜಂಟಿ ಸಮಿತಿಯನ್ನು ಯಾವ ಉದ್ದೇಶಕ್ಕಾಗಿ ರಚಿಸಲಾಗಿರುತ್ತದೆಯೋ ಆ ಉದ್ದೇಶವು ಈಡೇರಿದ ತರುವಾಯ ಅದನ್ನು ವಿಸರ್ಜಿಸಬಹುದು.

6. ಸರ್ಕಾರವು ಸಮಿತಿಯನ್ನು ವಿಸರ್ಜಿಸಿದಾಗ ಅದರ ಸ್ವತ್ತುಗಳು ಮತ್ತು ಹೊಣೆಗಾರಿಕೆಗಳ ವಿತರಣೆಯ ಸಂಬಂಧದಲ್ಲಿ ತಾನು ಅವಶ್ಯಕವೆಂದು ಭಾವಿಸುವಂತೆ ಅಂಥ ನಿರ್ದೇಶನವನ್ನು ನೀಡಬಹುದು.

ಈ ರೀತಿಯಾಗಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದಲ್ಲಿ ಜಂಟಿ ಸಮಿತಿಗಳಿಗೆ ಅವಕಾಶವನ್ನು ಕಲ್ಪಿಸಲಾಗಿದೆ.

## 2.7. ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿಗಳ ರಚನೆ

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 148ರ ಪ್ರಕಾರ ಪ್ರತಿಯೊಂದು ತಾಲ್ಲೂಕು ಪಂಚಾಯಿತಿಯು ಈ ಕೆಳಕಂಡ ಸ್ಥಾಯಿ ಸಮಿತಿಯನ್ನು ಹೊಂದಿರಬೇಕು.[44]



**1. ಸಾಮಾನ್ಯ ಸ್ಥಾಯಿಸಮಿತಿ.**

**2. ಹಣಕಾಸು, ಲೆಕ್ಕ ಪರಿಶೋಧನೆ ಮತ್ತು ಯೋಜನಾ ಸಮಿತಿ.**

**3. ಸಾಮಾಜಿಕ ನ್ಯಾಯ ಸಮಿತಿ.**

- ತಾಲ್ಲೂಕು ಪಂಚಾಯತಿಯ ಚುನಾಯಿತ ಸದಸ್ಯರ ಪೈಕಿಯಿಂದ ಚುನಾಯಿತರಾದ ಸದಸ್ಯರನ್ನು ಈ ಸ್ಥಾಯಿ ಸಮಿತಿಗಳು ಒಳಗೊಂಡಿರಬೇಕು.
- ಸ್ಥಾಯಿ ಸಮಿತಿಯ ಅಧ್ಯಕ್ಷನೂ ಸೇರಿದಂತೆ ಪ್ರತಿಯೊಂದು ಸಮಿತಿಯು ಆರು ಜನ ಸದಸ್ಯರನ್ನು ಮೀರಬಾರದು.
- ತಾಲ್ಲೂಕು ಪಂಚಾಯತಿಯ ಯಾವುದೇ ಸದಸ್ಯನು ಒಂದಕ್ಕಿಂತ ಹೆಚ್ಚಿನ ಸ್ಥಾಯಿ ಸಮಿತಿಗೆ ಸದಸ್ಯನಾಗಿರುವಂತಿಲ್ಲ.
- ಸಾಮಾಜಿಕ ನ್ಯಾಯ ಸಮಿತಿಯಲ್ಲಿ ಕನಿಷ್ಠ ಒಬ್ಬ ಮಹಿಳಾ ಸದಸ್ಯೆ ಮತ್ತು ಪರಿಶಷ್ಟ ಜಾತಿ ಅಥವಾ ಪಂಗಡದ ಇವುಗಳಲ್ಲಿ ಯಾವುದು ಹೆಚ್ಚಿನ ಸಂಖ್ಯೆಯ ಚುನಾಯಿತ ಸದಸ್ಯರನ್ನು ಹೊಂದಿರುವುದೋ, ಅದರ ಒಬ್ಬ ಸದಸ್ಯನನ್ನು ಒಳಗೊಂಡಿರಬೇಕು.
- ತಾಲ್ಲೂಕು ಪಂಚಾಯತಿಯ ಅಧ್ಯಕ್ಷನು ಹಣಕಾಸು, ಲೆಕ್ಕ ಪರಿಶೋಧನೆ ಮತ್ತು ಯೋಜನಾ ಸಮಿತಿಯ ಪದನಿಮಿತ್ತ ಸದಸ್ಯ ಹಾಗು ಅಧ್ಯಕ್ಷನಾಗಿರುತ್ತಾನೆ
- ತಾಲ್ಲೂಕು ಪಂಚಾಯತಿಯ ಉಪಾಧ್ಯಕ್ಷನು ಸಾಮಾನ್ಯ ಸ್ಥಾಯಿ ಸಮಿತಿಯ ಪದನಿಮಿತ್ತ ಸದಸ್ಯ ಹಾಗೂ ಅಧ್ಯಕ್ಷನಾಗಿರುತ್ತಾನೆ.
- ಸಾಮಾಜಿಕ ನ್ಯಾಯ ಸಮಿತಿಯು ತನ್ನ ಸದಸ್ಯರ ಪೈಕಿ ಒಬ್ಬನನ್ನು ಅಧ್ಯಕ್ಷನನ್ನಾಗಿ ಚುನಾಯಿಸುತ್ತದೆ.
- ಸ್ಥಾಯಿ ಸಮಿತಿಗಳ ಸದಸ್ಯರ ಹಾಗೂ ಪದಾಧಿಕಾರಿಗಳ ಹುದ್ದೆಯ ಅವಧಿಯು ಆತನು ಚುನಾಯಿಸಿದ ದಿನಾಂಕದಿಂದ ಇಪ್ಪತ್ತು ತಿಂಗಳು ಅಥವಾ ತಾಲೂಕು ಪಂಚಾಯತಿಯ ಸದಸ್ಯನಾಗಿರುವುದು ನಿಂತು ಹೋಗುವವರೆಗೆ ಈ ಎರಡರಲ್ಲಿ ಯಾವುದು ಮೊದಲು ಆ ಅವಧಿಯಾಗಿರುತ್ತದೆ.
- ಕಾರ್ಯನಿರ್ವಹಣೆ ಅಧಿಕಾರಿಯು ಪ್ರತಿಯೊಂದು ಸ್ಥಾಯಿ ಸಮಿತಿಯ ಪದನಿಮಿತ್ತ ಕಾರ್ಯದರ್ಶಿಯಾಗಿರುತ್ತಾನೆ.

**ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿಗಳ ಕಾರ್ಯಗಳು**

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993 ಪ್ರಕರಣ 149ರ ಪ್ರಕಾರ ತಾಲೂಕು ಪಂಚಾಯತಿ ಸ್ಥಾಯಿಸಮಿತಿಗಳು ತಾಲ್ಲೂಕು ಪಂಚಾಯತಿಯು ಅವುಗಳಿಗೆ ವಹಿಸಿಕೊಟ್ಟಿರುವ ಅಧಿಕಾರಗಳಷ್ಟು ಮಟ್ಟಿಗೆ ಕೆಳಗೆ ಉಲ್ಲೇಖಿಸಿರುವ ಕಾರ್ಯಗಳನ್ನು ನೆರವೇರಿಸಬೇಕು.[45]

**ಸಾಮಾನ್ಯ ಸ್ಥಾಯಿಸಮಿತಿ**

ಈ ಸಮಿತಿಯು ಸಿಬ್ಬಂದಿ ವಿಷಯಗಳು, ಸಂಪರ್ಕಗಳು, ಕಟ್ಟಡಗಳು, ಗ್ರಾಮೀಣ ಗೃಹ ನಿರ್ಮಾಣ, ಗ್ರಾಮ ವಿಸ್ತರಣಾ ಕಾರ್ಯಗಳು, ನೈಸರ್ಗಿಕ ವಿಪತ್ತುಗಳಿಗೆ ಪರಿಕರ, ನೀರು ಸರಬರಾಜು ಮತ್ತು ಎಲ್ಲಾ ಉಳಿದ ಸಂಕೀರ್ಣ ವಿಷಯಗಳಿಗೆ ಸಂಬಂಧಪಟ್ಟ ಕಾರ್ಯಗಳನ್ನು ನೆರವೇರಿಸಬೇಕು.

**1. ಹಣಕಾಸು, ಲೆಕ್ಕ ಪರಿಶೋಧನೆ ಮತ್ತು ಯೋಜನಾ ಸಮಿತಿ**

ಈ ಸಮಿತಿಯು ಹಣಕಾಸು ಲೆಕ್ಕ ಪರಿಶೋಧನಾ ಮತ್ತು ಯೋಜನಾ ಸಮಿತಿಯು ತಾಲ್ಲೂಕು ಪಂಚಾಯತಿಯ ಹಣಕಾಸು, ಬಜೆಟ್ ರೂಪಿಸುವುದು ಆದಾಯ ಹೆಚ್ಚಿಸುವುದಕ್ಕಾಗಿ ಪ್ರಸ್ತಾವಗಳ ಪರಿಶೀಲನೆ, ಜಮಾ ಮತ್ತು ಖರ್ಚುಗಳ ವಿವರಣೆಯ ಪರಿಶೀಲಿಸಿ ತಾಲ್ಲೂಕು ಪಂಚಾಯತಿಯ ಹಣಕಾಸಿನ ಮೇಲೆ ಪ್ರಭಾವನ್ನು ಬೀರುವ ಎಲ್ಲಾ ಪ್ರಸ್ತಾವಗಳ ಪರ್ಯಾಲೋಚನೆ ಮತ್ತು ತಾಲ್ಲೂಕು ಪಂಚಾಯತಿಯ ಆದಾಯ ಮತ್ತು ವೆಚ್ಚದ ಸಾಮಾನ್ಯ ಮೇಲ್ವಿಚಾರಣೆ ಮತ್ತು ಸಹಕಾರ, ಸಣ್ಣ ಉಳಿತಾಯ ಮತ್ತು ತಾಲ್ಲೂಕಿನ ಅಭಿವೃದ್ಧಿ ಯೋಜನೆಗೆ ಸಂಬಂಧಿಸಿದ ಇತರ ಯಾವುದೇ ಕಾರ್ಯಗಳನ್ನು ನೆರವೇರಿಸಬೇಕು.

**2. ಸಾಮಾಜಿಕ ನ್ಯಾಯ ಸಮಿತಿ**

ಈ ಸಮಿತಿಯು ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಪಂಗಡಗಳ ಮತ್ತು ಹಿಂದುಳಿದ ವರ್ಗಗಳ ಶೈಕ್ಷಣಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಇತರ ಹಿತದೃಷ್ಠಿಯ ಸಂವರ್ಧನೆ ಸಾಮಾಜಿಕ ಮತ್ತು ಇತರೆ ರೀತಿಯ ಅನ್ಯಾಯ ಅಥವಾ ಶೋಷಣೆಗಳಿಂದ ಅವರನ್ನು ಸಂರಕ್ಷಿಸುವುದು. ಮಹಿಳೆಯರಿಗೆ ಮತ್ತು ಸಮಾಜದ ದುರ್ಬಲ ವರ್ಗದವರಿಗೆ ಸಾಮಾಜಿಕ ನ್ಯಾಯವನ್ನು ದೊರಕಿಸಿಕೊಡುವ ಕಾರ್ಯಗಳನ್ನು ಮಾಡಬೇಕು.

**ತಾಲ್ಲೂಕು ಪಂಚಾಯಿತಿಯ ಸ್ಥಾಯಿಸಮಿತಿಗಳ ಕಾರ್ಯ ವಿಧಾನ**

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 150ರ ಪ್ರಕಾರ ತಾಲ್ಲೂಕು ಪಂಚಾಯತಿಯ ಸ್ಥಾಯಿ ಸಮಿತಿಗಳ ಕಾರ್ಯವಿಧಾನಗಳನ್ನು ಈ ಕೆಳಕಂಡಂತೆ ನೋಡಬಹುದು.[46]

1. ತಾಲ್ಲೂಕು ಪಂಚಾಯತಿಯ ಸಮಿತಿಗಳ ಸದಸ್ಯರ ಚುನಾವಣೆ ಸಮಿತಿಗಳಲ್ಲಿ ಕಾರ್ಯಕಲಾಪಗಳ ನಿರ್ವಹಣೆ ಮತ್ತು ಅವುಗಳಿಗೆ ಸಂಬಂಧಪಟ್ಟ ಇತರ ಎಲ್ಲಾ ವಿಷಯಗಳ ಕುರಿತು ವಿನಿಮಯಗಳನ್ನು ರಚಿಸಬಹುದು.
2. ಪ್ರತಿಯೊಂದು ಸಮಿತಿಯ ಅಧ್ಯಕ್ಷನು ಆ ಸಮಿತಿಯ ಕೆಲಸಕ್ಕೆ ಸಂಬಂಧಿಸಿದಂತೆ ತಾಲ್ಲೂಕು ಪಂಚಾಯತಿಯ ಕಚೇರಿಯಿಂದ ಯಾವುದೇ ಮಾಹಿತಿ ವಿವರಣಾ ವೆಚ್ಚ ಲೆಕ್ಕಪತ್ರ ಅಥವಾ ವರದಿಯನ್ನು ತರಿಸಿಕೊಳ್ಳಬಹುದು.
3. ಸಮಿತಿಯ ಅಧ್ಯಕ್ಷನು ತಾಲ್ಲೂಕು ಪಂಚಾಯಿತಿಯ ಯಾವುದೇ ಸ್ಥಿರ ಸ್ವತ್ತನ್ನು ಅಥವಾ ಸಮಿತಿಯ ಕೆಲಸಕ್ಕೆ ಸಂಬಂಧಿಸಿದಂತೆ ನಡೆಯುತ್ತಿರುವ ಕಾಮಗಾರಿಯನ್ನು ಪ್ರವೇಶಿಸಲು ಮತ್ತು ಅದನ್ನು ಪರಿಶೀಲಿಸಲು ಹಕ್ಕು ಹೊಂದಿರುತ್ತಾನೆ.
4. ಪ್ರತಿಯೊಂದು ಸಮಿತಿಯು ಅದರ ಕೆಲಸಕ್ಕೆ ಸಂಬಂಧಿಸಿದ ಯಾವುದೇ ಅಧಿಕಾರಿಯು ಅದರ ಸಭೆಗಳಲ್ಲಿ ಹಾಜರಿರುವಂತೆ ಅಗತ್ಯವಾಗಿ ಇರುವಂತೆ ನೋಡಿಕೊಳ್ಳುವುದು.
5. ಕಾರ್ಯದರ್ಶಿಯ ಸಮಿತಿಯ ಸೂಚನೆಯ ಮೇರೆಗೆ ನೋಟಿಸುಗಳನ್ನು ನೀಡತಕ್ಕದ್ದು ಮತ್ತು ಅಧಿಕಾರಿಗಳು ಹಾಜರಾಗುವಂತೆ ನೋಡಿಕೊಳ್ಳತಕ್ಕದ್ದು.

## 2.8. ಜಿಲ್ಲಾ ಪಂಚಾಯಿತಿಯ ಸ್ಥಾಯಿಸಮಿತಿಗಳ ರಚನೆ

- ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 186ರ ಪ್ರಕಾರ ಜಿಲ್ಲಾ ಪಂಚಾಯತಿಯ ಈ ಕೆಳಕಂಡ ಐದು ಸ್ಥಾಯಿಸಮಿತಿಗಳನ್ನು ಹೊಂದಿರಬೇಕು.

***ಜಿಲ್ಲಾ ಪಂಚಾಯತಿಯ ಸ್ಥಾಯಿಸಮಿತಿಗಳ ರಚನೆಯ ರೇಖಾ ಚಿತ್ರ***



1. ಸಾಮಾನ್ಯ ಸ್ಥಾಯಿಸಮಿತಿ.

2. ಹಣಕಾಸು, ಲೆಕ್ಕ ಪರಿಶೋಧನೆ ಮತ್ತು ಯೋಜನಾ ಸಮಿತಿ.

3. ಸಾಮಾಜಿಕ ನ್ಯಾಯ ಸಮಿತಿ.

4. ಶಿಕ್ಷಣ ಮತ್ತು ಆರೋಗ್ಯ ಸಮಿತಿ.

5. ಕೃಷಿ ಮತ್ತು ಕೈಗಾರಿಕಾ ಸಮಿತಿ.

- ಪ್ರತಿಯೊಂದು ಸ್ಥಾಯಿಸಮಿತಿಯು ಜಿಲ್ಲಾ ಪಂಚಾಯತಿಯ ಚುನಾಯಿತ ಸದಸ್ಯರ ಪೈಕಿಯಿಂದ ಚುನಾಯಿಸಿದ ಸದಸ್ಯರನ್ನು ಒಳಗೊಂಡಿರಬೇಕು.
- ಪ್ರತಿಯೊಂದು ಸ್ಥಾಯಿಸಮಿತಿಯ ತನ್ನ ಅಧ್ಯಕ್ಷನನ್ನು ಒಳಗೊಂಡಂತೆ ಏಳು ಜನರನ್ನು ಮೀರದಂತೆ ಸದಸ್ಯರನ್ನು ಹೊಂದಿರಬೇಕು.
- ಯಾವ ಸದಸ್ಯನೂ ಎರಡಕ್ಕಿಂತ ಹೆಚ್ಚು ಸ್ಥಾಯಿಸಮಿತಿಗಳಿಗೆ ಸದಸ್ಯನಾಗಿರಬಾರದು.
- ಜಿಲ್ಲಾ ಪಂಚಾಯತಿಯ ಅಧ್ಯಕ್ಷನು, ಹಣಕಾಸು ಮತ್ತು ಲೆಕ್ಕ ಪರಿಶೋಧನೆ ಹಾಗೂ ಯೋಜನೆ ಸಮಿತಿಯ ಪದನಿಮಿತ್ತ ಸದಸ್ಯರು ಹಾಗೂ ಅಧ್ಯಕ್ಷನಾಗಿಬೇಕು.
- ಜಿಲ್ಲಾ ಪಂಚಾಯತಿಯ ಉಪಾಧ್ಯಕ್ಷನು ಸಾಮಾನ್ಯ ಸ್ಥಾಯಿಸಮಿತಿಯ ಪದನಿಮಿತ್ತ ಸದಸ್ಯ ಹಾಗೂ ಅಧ್ಯಕ್ಷನಾಗಿರಬೇಕು.
- ಸಾಮಾಜಿಕ ನ್ಯಾಯ ಸಮಿತಿಯಲ್ಲಿ ಒಬ್ಬ ಮಹಿಳಾ ಸದಸ್ಯೆ ಮತ್ತು ಪರಿಶಿಷ್ಟ ಜಾತಿ ಅಥವಾ ಪಂಗಡದ ಇವುಗಳಲ್ಲಿ ಯಾವುದು ಹೆಚ್ಚಿನ ಸಂಖ್ಯೆಯ ಸದಸ್ಯರನ್ನು ಹೊಂದಿರುವುದೋ ಅದರ ಒಬ್ಬ ಸದಸ್ಯನನ್ನು ಒಳಗೊಂಡಿರಬೇಕು.
- ಸ್ಥಾಯಿಸಮಿತಿಗಳ ಸದಸ್ಯರ ಮತ್ತು ಪದಾಧಿಕಾರಿಗಳ ಅವಧಿಯು ಇಪ್ಪತ್ತು ತಿಂಗಳು ಅಥವಾ ಜಿಲ್ಲಾ ಪಂಚಾಯತಿಯ ಸದಸ್ಯನಾಗಿರುವುದು ಮುಕ್ತಾಯವಾಗುವವರೆಗೆ ಇದರಲ್ಲಿ ಯಾವುದು ಮೊದಲೋ ಆ ಅವಧಿಯಾಗಿರುತ್ತದೆ.
- ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯು ಸಾಮಾನ್ಯ ಸ್ಥಾಯಿಸಮಿತಿಯ ಪದನಿಮಿತ್ತ ಕಾರ್ಯದರ್ಶಿಯಾಗಿರುತ್ತಾನೆ. ಮತ್ತು ಇನ್ನುಳಿದ ಸಮಿತಿಗಳಿಗೆ ಉಪ ಕಾರ್ಯದರ್ಶಿಗಳನ್ನು ಪದನಿಮಿತ್ತ ಕಾರ್ಯದರ್ಶಿಗಳನ್ನಾಗಿ ನಾಮ ನಿರ್ದೇಶನ ಮಾಡುತ್ತಾರೆ.
- ಎಲ್ಲಾ ಸ್ಥಾಯಿಸಮಿತಿಗಳ ಸಭೆಯಲ್ಲಿ ಭಾಗವಹಿಸುವ ಹಕ್ಕನ್ನು ಮುಖ್ಯಕಾರ್ಯ ನಿರ್ವಹಣಾಧಿಕಾರಿಯು ಹೊಂದಿರುತ್ತಾನೆ.

**ಜಿಲ್ಲಾ ಪಂಚಾಯತಿ ಸ್ಥಾಯಿಸಮಿತಿ ಸಭೆಯ ದಿನಾಂಕ ಮತ್ತು ವೇಳೆ**

1. ಪ್ರತಿಯೊಂದು ಸಮಿತಿಯೂ ಅಗತ್ಯವೆನಿಸಿದಾಗ ಅಥವಾ ಎರಡು ತಿಂಗಳಿಗೆ ಒಮ್ಮೆಯಾದರೂ ಜಿಲ್ಲಾ ಪಂಚಾಯತ್ ಕಛೇರಿಯಲ್ಲಿ ಕಾಲಕಾಲಕ್ಕೆ ತಕ್ಕಂತೆ ನಿರ್ಧರಿಸಲಾದ ತಾರೀಖು ಮತ್ತು ಸಮಯದಲ್ಲಿ ಸಭೆಗಳನ್ನು ನಡೆಸಬೇಕು.

2. ಸಮಿತಿಯ ಅಧ್ಯಕ್ಷರು ಯಾವಾಗಲಾದರೂ ಸಮಿತಿಯ ಸಭೆ ಕರೆಯಬಹುದು ಮತ್ತು ಸಮಿತಿಯ ಮೂರು ಸದಸ್ಯರಿಗಿಂತ ಕಡಿಮೆ ಇಲ್ಲದ ಸಹಿ ಮಾಡಿದ ಮನವಿಯು ತಲುಪಿದ 48 ಗಂಟೆಗಳೊಳಗಾಗಿ ಸಭೆಯನ್ನು ಕರೆಯಲೇ ಬೇಕು ಮತ್ತು ಆ ಸಭೆಯಲ್ಲಿ ಚರ್ಚಿಸತಕ್ಕ ವಿಷಯಗಳನ್ನು ನಮೂದಿಸಿರಬೇಕು.

3. ವಿಷಯಸೂಚಿ ತಯಾರಿಸುವುದು; ಸಮಿತಿಯ ಕಾರ್ಯದರ್ಶಿಯು ಸಭೆಯ ನೋಟಿಸನ್ನು ಸಮಿತಿಯು ಎಲ್ಲಾ ಸದಸ್ಯರಿಗೆ ಕಳುಹಿಸಬೇಕು ಮತ್ತು ಆ ನೋಟಿಸಿನಲ್ಲಿ ಚರ್ಚಿಸಿದ ವಿಷಯಗಳನ್ನು ನಮೂದಿಸಿರಬೇಕು.

4. ಸಭೆಯ ಪ್ರಶ್ನೆಗಳನ್ನು ತೀರ್ಮಾನಿಸುವುದು; ಯಾವುದೇ ಸಮಿತಿಯ ಮುಂದೆ ಬರುವಂತಹ ಎಲ್ಲಾ ಪ್ರಶ್ನೆಗಳನ್ನು ಸಭೆಯಲ್ಲಿ ಹಾಜರಿರುವ ಮತ್ತು ಮತ ಚಲಾಯಿಸುವ ಸದಸ್ಯರ ಬಹುಮತದ ಆಧಾರದ ಮೇಲೆ ಎಲ್ಲಾ ತೀರ್ಮಾನಗಳನ್ನು ಕೈಗೊಳ್ಳಲಾಗುತ್ತದೆ. ಒಂದು ವೇಳೆ ಸಮಾನ ಮತಗಳು ಬಂದ ಸಂದರ್ಭದಲ್ಲಿ ಸಭಾಪತಿಯು ಅಥವಾ ಸಭೆಯ ಅಧ್ಯಕ್ಷತೆಯನ್ನು ವಹಿಸುವ ಸದಸ್ಯನು ದ್ವಿತೀಯ ಅಥವಾ ನಿರ್ಣಾಯಕ ಮತ ಚಲಾಯಿಸಬೇಕು.

5. ಸಭೆಯ ನಡವಳಿಗಳನ್ನು ದಾಖಲಿಸುವುದು.

- ಪ್ರತಿಯೊಂದು ಸಮಿತಿಯ ಎಲ್ಲಾ ನಡವಳಿಗಳನ್ನು ಪ್ರತ್ಯೇಕವಾದ ಒಂದು ಪುಸ್ತಕದಲ್ಲಿ ಬರೆಯಬೇಕು ಮತ್ತು ಅದನ್ನು ಸಭಾಪತಿಯು ಅಥವಾ ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದ ಸದಸ್ಯರ ಮತ್ತು ಕಾರ್ಯದರ್ಶಿಗಳು ಸಭೆ ಮುಗಿದ ನಂತರ ಸಹಿ ಮಾಡಬೇಕು. ಸಭೆಯ ನಡವಳಿಗಳನ್ನು ಸಮಿತಿ ಕಾರ್ಯದರ್ಶಿಯವರು ಬರೆಯಬೇಕು.

- ಸ್ಥಾಯಿಸಮಿತಿ ಸಭೆಯ ನಡವಳಿಗಳ ಪ್ರತಿಗಳನ್ನು ಜಿಲ್ಲಾ ಪಂಚಾಯತಿಯ ಮುಂದಿನ ಸಭೆಯಲ್ಲಿ ಪರಿಶೀಲನೆಗೆ ಮತ್ತು ಅನುಮೋದನೆಗೆ ಮಂಡಿಸಬೇಕು. ಸ್ಥಾಯಿಸಮಿತಿಗಳ ನಡವಳಿಗಳನ್ನು ಪರಿಷ್ಕರಿಸುವ ಅಥವಾ ಅವುಗಳಿಗೆ ತಿದ್ದುಪಡಿ ಮಾಡುವ ಮಾರ್ಪಾಡು ಮಾಡುವ ಅಧಿಕಾರ ಜಿಲ್ಲಾ ಪಂಚಾಯತಿಗೆ ಇರುತ್ತದೆ. ಪ್ರಕರಣ(271)ರಲ್ಲಿ ಸ್ಪಷ್ಟಪಡಿಸಲಾಗಿದೆ.

ಹೀಗಾಗಿ ಜಿಲ್ಲಾ ಪಂಚಾಯತಿಯ ಮುಂದಿನ ಸಭೆಯಲ್ಲಿ ಸ್ಥಾಯಿಸಮಿತಿಯ ತೀರ್ಮಾನಗಳನ್ನು ಅಂತಿಮವಾಗಿ ಅನುಮೊದಿಸಿದ ಬಳಿಕ, ಅವುಗಳ ಬಗ್ಗೆ ಕ್ರಮ ತೆಗೆದುಕೊಳ್ಳಬಹುದು.

- ಗೊತ್ತುವಳಿಗಳನ್ನು ಸದಸ್ಯರಿಗೆ ಕಳಿಸುವುದು; ಪ್ರತಿಯೊಂದು ಸ್ಥಾಯಿಸಮಿತಿ ನಡವಳಿಗಳನ್ನು ಜಿಲ್ಲಾ ಪಂಚಾಯಿತಿಯ ಪ್ರತಿಯೊಬ್ಬ ಸದಸ್ಯರಿಗೂ ಕಳುಹಿಸಿಕೊಡಬೇಕು ಮತ್ತು ಜಿಲ್ಲಾ ಪಂಚಾಯತಿಯ ಯಾರೇ ಸದಸ್ಯರು ನೀಡುವ ಸೂಚನೆಯ ಮೇರೆಗೆ ಜಿಲ್ಲಾ ಪಂಚಾಯತಿಯ ಅಂತಹ ಗೊತ್ತುವಳಿಯನ್ನು ಮಾರ್ಪಡಿಸಬಹುದು ಅಥವಾ ತಿದ್ದುಪಡಿ ಮಾಡಬಹುದು ಅಥವಾ ಅದನ್ನು ರದ್ದು ಪಡಿಸಬಹುದು.

- ತದ್ವಿರುದ್ಧ ಗೊತ್ತುವಳಿಗಳ ಬಗ್ಗೆ ಕ್ರಮ ತೆಗೆದುಕೊಳ್ಳವುದು; ಒಂದು ವೇಳೆ ಎರಡು ಅಥವಾ ಅದಕ್ಕಿಂತ ಹೆಚ್ಚಿನ ಸ್ಥಾಯಿ ಸಮಿತಿಗಳು ತದ್ವಿರುದ್ಧವಾದ ಗೊತ್ತುವಳಿಗಳನ್ನು ಕೈಗೊಂಡಲ್ಲಿ ಮತ್ತು ಅಂತಹ ತದ್ವಿರುದ್ಧತೆಯು ಬಗೆಹರಿಯದಿದ್ದಲ್ಲಿ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಯು ಒಂದು ವರದಿಯನ್ನು ಅಧ್ಯಕ್ಷರಿಗೆ ಕಳುಹಿಸಬೇಕು. ಈ ವಿಷಯವನ್ನು ಜಿಲ್ಲಾ ಪಂಚಾಯತಿಯ ಸಭೆಯಲ್ಲಿ ಮಂಡಿಸಬೇಕು. ಈ ವಿಷಯದಲ್ಲಿ ಜಿಲ್ಲಾ ಪಂಚಾಯತಿಯ ತೀರ್ಮಾನವಾಗುವವರೆಗೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯು ಈ ವಿಷಯಕ್ಕೆ ಸಂಬಂಧಪಟ್ಟಂತೆ ಎಲ್ಲಾ ಕ್ರಮಗಳನ್ನು ತಡೆಹಿಡಿಯಬೇಕು.

**ಜಿಲ್ಲಾ ಪಂಚಾಯತಿಯ ಸ್ಥಾಯಿಸಮಿತಿಗಳ ಕಾರ್ಯಗಳು**

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 187ರ ಪ್ರಕಾರ ಜಿಲ್ಲಾ ಪಂಚಾಯುತಿಯ ಸ್ಥಾಯಿ ಸಮಿತಿಗಳ ಕಾರ್ಯಗಳು ಈ ಕೆಳಕಂಡಂತಿವೆ.[47]

**1. ಸಾಮಾನ್ಯ ಸ್ಥಾಯಿಸಮಿತಿ**

ಈ ಸಮಿತಿಯು ಸಿಬ್ಬಂದಿ ವಿಷಯಗಳು, ಸಂಪರ್ಕ ಕಟ್ಟಡಗಳು, ಗ್ರಾಮೀಣ ಗೃಹ ನಿಮಾಣ ಮತ್ತು ಗ್ರಾಮ ವಿಸ್ತರಣಾ ಕಾರ್ಯಗಳು, ಪ್ರಕೃತಿ ವಿಕೋಪಗಳಿಗಾಗಿ ಪರಿಹಾರ ಹಾಗೂ ಉಳಿದಂತೆ ಎಲ್ಲ ಸಂಕೀರ್ಣ ವಿಷಯಗಳಿಗೆ ಸಂಬಂಧಪಟ್ಟಂತೆ ಕಾರ್ಯಗಳನ್ನು ನಿರ್ವಹಿಸಬೇಕು.

**2. ಹಣಕಾಸು, ಲೆಕ್ಕ ಪರಿಶೋಧನ ಹಾಗೂ ಯೋಜನೆ ಸಮಿತಿ**

ಈ ಸಮಿತಿಯು ಜಿಲ್ಲಾ ಪಂಚಾಯತಿಯ ಹಣಕಾಸು ಹಾಗೂ ಬಜೆಟ್ ರೂಪಿಸುವುದು, ಆದಾಯ ಹೆಚ್ಚಿಸುವುದಕ್ಕಾಗಿ ಪ್ರಸ್ತಾವನೆಗಳನ್ನು ಹಾಗೂ ಜಮಾ ಮತ್ತು ಖರ್ಚುಗಳ ವಿವರಗಳನ್ನು ಪರಿಶೀಲಿಸುವುದು. ಜಿಲ್ಲಾ ಪಂಚಾಯತಿಯ ಹಣಕಾಸಿನ ಮೇಲೆ ಪ್ರಭಾವ ಬೀರುವ ಪ್ರಸ್ತಾವನೆಗಳ

ಪರ್ಯಾಲೋಚನೆ ಆದಾಯ ಹಾಗೂ ವೆಚ್ಚ ಸಾಮಾನ್ಯ ಮೇಲ್ವಿಚಾರಣೆಗೆ ಸಂಬಂಧಪಟ್ಟ ಕಾರ್ಯಗಳನ್ನು ನೆರವೇರಿಸಬೇಕು.

**3. ಸಾಮಾಜಿಕ ನ್ಯಾಯ ಸಮಿತಿ**

ಈ ಸಮಿತಿಯ ಪರಿಶಿಷ್ಟ ಜಾತಿ, ಪಂಗಡಗಳು ಮತ್ತು ಹಿಂದುಳಿದ ವರ್ಗಗಳ ಶೈಕ್ಷಣಿಕ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಹಿತಾಸಕ್ತಿಗಳ ಸಂರಕ್ಷಣೆ, ಸಾಮಾಜಿಕ ಅನ್ಯಾಯ ಹಾಗೂ ಎಲ್ಲಾ ರೀತಿಯ ಶೋಷಣೆಯಿಂದ ಅವರನ್ನು ಸಂರಕ್ಷಿಸುವುದು. ಇತರ ದುರ್ಬಲರಿಗೆ ಮತ್ತು ಮಹಿಳೆಯರಿಗೆ ಸಾಮಾಜಿಕ ನ್ಯಾಯ ದೊರಕಿಸಿ ಕೊಡುವ ಕಾರ್ಯಗಳನ್ನು ಮಾಡಬೇಕು.

**4. ಶಿಕ್ಷಣ ಮತ್ತು ಆರೋಗ್ಯ ಸಮಿತಿ**

ಈ ಸಮಿತಿಯು ಜಿಲ್ಲಾ ಪಂಚಾಯತಿಯ ಎಲ್ಲಾ ಶೈಕ್ಷಣಿಕ ಚಟುವಟಿಕೆಗಳ ಹೊಣೆಗಾರಿಕೆ ಹೊಂದಿರುವುದು. ರಾಷ್ಟ್ರೀಯ ಶಿಕ್ಷಣ ನೀತಿ ಮತ್ತು ರಾಷ್ಟ್ರೀಯ ಮತ್ತು ರಾಜ್ಯ ಯೋಜನೆಗಳ ಚೌಕಟ್ಟಿನೊಳಗೆ ಜಿಲ್ಲೆಯಲ್ಲಿ ಶಿಕ್ಷಣ ಯೋಜನೆಗಳನ್ನು ಕೈಗೊಳ್ಳುವದು ಶೈಕ್ಷಣಿಕ ಚಟುವಟಿಕೆಗಳ ಸಮೀಕ್ಷೆ ಮತ್ತು ನಿರ್ಣಯ ಮಾಡುವುದು. ಜಿಲ್ಲಾ ಪಂಚಾಯತಿಯು ವಹಿಸಿಕೊಡಬಹುದಾದ ಶಿಕ್ಷಣ, ವಯಸ್ಕರ ಶಿಕ್ಷಣ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ಸಂಬಂಧಿಸಿದ ಕಾರ್ಯಗಳನ್ನು ನೆರವೇರಿಸುವುದು. ಆರೋಗ್ಯ ಸೇವೆಗಳು, ನೀರು ಸರಬರಾಜು, ಕುಟುಂಬ ಕಲ್ಯಾಣ ಮತ್ತು ಇತರೆ ಕಾರ್ಯಗಳನ್ನು ನಿರ್ವಹಿಸಬೇಕು.

**5. ಕೃಷಿ ಮತ್ತು ಕೈಗಾರಿಕಾ ಸಮಿತಿ**

ಈ ಸಮಿತಿಯು ಕೃಷಿ ಉತ್ಪಾದನೆ, ಬದು ಕಟ್ಟುವುದು ಮತ್ತು ಭೂಮಿಯನ್ನು ಕೃಷಿ ಯೋಗ್ಯವನ್ನಾಗಿ ಮಾಡುವುದು. ಪಶು ಸಂಗೋಪನೆ ಸಹಕಾರಗಳಿಗೆ ಸಂಬಂಧಿಸಿದ ಕಾರ್ಯ ನೆರವೇರಿಸುವುದು. ಗ್ರಾಮ ಹಾಗೂ ಗುಡಿ ಕೈಗಾರಿಕೆಗಳು ಸೇರಿದಂತೆ ಜಿಲ್ಲೆಯಲ್ಲಿ ಕೈಗಾರಿಕಾ ಅಭಿವೃದ್ಧಿಯನ್ನು ಉತ್ತೇಜಿಸುವುದು ಇವುಗಳಿಗೆ ಸಂಬಂಧಪಟ್ಟ ಕಾರ್ಯಗಳನ್ನು ನೆರೆವೇರಿಸಬೇಕು.

**ಜಿಲ್ಲಾ ಪಂಚಾಯತಿಯ ಸ್ಥಾಯಿಸಮಿತಿಗಳ ಕಾರ್ಯವಿಧಾನ**

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 188 ಜಿಲ್ಲಾ ಪಂಚಾಯತಿಯ ಸ್ಥಾಯಿ ಸಮಿತಿಗಳ ಕಾರ್ಯ ವಿಧಾನಗಳ ಬಗ್ಗೆ ತಿಳಿಸಿದೆ.[48] ಅವುಗಳೆಂದರೆ.

1. ಜಿಲ್ಲಾ ಪಂಚಾಯತಿಯು ಸಮಿತಿಗಳ ಸದಸ್ಯರ ಚುನಾವಣೆ ಅವುಗಳ ಕಾರ್ಯಕಲಾಪಗಳ ನಿರ್ವಹಣೆ ಮತ್ತು ಇತರೆ ಎಲ್ಲಾ ವಿಷಯಗಳಿಗೆ ಸಂಬಂಧಪಟ್ಟಂತೆ ನಿಯಮಗಳನ್ನು ರಚಿಸಬಹುದು.

2. ಪ್ರತಿಯೊಂದು ಸಮಿತಿಯ ಅಧ್ಯಕ್ಷನು ಆ ಸಮಿತಿಯ ಕೆಲಸಕ್ಕೆ ಸಂಬಂಧಿಸಿದಂತೆ ಜಿಲ್ಲಾ ಪಂಚಾಯತಿಯ ಕಚೇರಿಯಿಂದ ಯಾವುದೇ ಮಾಹಿತಿ, ವಿವರಣಾ ಪಟ್ಟಿ, ವಿವರ ಪತ್ರ ಅಥವಾ ವರದಿಯನ್ನು ತರಿಸಿಕೊಳ್ಳಲು ಮತ್ತು ಜಿಲ್ಲಾ ಪಂಚಾಯತಿಯ ಯಾವುದೆ ಸ್ಥಿರ ಸ್ವತ್ತನ್ನು ಅಥವಾ ಸಮಿತಿಯ ಕೆಲಸಕ್ಕೆ ಸಂಬಂಧಿಸಿದಂತೆ ನಡೆಯುತ್ತಿರುವ ಕಾಮಗಾರಿಯನ್ನು ಪ್ರವೇಶಿಸಲು ಮತ್ತು ಅದನ್ನು ಪರಿಶೀಲಿಸಲು ಹಕ್ಕನ್ನು ಹೊಂದಿರುತ್ತಾನೆ.

3. ಪ್ರತಿಯೊಂದು ಸಮಿತಿಯು ಸಮಿತಿಯ ಕೆಲಸಕ್ಕೆ ಸಂಬಂಧಪಟ್ಟ ಜಿಲ್ಲಾ ಪಂಚಾಯತಿಯ ಯಾವುದೆ ಅಧಿಕಾರಿಯು ಅದರ ಸಭೆಗಳಲ್ಲಿ ಹಾಜರಿರುವಂತೆ ಅಗತ್ಯಪಡಿಸಬಹುದು ಹಾಗೂ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯು ಸಮಿತಿಯ ಸೂಚನೆಯಂತೆ ನೋಟಿಸುಗಳನ್ನು ನೀಡುವುದರ ಮೂಲಕ ಸಂಬಂಧಪಟ್ಟ ಅಧಿಕಾರಿಯು ಹಾಜರಾಗುವಂತೆ ನೋಡಿಕೊಳ್ಳಬೇಕು.

**ಸಮಿತಿಯ ತೀರ್ಮಾನಗಳ ಮೇಲೆ ಅಧಿಕಾರ**

ಪ್ರತಿಯೊಂದು ಗ್ರಾಮ ಪಂಚಾಯತಿಯು ಅಥವಾ ತಾಲ್ಲೂಕು ಪಂಚಾಯತಿಯು ತನ್ನ ಸಭೆಯಲ್ಲಿ ಅದರ ಯಾವುದೇ ಸ್ಥಾಯಿಸಮಿತಿಯು ತೆಗೆದುಕೊಂಡ ಯಾವುದೇ ತೀರ್ಮಾನವನ್ನು ಸ್ವೀಕರಿಸಬಹುದು ಅಥವಾ ತಿರಸ್ಕರಿಸಬಹುದು ಅಥವಾ ಪರೀಕ್ಷಿಸಬಹುದು ಎಂದು ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 270 ಹೇಳುತ್ತದೆ.

ಹೀಗೆ 1993ರ ಸಂವಿಧಾನದ ತಿದ್ದುಪಡಿ ಅನ್ವಯ ಪಂಚಾಯತ್‌ರಾಜ್ ಸಂಸ್ಥೆಗಳ ಮೂರು ಸ್ತರಗಳಲ್ಲೂ ಸ್ಥಾಯಿಸಮಿತಿಗಳನ್ನು ರಚಿಸಲಾಗಿದ್ದು ಜನತೆಯ ಪ್ರಜಾಪ್ರಭುತ್ವದ ಬಹುತೇಕ ಆಶಯಗಳನ್ನು ಮತ್ತು ಉತ್ತಮ ನಾಗರಿಕ ಸಮಾಜ ನಿರ್ಮಾಣ ಮಾಡುವ ಗುರುತರ ಜವಾಬ್ದಾರಿಯನ್ನು ಈ ಪಾರ್ಲಿಮೆಂಟರಿ ಸಮಿತಿಗಳು ಸಾಂವಿಧಾನಿಕ ಹೊಣೆಗಾರಿಕೆಯನ್ನು ಸೈದ್ಧಾಂತಿಕವಾಗಿ ಮತ್ತು ಕಾಯ್ದೆಬದ್ಧವಾಗಿ ಹೊಂದಿವೆ.[49]

**ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನಗಳು**

1. ಸಣ್ಣ ಪುಟ್ಟ ಬದಲಾವಣೆಗಳನ್ನು ಹೊರತುಪಡಿಸಿದರೆ ಜಾತಿವ್ಯವಸ್ಥೆ ಇನ್ನೂ ಹಾಗೇ ಇದೆ.

2. ಜಾತಿ ಜಾತಿ ನಡುವಿನ ಅಂತರ ಕಡಿಮೆ ಆಗಿದ್ದರೂ ಸಹ ಭೇದ ಭಾವನೆಗಳಿವೆ.

3. ಮೇಲ್ಜಾತಿಯ ಜನರು ಕೆಳ ಸಮುದಾಯಗಳಿಗೆ ರಾಜಕೀಯ ಅಧಿಕಾರವಿದೆ ಎಂದು ತೋರಿಕೆಗೆ ಮಾತ್ರ ಗೌರವ ಕೊಡುತ್ತಾರೆ. ಆದರೆ ಜಾತಿಯ ಕೀಳರಿಮೆ ಹೋಗಿಲ್ಲ.

4. ಆರ್ಥಿಕವಾಗಿ ಸಾಮಾನ್ಯವಾಗಿ ಎಲ್ಲಾ ಕೆಳ ಸಮುದಾಯಗಳು ಕೆಲವು ಪ್ರದೇಶಗಳಲ್ಲಿ ಮೇಲ್ಜಾತಿಗಿಂತ ಹೆಚ್ಚಿನ ಭೂಮಿಯನ್ನು ಹೊಂದಿದ್ದರೂ ಮೇಲ್ಜಾತಿಯವರೆ ಶ್ರೀಮಂತರಾಗಿದ್ದಾರೆ. ಇದಕ್ಕೆ ನಮ್ಮ ಜನರಲ್ಲಿರುವ ಸೋಮಾರಿತನ ಮತ್ತು ಅಜ್ಞಾನವೇ ಕಾರಣವಾಗಿದೆ.

5. ಮನೆಯಲ್ಲಿ ಮತ್ತು ಕೇರಿಯಲ್ಲಿ ಎಲ್ಲಾ ಚುನಾಯಿತ ಪಂಚಾಯತಿ ಸದಸ್ಯರ ಗೌರವ ಹೆಚ್ಚಾಗಿದೆ. ವಾರ್ಡುಗಳಲ್ಲಿ ಏನೇ ಸಮಸ್ಯೆಗಳಿದ್ದರೂ ಅವರನ್ನು ಸಂಪರ್ಕಿಸುತ್ತಾರೆ.

6. ಇನ್ನೂ ಕೆಲವು ಪ್ರದೇಶಗಳಲ್ಲಿ ಮಾತ್ರ ಮದುವೆ, ಮತ್ತಿತ್ತರ ಸಂದರ್ಭಗಳಲ್ಲಿ ಕೆಳ ಸಮುದಾಯಗಳಿಗೆ ಪ್ರತ್ಯೇಕ ಊಟದ ವ್ಯವಸ್ಥೆ ಇರುವುದನ್ನು ಕಾಣಬಹುದು.

ವಿಕೇಂದ್ರೀಕೃತ ಆಡಳಿತದ ನಿರ್ವಹಣೆಯನ್ನು ತಿಳಿಸುವ ಈ ಮೂರು(ಹೊಣೆಗಾರಿಕೆ, ಪಾರದರ್ಶಕತೆ ಮತ್ತು ಭಾಗವಹಿಸುವಿಕೆ) ಪರಿಕಲ್ಪನೆಗಳನ್ನು ಚಿಂತಕರು ಮತ್ತು ಆಡಳಿತಗಾರರು ಹಲವು ಬಗೆಗಳಲ್ಲಿ ಬಳಸಿರುವುದನ್ನು ಕಾಣಬಹುದು. ಹಾಗಾಗಿ, ವಿಕೇಂದ್ರೀಕರಣ ಪ್ರಕ್ರಿಯೆಯ ಕಾರ್ಯನಿರ್ವಹಣೆಯಲ್ಲಿ ಈ ಪರಿಕಲ್ಪನೆಗಳು ಉಂಟುಮಾಡುವ ಪ್ರಭಾವಗಳನ್ನು ನಿರ್ದಿಷ್ಟವಾಗಿ ಅರ್ಥಮಾಡಿಕೊಳ್ಳುವುದು ಅಗತ್ಯವಾಗಿದೆ. ವಿಕೇಂದ್ರೀಕೃತ ಆಡಳಿತವನ್ನು ಒಳ್ಳೆಯ ಆಡಳಿತವನ್ನಾಗಿ ಮಾಡುವಲ್ಲಿ ಈ ಪರಿಕಲ್ಪನೆಗಳು ಪ್ರಮುಖ ಪಾತ್ರ ವಹಿಸುವುದರಿಂದ ಇವುಗಳನ್ನು ಪಂಚಾಯತಿ ಸಂಸ್ಥೆಗಳ ತಳಹಂತದ ವ್ಯವಸ್ಥೆಯಲ್ಲಿ ಪ್ರಾಯೋಗಿಕವಾಗಿ ಮತ್ತು ಆಡಳಿತಾತ್ಮಕವಾಗಿ ಅರ್ಥಮಾಡಿಕೊಳ್ಳುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಪ್ರಜಾಪ್ರಭುತ್ವ ವ್ಯವಸ್ಥೆಯ ನ್ಯಾಯಬದ್ಧತೆ ಮತ್ತು ಸ್ಥಿರತೆಯ ಸರ್ಕಾರ ಮತ್ತು ಇತರೆ ಅಧಿಕಾರಿ ವರ್ಗಗಳು ಸಾರ್ವಜನಿಕ ಹಿತಾಸಕ್ತಿಗನುಗುಣವಾಗಿ ಕಾರ್ಯ ನಿರ್ವಹಿಸುತ್ತಿರುವುದಾಗಿ ಮತದಾರರು ನಂಬಿದ್ದಾರೆ ಎಂಬುದನ್ನು ಅವಲಂಬಿಸಿದೆ ಎನ್ನುವ ಮೂಲಕ ಪ್ರಾತಿನಿಧಿಕ ಪ್ರಜಾಪ್ರಭುತ್ವದಲ್ಲಿ ಹೂಣೆಗಾರಿಕೆಯ ಮಹತ್ವವನ್ನು ಅರ್ಥೈಸುತ್ತಾರೆ. ಇವರು ಎರಡು ಬಗೆಯ ಹೊಣೆಗಾರಿಕೆಯನ್ನು ಉಲ್ಲೇಖಿಸುತ್ತಾರೆ. ಮೊದಲನೆಯದಾಗಿ ಎಕ್ಸ್-ಪೋಸ್ಟ್ ಹೊಣೆಗಾರಿಕೆ. ಇದು ಅಧಿಕಾರವರ್ಗವನ್ನು ಕಾನೂನು, ಮೇಲ್ವಿಚಾರಣೆ ಮತ್ತು ನಿಯಂತ್ರಣ ವಿಧಾನಗಳು ಹಾಗೂ ಅಂತಿಮವಾಗಿ ಚುನಾವಣೆಯ ಮೂಲಕ ಹೊಣೆಗಾರಿಕೆಯಿಂದಿರುವಂತೆ ಮಾಡುವುದಾಗಿದೆ. ಎರಡನೆಯದಾಗಿ ಎಕ್ಸ್-ಅಂಟೆ ಅಥವಾ ಸಕಾರಾತ್ಮಕ ಹೊಣೆಗಾರಿಕೆಯಾಗಿದ್ದು ಇದು ಪ್ರಜೆಗಳ ಹಿತಾಸಕ್ತಿಗನುಗುಣವಾಗಿ ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸಲು, ಪ್ರಜೆಗಳ ಹಿತಾಸಕ್ತಿಗಳಾದರೂ ಯಾವುವು ಎಂಬುದನ್ನು ಪ್ರತಿನಿಧಿಗಳು ಅರಿತು ಅದರಂತೆ ಕಾರ್ಯನಿರ್ವಹಿಸುವುದಾಗಿದೆ.[50]

ಕ್ರಿಸ್ಟೋಫರ್ ರಿಚರ್ಡ್ (1998) ರವರು ಸಾರ್ವಜನಿಕ ಅಧಿಕಾರವನ್ನು ಬಳಸುವುದಕ್ಕೆ ಜವಾಬ್ದಾರಿಯಾಗಿರುವುದೇ ಸಾರ್ವಜನಿಕ ಹೊಣೆಗಾರಿಕೆ, ಇದು ತಾನೂ ಹೊಣೆಗಾರನಾಗಿರಬೇಕು

ಜೊತೆಗೆ ಇತರರನ್ನು ಹೊಣೆಗಾರರನ್ನಾಗಿಸಬೇಕು. ಹೀಗೆ ಈ ಸಾರ್ವಜನಿಕ ಎರಡೂ ರೀತಿಯಲ್ಲಿ ಧ್ವನಿಸುತ್ತದೆ ಎಂದಿದ್ದಾರೆ.[51]

**ಪಂಚಾಯತಿ ಸಂಸ್ಥೆಗಳಲ್ಲಿನ ಹೊಣೆಗಾರಿಕೆಯ ಅಂಶಗಳು**

ಪಂಚಾಯಿತಿ ಸಂಸ್ಥೆಗಳಲ್ಲಿನ ಹೊಣೆಗಾರಿಕೆಯ ಕೆಲವು ಸೂಚ್ಯಾಂಕಗಳು ಈ ಕೆಳಗಿನಂತಿವೆ,

- ಕಾನೂನಿಗೆ ಅನುಗುಣವಾಗಿ ಗ್ರಾಮಸಭೆ, ವಾರ್ಡ್‌ಸಭೆ, ಜಮಾಬಂದಿ ಮತ್ತು ಗ್ರಾಮ ಪಂಚಾಯತಿ ಸಭೆಗಳನ್ನು ನಡೆಸುವುದು.
- ಅಧಿಕಾರಿಗಳು ಮತ್ತು ಚುನಾಯಿತ ಪ್ರತಿನಿಧಿಗಳು ಜನತೆಗೆ ಹೊಣೆಗಾರರಾಗಿರುವುದು.
- ಅಧಿಕಾರಿಗಳು, ಜನಪ್ರತಿನಿಧಿಗಳಿಗೆ ಹೊಣೆಗಾರರಾಗಿರುವುದು.
- ಪಂಚಾಯತಿ ಸಂಸ್ಥೆಗಳಿಗೆ ಸಹಾಯಕ ಸಂಘಟನೆಗಳಾಗಿ ಸ್ಥಳೀಯ ಸರ್ಕಾರೇತರ ಸಂಘಸಂಸ್ಥೆಗಳು ಮತ್ತು ಇತರೆ ಸ್ಥಳೀಯ ಸಂಘಟನೆಗಳ ಪಾತ್ರ.
- ಆನತೆಯ ಅಗತ್ಯತೆ ಮತ್ತು ಅದ್ಯತೆಗಳಿಗನುಗುಣವಾಗಿ ಅಭಿವೃದ್ಧಿ ಯೋಜನೆಗಳ ತಯಾರಿಕೆ.
- ಪಂಚಾಯಿತಿಗಳಿಂದ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಮಹಿಳೆಯರ ಬೇಡಿಕೆಗಳ ಪೂರೈಕೆ.
- ಪಂಚಾಯತ್‌ರಾಜ್ ಸಂಸ್ಥೆಗಳ ಯೋಜನೆಗಳ ಜಾರಿಗೊಳಿಸುವಿಕೆಯಲ್ಲಿನ ವಿಫಲತೆಗೆ ಅಧಿಕಾರ ಮತ್ತು ಅಧಿಕಾರೇತರ ವರ್ಗಗಳ ಉತ್ತರದಾಯಿತ್ವ.
- ಪಂಚಾಯತಿ ಕಾರ್ಯಗಳ ಬಗ್ಗೆ ಜನತೆಯ ಸಂತೃಪ್ತಿಯ ಮಟ್ಟ.
- ಪಂಚಾಯತಿ ಕಾರ್ಯಚಟುವಟಿಕೆಗಳಲ್ಲಿನ ವಸ್ತುನಿಷ್ಟತೆ.
- ಪಂಚಾಯತಿ ಕಾರ್ಯಚಟುವಟಿಕೆಗಳಲ್ಲಿನ ವಸ್ತುನಿಷ್ಟತೆ ಅಥವಾ ನಿಷ್ಪಕ್ಷಪಾತತೆಯ ಮಟ್ಟ.
- ಭೌತಿಕ, ಮಾನವ ಮತ್ತು ಹಣಕಾಸಿನ ಸಂಪನ್ಮೂಲಗಳ ನಿಯೋಜನೆಯಲ್ಲಿನ ವಸ್ತುನಿಷ್ಟತೆ ಮತ್ತು ನಿಷ್ಪಕ್ಷಪಾತತೆ.
- ನಿಗದಿತ ಕಾಲಾವಧಿಯ ಒಳಗೆ, ನೀತಿ ನಿಯಮಗಳ ಚೌಕಟ್ಟಿಗೊಳಪಟ್ಟು ಅಭಿವೃದ್ಧಿ ಕಾರ್ಯಕ್ರಮ ಮತ್ತು ಯೋಜನೆಗಳ ಜಾರಿಗೊಳಿಸುವಿಕೆ.
- ಪಂಚಾಯತಿಯ ಪ್ರತಿನಿಧಿಗಳಲ್ಲಿ ಮತ್ತು ಅಧಿಕಾರಿಗಳಲ್ಲಿ ಪಂಚಾಯತಿಯ ಬಗ್ಗೆ ಜವಾಬ್ದಾರಿ ಮತ್ತು ಅದರ ಪರಿಣಾಮಗಳ ಬಗ್ಗೆ ಬದ್ಧತೆ ಹೊಂದಿರುವುದು.

- ತೀರ್ಮಾನ ಕೈಗೊಳ್ಳುವ ಪ್ರಕ್ರಿಯೆಯಲ್ಲಿ ಜನತೆಯ ಆಶಯಗಳ ಪ್ರತಿಫಲನ.
- ಪಂಚಾಯತ್‌ರಾಜ್ ಸಭೆಗಳ ಅಧಿಕಾರ ಮತ್ತು ಅಧಿಕಾರೇತರ ವರ್ಗಗಳನ್ನು ಅವರ ಕ್ರಿಯೆಗಳಿಗೆ/ ನಡವಳಿಕೆಗಳಿಗೆ ಹೊಣೆಯಾಗಿರುವಂತೆ ಮಾಡುವ ಜನತೆಯ ಸಾಮರ್ಥ್ಯ. ಇತ್ಯಾದಿಗಳು.

ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಪಾರದರ್ಶಕತೆಯನ್ನು ಜಾರಿಗೆ ತರಲು ಕೆಲವು ಸಾಂಸ್ಥಿಕ ವಿಧಾನಗಳಿವೆ. ಅವುಗಳಲ್ಲಿ ಪ್ರಮುಖವಾಗಿ ಗ್ರಾಮಸಭೆ, ವಾರ್ಡ್‌ಸಭೆ, ಜಮಾಬಂದಿ ಮುಂತಾದವುಗಳೆಲ್ಲವೂ ಜನರಿಗೆ ಅಗತ್ಯ ಮಾಹಿತಿಗಳನ್ನು ನೀಡುವ ದೃಷ್ಟಿಯಿಂದಲೇ ನಡೆಯುವಂಥವುಗಳು. ಪ್ರಸ್ತುತ ಪಂಚಾಯತ್ ರಾಜ್ ಸಂಸ್ಥೆಗಳಿಗೆ ಸಂಬಂಧಿಸಿದಂತೆ ಪಾರದರ್ಶಕತೆಯ ಕಲ್ಪನೆಯು ಜನರಿಗೆ ಮಾಹಿತಿಗಳ ಲಭ್ಯತೆಗಳನ್ನು ಕೇಂದ್ರೀಕರಿಸಿಕೊಂಡಿದೆ. ಅಂದರೆ ಎಲ್ಲಾ ಸಾರ್ವಜನಿಕ ಲೆಕ್ಕದಾಖಲೆಗಳು, ಸ್ಕೀಂಗಳು, ಬಜೆಟ್‌ಗಳು ಲೆಕ್ಕಪರಿಶೋಧನೆಗಳ ದಾಖಲೆಗಳು ಮತ್ತು ವರದಿಗಳು ಜನರಿಗೆ ದೊರೆಯುವಂತೆ ಮಾಡುವುದಾಗಿದೆ.

ಭಾಗವಹಿಸುವಿಕೆ ಎಂಬ ಅಂಶವು ತಿಳಿಸುವುದೇನೆಂದರೆ ಚಟುವಟಿಕೆಗಳಲ್ಲಿ ಪಾಲುದಾರಿಕೆ ಹಾಗೂ ಜನರು ತಮ್ಮ ಜ್ಞಾನ ಮತ್ತು ಪ್ರಾಯೋಗಿಕ ಕಲ್ಪನೆಗಳನ್ನು ಕೊಡುಗೆಯಾಗಿ ನೀಡುವ ಮೂಲಕ ಯೋಜನೆಗಳನ್ನು ರೂಪಿಸುವಲ್ಲಿ ಮತ್ತು ಜಾರಿಗೆ ತರುವಲ್ಲಿ ಒಂದು ರೀತಿಯ ಪಾಲುದಾರಿಕೆಯನ್ನು ಹೊಂದಿರುವುದೇ ಆಗಿದೆ. ಭಾಗವಹಿಸುವಿಕೆಯ ಮುಖ್ಯವಾದ ಪ್ರಜಾಪ್ರಭುತ್ವದ ಅಂಶವಾಗಿದೆ. ಇದು ರಾಜಕಾರಣದ ಬಗ್ಗೆ ನಾಗರಿಕರ ಧೋರಣೆ, ಹಾಗೆಯೇ ಸ್ಥಳೀಯ ಸರ್ಕಾರಗಳ ತಿರ್ಮಾನ ಕೈಗೂಳ್ಳುವಿಕೆಯ ಮೇಲೆ ಪ್ರಭಾವ ಬೀರುವ ನಾಗರಿಕರ ರಾಜಕೀಯ ವರ್ತನೆ ಮತ್ತು ಚಟುವಟಿಕೆಗಳಲ್ಲಿ ಭಾಗವಹಿಸುವಿಕೆ ಎಂದು ಕರೆಯಬಹುದಾಗಿದೆ ಎಂದಿದ್ದಾರೆ.[52]

ಭಾಗವಹಿಸುವಿಕೆಯನ್ನು ಹೆಚ್ಚು ಕಡಿಮೆ ಸರ್ಕಾರಿ ಪ್ರತಿನಿಧಿಗಳನ್ನು ಆಯ್ಕೆ ಮಾಡುವ ಮತ್ತು ಅವರು ತೆಗೆದುಕೊಳ್ಳುವ ಚಟುವಟಿಕೆಗಳನ್ನು ಪ್ರಭಾವಿಸುವ ಗುರಿಯನ್ನು ಹೊಂದಿರುವ ಖಾಸಗಿ ಜನರ ಕಾನೂನುಬದ್ಧ ಚಟುವಟಿಕೆಗಳೆಂದು ವಿವರಿಸಿದ್ದಾರೆ. ಇವರ ದೃಷ್ಟಿಯಲ್ಲಿ ಭಾಗವಹಿಸುವಿಕೆಯೆಂದರೆ ಗುರಿಗಳನ್ನು ನಿಗಧಿಪಡಿಸುವ ತಂತ್ರ, ಆಧ್ಯತೆಗಳನ್ನು ಆಯ್ಕೆಮಾಡುವದು ಮತ್ತು ಗುರಿ ಸಾಧಿಸಲು ಅಗತ್ಯವಿರುವ ಸಂಪನ್ಮೂಲಗಳ ಬಗ್ಗೆ ತೀರ್ಮಾನ ಕೈಗೂಳ್ಳುವುದಾಗಿದೆ.[52]

ಸರ್ಕಾರವು ತಿರ್ಮಾನ ತೆಗೆದುಕೂಳ್ಳುವುದರ ಮೇಲೆ ಎಲ್ಲಾ ನಾಗರೀಕರನ್ನೊಳಗೂಂಡಂತೆ ಪ್ರಭಾವ ಬೀರುವುದೇ ಆಗಿದೆ. ಅಂತಹ ನಾಗರಿಕ ಚಟುವಟಿಕೆಗಳು ವ್ಯಕ್ತಿಗತವಾಗಿರಬಹುದು ಅಥವಾ ಸಾಮೂಹಿಕವಾಗಿರಬಹುದು, ಸಂಘಟಿತವಾಗಿರಬಹುದು ಅಥವಾ ಸ್ವಯಂಪ್ರೇರಿತವಾಗಿರಬಹುದು, ಶಾಂತಿಯುತವಾಗಿರಬಹುದು, ಅಥವಾ ಹಿಂಸಾತ್ಮಕವಾಗಿರಬಹುದು, ಕಾನೂನಾತ್ಮಕವಾಗಿರ

ಬಹುದು ಅಥವಾ ಕಾನೂನುಬಾಹಿರವಾಗಿರಬಹುದು. ಭಾಗವಹಿಸುವಿಕೆಯ ಯಶಸ್ಸು ವಾಸ್ತವವಾಗಿ ಇದರಿಂದ ಪ್ರಭಾವಿತಗೊಂಡ ಸರ್ಕಾರದ ತೀರ್ಮಾನಗಳ ಸಂಖ್ಯೆ ಮತ್ತು ವ್ಯಾಪ್ತಿ, ಹಾಗೂ ಆಯಾ ತೀರ್ಮಾನಗಳ ಮೇಲೆ ಯಾವ ಮಟ್ಟದ ಪ್ರಭಾವವಾಗಿದೆ ಎಂಬುದನ್ನು ಅವಲಂಬಿಸಿರುತ್ತದೆ. ಈ ರೀತಿಯಲ್ಲಿ ಜನತೆಯ ಭಾಗವಹಿಸುವಿಕೆಯು ಸರ್ಕಾರವನ್ನು ನ್ಯಾಯಸಮ್ಮತಗೊಳಿಸುವುದಷ್ಟೇ ಅಲ್ಲದೆ ಲಭ್ಯವಿರುವ ಸಂಪನ್ಮೂಲಗಳ ಪರಿಣಾಮಕಾರಿ ಬಳಕೆ ಮತ್ತು ಸಾರ್ವಜನಿಕ ಯೋಜನೆಗಳನ್ನು ಪರಿಣಾಮಕಾರಿಯಾಗಿ ರಚಿಸಲು ಕೊಡುಗೆ ನೀಡಿದಂತಾಗುತ್ತದೆ.[53]

ಸರ್ಕಾರವು ತಿರ್ಮಾನ ತೆಗೆದುಕೊಳ್ಳುವ ಸಂದರ್ಭದಲ್ಲಿ ಅವರ ಅಗತ್ಯತೆಗಳು, ಸಮಸ್ಯೆಗಳು, ಮೌಲ್ಯಗಳು, ನಿರೀಕ್ಷೆಗಳು, ನಾಗರಿಕರಿಗೆ ಸಂಬಂಧಿಸಿದ ವಿಷಯಗಳನ್ನು ಗಣನೆಗೆ ತೆಗೆದುಕೊಂಡಿರುವ ಅಂಶಗಳ ಮೂಲಕ ನಾಗರಿಕರ ಭಾಗವಹಿಸುವಿಕೆಯನ್ನು ಗುರ್ತಿಸಬಹುದು.[54] ಇದು ಗುರಿಗಳನ್ನು ಸಾಧಿಸುವ ನಿಟ್ಟಿನಲ್ಲಿ ಸಾರ್ವಜನಿಕರಿಂದ, ಜನತೆಯ ಕಲ್ಯಾಣದ ಗುರಿ, ಬಡತನ ನಿರ್ಮೂಲನೆಯ ನಿರ್ಧಾರಗಳಿಂದ ಬೆಂಬಲಿತವಾದ ನಾಗರಿಕರು ಮತ್ತು ಸರ್ಕಾರದ ನಡುವೆ ಇರುವ ದ್ವಿಮುಖ ಮಾರ್ಗದ ಸಂಪರ್ಕ ಸಾಧನವಾಗಿದೆ. ಇವರು ತಿಳಿಯುವಂತೆ ಜನತೆಯ ಭಾಗವಹಿಸುವಿಕೆಯು ತೀರ್ಮಾನ ತೆಗೆದುಕೊಳ್ಳುವಲ್ಲಿ, ಯೋಜನೆ ರೂಪಿಸುವಲ್ಲಿ, ಯೋಜನೆಗಳನ್ನು ಜಾರಿಗೆ ತರುವಲ್ಲಿ ಜನರು ಅಧಿಕಾರ ಹೊಂದಲು ಇರುವ ಅಂತರವನ್ನು ಕಡಿಮೆಗೊಳಿಸುತ್ತದೆ ಹಾಗೂ ಸರ್ಕಾರದ ಚಟುವಟಿಕೆಗಳನ್ನು, ಕಾರ್ಯಾಂಗದಂತೆ ಕಾರ್ಯನಿರ್ವಹಿಸುವ ಅದರ ಕಾರ್ಯಗಳನ್ನು, ಎಚ್ಚರಿಸುವದನ್ನು ಭಾಗವಹಿಸುವಿಕೆಯು ಮಾಡುತ್ತದೆ. ಜನರ ಜೀವನ ಗುಣಮಟ್ಟ ಹೆಚ್ಚಿಸುವ ಕಾರ್ಯದಿಂದಾಗಿ ಭಾಗವಹಿಸುವಿಕೆಯು ಯಶಸ್ವಿಯಾಗುತ್ತದೆ. ಇದು ನಾಗರಿಕರು ಅಧಿಕಾರಿಗಳು, ರಾಜಕೀಯ ವಿಷಯಗಳನ್ನು ಅರಿಯಲು, ಸಲಹೆ ನೀಡಲು ಹಾಗೂ ಅಸ್ತಿತ್ವದಲ್ಲಿರುವ ವ್ಯವಸ್ಥೆಯನ್ನು ಪರಸ್ಪರ ಒಪ್ಪಂದದ ಮೂಲಕ ಬದಲಿಸುವುದರ ಮೇಲೆ ಭಾಗವಹಿಸುವಿಕೆಯ ಯಶಸ್ಸು ಅವಲಂಬಿತವಾಗಿರುತ್ತದೆ. ಇವರ ಪ್ರಕಾರ ನಾಗರಿಕರ ಭಾಗವಹಿಸುವಿಕೆಯು ಮೂರು ಆಂತರಿಕವಾಗಿ ಸಂಬಂಧಿಸಿದ ಅಂಶಗಳನ್ನು ಒಳಗೊಂಡಿರುತ್ತದೆ;

1. ನಾಗರಿಕರನ್ನು ಚಟುವಟಿಕೆಗಳಲ್ಲಿ ಹಾಗೂ ತೀರ್ಮಾನ ತೆಗೆದುಕೊಳ್ಳುವಲ್ಲಿ ಒಳಗೊಳ್ಳಲಾಗುತ್ತದೆ. ಮುಕ್ತ ಮತ್ತು ಪಾರದರ್ಶಕತೆಯ ಸರ್ಕಾರ.
2. ಅನುರೂಪವಾದ, ಸಮಂಜಸವಾದ ಮಾಹಿತಿಗಳು ಜನರಿಂದ ಸರ್ಕಾರಕ್ಕೆ ಮತ್ತು ಸರ್ಕಾರದಿಂದ ಜನತೆಗೆ ಸುಲಭವಾಗಿ ರವಾನೆಯಾಗುವಿಕೆ.
3. ನಾಗರಿಕರ ಪಾತ್ರ ಜವಾಬ್ದಾರಿ ಮತ್ತು ಅವರ ಸಮಾನ ಭಾಗವಹಿಸುವಿಕೆಯುನ್ನು ತಿಳಿಸುವ ಉತ್ತಮ ಮಾರ್ಗ.

ಹೀಗೆ ಜನತೆಯ ಭಾಗವಹಿಸುವಿಕೆಯು ಈ ಮೂರು ಅಂಶಗಳ ಮಿಶ್ರಣವಾಗಿದೆ. ಆದ್ದರಿಂದ ಯೋಜನೆಗಳನ್ನು ಅಭಿವೃದ್ಧಿಪಡಿಸಲು, ಅವುಗಳನ್ನು ತ್ಯಜಿಸಲು ಜನತೆಯು ಜಂಟಿಯಾದ ಜವಾಬ್ದಾರಿಯನ್ನು ನಿರ್ವಹಿಸುವ ಮೂಲಕ ನಾಗರಿಕರ ಅಗತ್ಯಗಳನ್ನು ಮತ್ತು ಆಕಾಂಕ್ಷೆಗಳನ್ನು ಈಡೇರಿಸಲು ಸಾಧ್ಯವಾಗುತ್ತದೆ. ಹೀಗೆ ಅಭಿವೃದ್ಧಿ ಪ್ರಕ್ರಿಯೆಗಳಿಗೆ ಸಂಬಂಧಿಸಿದಂತೆ ನಾಗರಿಕರು ತೀರ್ಮಾನ ತೆಗೆದುಕೂಳ್ಳುವಲ್ಲಿ ಭಾಗವಹಿಸುವದರಿಂದ ಅವರಿಗೆ ಅದರ ಅರಿವು ಉಂಟಾಗುತ್ತದೆ ಮತ್ತು ಸರ್ಕಾರದೊಡನೆ ಒಡನಾಟ ಹೆಚ್ಚಾಗುತ್ತದೆ.

ಸಂಶೋಧನೆಗೆ ಪೂರಕವಾದ ಮಾಹಿತಿ ಮತ್ತು ದತ್ತಾಂಶ ಸಂಗ್ರಹಣೆಗಾಗಿ ವಿವಿಧ ಸಂಶೋಧನಾ ತಂತ್ರಗಳನ್ನು ಬಳಸಲಾಗಿದೆ. ಸಂಶೋಧನೆಗೆ ಪೂರಕವಾದ ಪ್ರಕಟಿತ ಮತ್ತು ಅಪ್ರಕಟಿತ ಗ್ರಂಥಗಳು, ಸಂಶೋಧನಾ ಲೇಖನಗಳು ಮತ್ತು ವರದಿಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಇದಕ್ಕೆ ಪೂರಕವಾಗಿ ಪ್ರಶ್ನಾವಳಿ, ಸಂದರ್ಶನ, ಅನುಸೂಚಿ ಮತ್ತು ಅವಲೋಕನಗಳ ಮೂಲಕ ಪ್ರಾಥಮಿಕ ದತ್ತಾಂಶಗಳನ್ನು ಸಂಗ್ರಹಿಸಲಾಗಿದೆ. ಇದರ ಜೊತೆಗೆ ಅಗತ್ಯವಿರುವಲ್ಲಿ ಗ್ರಾಮೀಣ ಪ್ರದೇಶದಲ್ಲಿ ಗುಂಪು ಚರ್ಚೆಗಳ ಮೂಲಕ ಸಮಗ್ರವಾದ ಮಾಹಿತಿಯನ್ನು ಸಂಗ್ರಹಿಸಿ ಅಧ್ಯಯನ ಕೈಗೊಳ್ಳಲಾಗಿದೆ.

**ಕೊನೆ ಟಿಪ್ಪಣಿಗಳು**

1. ಭುವನಹಳ್ಳಿ ನಾಗರಾಜ್, *ವಿಕೇಂದ್ರೀಕರಣ: ಪಂಚಾಯತ್‌ರಾಜ್ ಸಂಸ್ಥೆಗಳು ನಡೆದು ಬಂದ ದಾರಿ: ಒಂದು ಅವಲೋಕನ,* **ಕರ್ನಾಟಕ ವಿಕಾಸ,** ಸಂಪುಟ 40, ಸಂಖ್ಯೆ 2, ಪು.9, ಜನವರಿ 2000.
2. ನರಸಿಂಹರಾವ್ ಪಿ. ಮತ್ತು ವೆಂಕಟರಾವ್, *ರೂರಲ್ ಡೆವೆಲಪ್‌ಮೆಂಟ್ ಇನ್ ಇಂಡಿಯಾ,* **ಕುರುಕ್ಷೇತ್ರ,** ಸಂಚಿಕೆ 48, ಸಂಖ್ಯೆ 5, ಪು. 2, ಆಗಸ್ಟ್ 2000.
3. ಬಡ್ಡಿ ಎಮ್. ಎಮ್, **ಕರ್ನಾಟಕ ಪಂಚಾಯತ್ ಕಾಯ್ದೆ 1993,** ಆಕಳವಾಡಿ ಬುಕ್ ಡಿಪೊ, ಧಾರವಾಡ: 1994.
4. **ಕನ್ನಡ ನಿಘಂಟು,** ಪ್ರಸಾರಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, 1990.
5. **ಅಮೆರಿಕನ್ ಹೆರಿಟೇಜ್ ಡಿಕ್ಷನರೀಸ್,** ನ್ಯೂಡೆಲ್ಲಿ: ಲೆಫ್ಟ್ ವರ್ಡ್, ಪು.17, 2000.
6 ಗವರ್ನ್‌ಮೆಂಟ್ ಆಫ್ ಇಂಡಿಯಾ, **ಪಂಚಾಯತ್‌ರಾಜ್ ಸ್ಟೇಟಸ್ ರಿಪೋರ್ಟ್ 1999,** ಪುಟ. 5–6, ನ್ಯೂಡೆಲ್ಲಿ: ರಾಜೀವ್‌ಗಾಂಧಿ ಫೌಂಢೇಶನ್, 1999.
7. ಕೆ.ಜೆ.ಸುರೇಶ, **ಆಧುನಿಕ ಸರ್ಕಾರಗಳು,**
8. ಭುವನಹಳ್ಳಿ ನಾಗರಾಜ್, *ವಿಕೇಂದ್ರೀಕರಣ ಪಂಚಾಯತ್‌ರಾಜ್ ಸಂಸ್ಥೆಗಳು ನಡೆದು ಬಂದ ದಾರಿ: ಒಂದು ಅವಲೋಕನ,* **ಕರ್ನಾಟಕ ವಿಕಾಸ,** ಸಂಪುಟ 40, ಸಂಖ್ಯೆ 2, ಪು.9, ಜನವರಿ 2000.

9. ಜವಾಹರ್‌ಲಾಲ್ ನೆಹರು, **ದಿ ಡಿಸ್ಕವರಿ ಆಫ್ ಇಂಡಿಯಾ,** ನ್ಯೂಡೆಲ್ಲಿ, 1950.

10. ಭುವನಹಳ್ಳಿ ನಾಗರಾಜ್, *ವಿಕೇಂದ್ರೀಕರಣ: ಪಂಚಾಯತ್‌ರಾಜ್ ಸಂಸ್ಥೆಗಳು ನಡೆದು ಬಂದ ದಾರಿ: ಒಂದು ಅವಲೋಕನ,* **ಕರ್ನಾಟಕ ವಿಕಾಸ,** ಸಂಪುಟ 40, ಸಂಖ್ಯೆ 2, ಪು.9, ಜನವರಿ 2000.

11. ಕಾಮತ್ ಸೂರ್ಯನಾಥ್, **ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ–2,** ಬೆಂಗಳೂರು: ಕರ್ನಾಟಕ ರಾಜ್ಯ ಸರ್ಕಾರ, ಲೋಟಸ್, ಪು.539,

12. ರಾಜಶೇಖರ ಎಚ್.ಎಂ., **ಭಾರತ ಸರ್ಕಾರದ ಮತ್ತು ರಾಜಕೀಯ,** ಬೆಂಳೂರು: ಪ್ರಮೋದ, ಪು.265, 1994.

13. ಬಲವಂತರಾಯ್ ಮೆಹತಾ, **ರಿಪೋರ್ಟ್ ಆಫ್ ದಿ ಟೀಮ್ ಪಾರ್ ದಿ ಸ್ಟಡಿ ಆಫ್ ಕಮಿಟಿ, ಪ್ರಾಜೆಕ್ಟ್ ಆಂಡ್ ನ್ಯಾಷನಲ್ ಎಕ್ಸಟೆನ್ಷನ್ ಸರ್ವೀಸಸ್,** ವಾಲ್ಯುಮ್–1, ನ್ಯೂಡೆಲ್ಲಿ, ಪ್ಲಾನಿಂಗ್ ಕಮಿಷನ್ 1959.

14. ಶ್ರೀಧರ. ಎ, **ಕರ್ನಾಟಕದಲ್ಲಿ ಪಂಚಾಯತ್‌ರಾಜ್ ಕಾಯ್ದೆಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ. 3, 2000.

15. ಭುವನಹಳ್ಳಿ ನಾಗರಾಜ್, ವಿಕೇಂದ್ರೀಕರಣ, ಪಂಚಾಯತ್‌ರಾಜ್ ಸಂಸ್ಥೆಗಳು ನಡೆದು ಬಂದ ದಾರಿ: ಒಂದು ಅವಲೋಕನ, ಕರ್ನಾಟಕ ವಿಕಾಸ, ಸಂಪುಟ 40, ಸಂಖ್ಯೆ 2, ಪು.10, ಜನವರಿ 2000.

16. ಅಶೋಕ್ ಮೆಹತಾ, **ರಿಪೋರ್ಟ್ ಆಫ್ ದಿ ಕಮಿಟಿ ಆನ್ ಪಂಚಾಯತ್‌ರಾಜ್ ಇನ್‌ಸ್ಟಿಟ್ಯೂಶನ್ಸ್,** ನ್ಯೂಡೆಲ್ಲಿ, ಮಿನಿಸ್ಟ್ರಿ ಆಫ್ ಅಗ್ರಿಕಲ್ಚರ್ ಆ್ಯಂಡ್ ಇರಿಗೇಷನ್, 1978.

17. ಶ್ರೀಧರ ಎ, ಪೂರ್ವೋಕ್ತ, ಪು.8–9.

18. ಬಡ್ಡಿ ಎಮ್. ಎಮ್, **ಕರ್ನಾಟಕ ಪಂಚಾಯತ್ ಕಾಯ್ದೆ 1993,** ಧಾರವಾಡ, ಆಕಳವಾಡಿ ಬುಕ್ ಡಿಪೊ, 1994.

19. ಬಡ್ಡಿ ಎಂ. ಎಂ, ಪೂರ್ವೋಕ್ತ, 1993.

20. ಯರಿಸ್ವಾಮಿ ಎಂ, **ಪಿಎಚ್.ಡಿ. ಮಹಾಪ್ರಬಂಧ(ಅಪ್ರಕಟಿತ),** ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002.

21. ಬಡ್ಡಿ ಎಂ. ಎಂ, ಪೂರ್ವೋಕ್ತ, 1993.

22. ಯರಿಸ್ವಾಮಿ ಎಂ., ಪೂರ್ವೋಕ್ತ, 2002.

23. ಶ್ರೀಧರ ಎ, ಪೂರ್ವೋಕ್ತ, ಪು.8-9.

24. ಬಡ್ಡಿ ಎಂ. ಎಂ., ಪೂರ್ವೋಕ್ತ, 1993.

25. ಯರಿಸ್ವಾಮಿ ಎಂ, ಪೂರ್ವೋಕ್ತ, 2002

26. ಬಡ್ಡಿ ಎಂ. ಎಂ, ಪೂರ್ವೋಕ್ತ, 1993.

27. ಚಂದ್ರಶೇಖರ ಎಂ, **ಕರ್ನಾಟಕದಲ್ಲಿ ಪಂಚಾಯತ್‌ರಾಜ್ ಕಾಯ್ದೆಗಳು ಮತ್ತು ಅಭಿವೃದ್ಧಿ,** 2000

28. ಶ್ರೀಧರ ಎ, ಪೂರ್ವೋಕ್ತ, ಪು.8-9.

29. ಯರಿಸ್ವಾಮಿ ಎಂ, ಪೂರ್ವೋಕ್ತ, 2002.

30. ಚಂದ್ರಶೇಖರ ಎಂ, ಪೂರ್ವೋಕ್ತ, 2000.

31. ಶ್ರೀಧರ ಎ, ಪೂರ್ವೋಕ್ತ, ಪು.8-9.

32. ಚಂದ್ರಶೇಖರ ಎಂ, ಪೂರ್ವೋಕ್ತ, 2000.

33. ಯರಿಸ್ವಾಮಿ ಎಂ, ಪೂರ್ವೋಕ್ತ, 2002.

34. ಶೈಲಜಾ ಎಂ.ಸಿ, **ಪ್ರಜಾಪ್ರಭುತ್ವ, ವಿಕೇಂದ್ರೀಕರಣ ಮತ್ತು ಅಭಿವೃದ್ಧಿ,** ಎಸ್.ಐ.ಆರ್.ಡಿ. ಮೈಸೂರು, ಪು.8-17, 2010.

35. ಶೈಲಜಾ ಎಂ.ಸಿ, ಪೂರ್ವೋಕ್ತ, ಪು.9.

36. ಶೈಲಜಾ ಎಂ.ಸಿ, ಪೂರ್ವೋಕ್ತ, ಪು.10.

37. ಶೈಲಜಾ ಎಂ.ಸಿ, ಪೂರ್ವೋಕ್ತ, ಪು.11.

38. ಶೈಲಜಾ ಎಂ.ಸಿ, ಪೂರ್ವೋಕ್ತ, ಪು.12.

39. ಶೈಲಜಾ ಎಂ.ಸಿ, ಪೂರ್ವೋಕ್ತ, ಪು.13.

40. ಚಂದ್ರಶೇಖರ ಎಂ, ಪೂರ್ವೋಕ್ತ, 2000.

41. ಶೈಲಜಾ ಎಂ.ಸಿ, ಪೂರ್ವೋಕ್ತ, ಪು.13

42. ಬಡ್ಡಿ ಎಂ. ಎಂ, ಪೂರ್ವೋಕ್ತ, 1993.

43. ಬಡ್ಡಿ ಎಂ. ಎಂ., ಪೂರ್ವೋಕ್ತ, 1993.

44. ಚಂದ್ರಶೇಖರ ಎಂ, ಪೂರ್ವೋಕ್ತ, 2000

45. ಚಂದ್ರಶೇಖರ ಎಂ, ಪೂರ್ವೋಕ್ತ, 2000.

46. ಯರಿಸ್ವಾಮಿ ಎಂ, ಪೂರ್ವೋಕ್ತ, 2002.

47. ಚಂದ್ರಶೇಖರ ಟಿ.ಆರ್.(ಸಂ), **ವಿಕೇಂದ್ರೀಕರಣ: ತತ್ವ ಮತ್ತು ಆಚರಣೆ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ. 35,

48. ಭುವನಹಳ್ಳಿ ನಾಗರಾಜ್, *ಕರ್ನಾಟಕದಲ್ಲಿ ಗ್ರಾಮಸಭೆಗಳ ವಿಕಾಸ,* **ಕರ್ನಾಟಕ ವಿಕಾಸ,** ಸಂಚಿಕೆ, 40, ಸಂಪುಟ, 10, ಪು.15, ಸೆಪ್ಟೆಂಬರ್ 2000.

49. ಮಹಿಪಾಲ್, *ಇನ್ಯುಲೋಷನ್ ಆಫ್ ಡಿಸೆಂಟ್ರಲೇಜಷನ್ ಪ್ಲಾನಿಂಗ್ ಇನ್ ಇಂಡಿಯಾ,* **ಕುರುಕ್ಷೇತ್ರ,** ಸಂಚಿಕೆ, 45, ಸಂಖ್ಯೆ, 9, ಪು.15, ಜೂನ್ 1997.

50. ಶ್ರೀಧರ ಎ, ಪೂರ್ವೋಕ್ತ, ಪು.42, 2000.

51. ನರಸಿಂಹರಾವ್ ಪಿ. ಮತ್ತು ವೆಂಕಟರಾವ್, *ರೂರಲ್ ಡೆವೆಲಪ್‌ಮೆಂಟ್ ಇನ್ ಇಂಡಿಯಾ,* **ಕುರುಕ್ಷೇತ್ರ,** ಸಂಚಿಕೆ, 48, ಸಂಖ್ಯೆ 5, ಪು.2, ಆಗಸ್ಟ್ 2000.

52. ಥಾಮಸ್ ಐಸಕ್ ಟಿ. ಎಮ್. **ಲೋಕಲ್ ಡೆಮಾಕ್ರಸಿ ಅಂಡ್ ಡೆವೆಲಪ್‌ಮೆಂಟ್: ಪೀಪಲ್ ಕಾಂಪೈನ್ ಫಾರ್ ಡೆಸೆಂಟ್ರಲೈಜಡ್ ಪ್ಲಾನಿಂಗ್ ಇನ್ ಕೇರಳ,** ನ್ಯೂಡೆಲ್ಲಿ: ಲೆಫ್ಟ್ ವರ್ಡ್, ಪು.17, 2000.

## ಅಧ್ಯಾಯ ಮೂರು

# ಅಧ್ಯಯನದ ಕ್ಷೇತ್ರ ಪರಿಚಯ

**ಚಿತ್ರದುರ್ಗ ಜಿಲ್ಲಾ ನಕ್ಷೆ**



## 3.1. ಸಂಶೋಧನಾ ಅಧ್ಯಯನ ಕ್ಷೇತ್ರದ ಆಯ್ಕೆ

ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಸ್ಥಾಯಿಸಮಿತಿಗಳ ಪಾತ್ರದ ಬಗ್ಗೆ ವಿಮರ್ಶಾತ್ಮಕವಾದ ಅಧ್ಯಯನ ಮಾಡುವ ಉದ್ದೇಶದಿಂದ ಕರ್ನಾಟಕ ರಾಜ್ಯದಲ್ಲಿನ ಚಿತ್ರದುರ್ಗ ಜಿಲ್ಲೆಯನ್ನು ಸಂಶೋಧನಾ ಕ್ಷೇತ್ರಾಧ್ಯಯನಕ್ಕಾಗಿ ಆಯ್ಕೆಮಾಡಿಕೊಳ್ಳಲಾಗಿದೆ. ಕರ್ನಾಟಕ ರಾಜ್ಯದ ಸಮಗ್ರ ಮಾನವ ಅಭಿವೃದ್ಧಿ ಸೂಚ್ಯಂಕ–2010 ರ ಪ್ರಕಾರ ದಕ್ಷಿಣ ಕನ್ನಡ ಮತ್ತು ಮಂಡ್ಯ ಜಿಲ್ಲೆಗಳು ಹೆಚ್ಚು ಅಭಿವೃದ್ಧಿಯನ್ನು ಹೊಂದಿದ ಜಿಲ್ಲೆಗಳಾಗಿದ್ದರೆ, ಗುಲಬರ್ಗಾ ಮತ್ತು ಗದಗ ಜಿಲ್ಲೆಗಳು ಅತ್ಯಂತ ಹಿಂದುಳಿದ ಜಿಲ್ಲೆಗಳಾಗಿ ಕಂಡುಬರುತ್ತವೆ. ಕರ್ನಾಟಕ ಮಾನವ ಅಭಿವೃದ್ಧಿ ವರದಿಯ ಪ್ರಕಾರ ಚಿತ್ರದುರ್ಗ ಜಿಲ್ಲೆಯು ಅತ್ಯಂತ ಮುಂದುವರೆದ ಅಥವಾ ಅತ್ಯಂತ ಹಿಂದುಳಿದ ಜಿಲ್ಲೆಯಾಗಿರದೆ ಮಧ್ಯಮಗತಿಯ ಅಭಿವೃದ್ಧಿ ಹೊಂದಿರುವ ಜಿಲ್ಲೆಯಾಗಿದೆ. ಮಾಹಿತಿ ಸಂಗ್ರಹಣೆಯ ದೃಷ್ಟಿಯಿಂದ ಜಿಲ್ಲೆಯ ಅಭಿವೃದ್ಧಿ ಸೂಚ್ಯಂಕವನ್ನು ಆಧರಿಸಿ ಸಂಶೋಧನ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಅತಿಹೆಚ್ಚು ಎಸ್.ಸಿ./ಎಸ್.ಟಿ ಜನಸಂಖ್ಯೆಯನ್ನು ಹೊಂದಿರುವ ಈ ಜಿಲ್ಲೆಯು ಆರ್ಥಿಕ, ಶೈಕ್ಷಣಿಕವಾಗಿ ಹಿಂದುಳಿದಿದ್ದು ಅಭಿವೃದ್ದಿ ಮತ್ತು ಅನಾಭಿವೃದ್ಧಿಯ ಎರಡು ಅಂಶಗಳು ಹೆಚ್ಚಾಗಿ ಕಂಡುಬಂದಿರುವುದರಿಂದ ಅಧ್ಯಯನಕ್ಕೆ  ಚಿತ್ರದುರ್ಗ ಜಿಲ್ಲೆಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ಚಿತ್ರದುರ್ಗ ಜಿಲ್ಲೆಯು ಕರ್ನಾಟಕದ ಮಧ್ಯಭಾಗದಲ್ಲಿದ್ದು ಐತಿಹಾಸಿಕ ಪ್ರದೇಶವಾಗಿದೆ. ಬಯಲು ಸೀಮೆ ಪ್ರದೇಶವಾಗಿರುವುದರಿಂದ ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದ ಜಿಲ್ಲೆಯೆಂದು ಗುರುತಿಸಲಾಗಿದೆ. ಈ ಜಿಲ್ಲೆಯು ಒಟ್ಟು 6 ತಾಲ್ಲೂಕುಗಳನ್ನು ಒಳಗೊಂಡಿದ್ದು ಪ್ರಸ್ತುತ ಅಧ್ಯಯನಕ್ಕೆ ಅಭಿವೃದ್ಧಿ ಹೊಂದಿದ ಚಿತ್ರದುರ್ಗ ಮತ್ತು ಹಿರಿಯೂರು ತಾಲ್ಲೂಕುಗಳನ್ನು ಹಾಗೂ ಅನಭಿವೃದ್ಧಿ ಹೊಂದಿದ  ಮೊಳಕಾಲ್ಮೂರು ತಾಲ್ಲೂಕನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರತಿ ತಾಲ್ಲೂಕಿನಿಂದ ಎರಡು ಗ್ರಾಮ ಪಂಚಾಯಿತಿಗಳನ್ನು ಅಂದರೆ ಒಟ್ಟು 6 ಗ್ರಾಮ ಪಂಚಾಯಿತಿಗಳನ್ನು, ಮೂರು ತಾಲ್ಲೂಕು ಪಂಚಾಯಿತಿಗಳನ್ನು ಮತ್ತು  ಜಿಲ್ಲೆಯ ಜಿಲ್ಲಾ ಪಂಚಾಯಿತಿಯನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.  ಪ್ರಮುಖವಾಗಿ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಅಧಿಕಾರಿಗಳು, ಗ್ರಾಮ ಪಂಚಾಯಿತಿ ಕಾರ್ಯದರ್ಶಿಗಳು ಮತ್ತು ತಾಲ್ಲೂಕು ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿರುವ ಇತರೆ ಅಧಿಕಾರಿಗಳನ್ನು ಸಂದರ್ಶಿಸಿ ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ.

ಪಂಚಾಯತ್ ಸಂಸ್ಥೆಗಳಲ್ಲಿ ಸ್ಥಾಯಿಸಮಿತಿಗಳನ್ನು ರಚಿಸಲು ಸಂವಿಧಾನದಲ್ಲಿ ಅವಕಾಶ ಕಲ್ಪಿಸಿ ಕೊಡಲಾಗಿದೆ. ಈ ಸ್ಥಾಯಿಸಮಿತಿಗಳು ಇಂದು ಸಾಂವಿಧಾನಿಕ ಸಂಸ್ಥೆಗಳಾಗಿದ್ದು, ಅದರಲ್ಲೂ ಮುಖ್ಯವಾಗಿ ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಮಹತ್ವದ ಸಮಿತಿಗಳಾಗಿ ನಿರಂತರವಾಗಿ ಆಡಳಿತದಲ್ಲಿ ಕ್ರಿಯಾಶೀಲತೆ ಮೂಡಿಸುವ ಸಂಸ್ಥೆಗಳಾಗಿ ಕಾರ್ಯನಿರ್ವಹಿಸುವ ಜವಾಬ್ದಾರಿಯನ್ನು ಹೊಂದಿವೆ.

ಈ ಸಮಿತಿಗಳು ತಮ್ಮದೆ ಆದ ಅಧಿಕಾರಗಳನ್ನು ಹೊಂದಿದ್ದು ದೈನಂದಿನ ಕಾರ್ಯನಿರ್ವಹಿಸಲು ಪ್ರತಿ ಹಂತದಲ್ಲೂ ವಿವಿಧ ಸ್ಥಾಯಿಸಮಿತಿಗಳನ್ನು ರಚಿಸಲಾಗಿದೆ. ಪ್ರಾಥಮಿಕ ಮಾಹಿತಿಯಲ್ಲಿ ಅಧ್ಯಯನಕ್ಕೆ ಪೂರಕವಾದ ಮಾಹಿತಿಗಳನ್ನು, ಅಂಕಿ ಅಂಶಗಳನ್ನು, ಅಭಿಪ್ರಾಯಗಳನ್ನು ಮತ್ತು ಸ್ಥಾಯಿಸಮಿತಿಗಳ ಕಾರ್ಯನಿರ್ವಹಣೆಯ ಸಾಧಕ ಬಾಧಕಗಳ ಸಮಗ್ರ ಚಿತ್ರಣವನ್ನು ನೀಡಿದೆ. ಈ ಹಿನ್ನೆಲೆಯಲ್ಲಿ ಗ್ರಾಮ ಪಂಚಾಯತ್, ತಾಲ್ಲೂಕು ಪಂಚಾಯತ್, ಜಿಲ್ಲಾ ಪಂಚಾಯತ್ ಈ ಮೂರು ಸ್ತರಗಳಲ್ಲಿ ಸ್ಥಾಯಿಸಮಿತಿಗಳ ಕಾರ್ಯಕ್ಷಮತೆಯನ್ನು ತುಲನಾತ್ಮಕವಾಗಿ ಪ್ರಸ್ತುತ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ.

## 3.2. ಜಿಲ್ಲೆಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

ಚಿತ್ರದುರ್ಗ ಜಿಲ್ಲೆಯ ಉತ್ತರ ದಿಕ್ಕಿಗೆ ಬಳ್ಳಾರಿ, ಪೂರ್ವ ದಿಕ್ಕಿಗೆ ಆಂಧ್ರಪ್ರದೇಶದ ಅನಂತಪುರ, ಆಗ್ನೇಯ ದಿಕ್ಕಿಗೆ ತುಮಕೂರು, ನೈರುತ್ಯ ದಿಕ್ಕಿಗೆ ಚಿಕ್ಕಮಗಳೂರು, ಪಶ್ಚಿಮ ದಿಕ್ಕಿಗೆ ದಾವಣಗೆರೆ ಜಿಲ್ಲೆಗಳಿದ್ದು, ಜಿಲ್ಲೆಯು ಒಟ್ಟು 83,6081 ಚ.ಕಿ. ಮೀ. ವ್ಯಾಪ್ತಿಯ ವಿಸ್ತೀರ್ಣವನ್ನು ಹೊಂದಿದೆ. $12.60^0$ ಯಿಂದ $15.30^0$ ಅಕ್ಷಾಂಶ ಮತ್ತು $750^0$ ಯಿಂದ $770^0$ ರೇಖಾಂಶದ ಮಧ್ಯೆ ಇದ್ದು, ಸಮುದ್ರಮಟ್ಟದಿಂದ 2000 ಅಡಿ ಎತ್ತರ ಪ್ರದೇಶದಲ್ಲಿದೆ. ಸ್ವಾಭಾವಿಕವಾಗಿ ಚಿತ್ರದುರ್ಗ ಜಿಲ್ಲೆಯು ವಿಸ್ತಾರವಾದ ಬಯಲು ಪ್ರದೇಶ ಮತ್ತು ಅತಿ ಕಡಿಮೆ ಎತ್ತರದ ಕಲ್ಲಿನ ಗುಡ್ಡಗಳ ಸಾಲುಗಳಿಂದ ಕೂಡಿದೆ. ಜಿಲ್ಲೆಯು ಕರ್ನಾಟಕದ ಮಧ್ಯಭಾಗದಲ್ಲಿದ್ದು ರಾಜ್ಯದ ರಾಜಧಾನಿಯಾದ ಬೆಂಗಳೂರಿನಿಂದ ಸುಮಾರು 200 ಕಿ.ಮಿ ದೂರದಲ್ಲಿದೆ. ಇದರ ಭೌಗೋಳಿಕ ವಿಸ್ತೀರ್ಣ 8388.73 ಕಿ.ಮಿ ವಿಸ್ತಾರ ಹೊಂದಿದ್ದು, ಈ ಜಿಲ್ಲೆಯು 6 ತಾಲ್ಲೂಕುಗಳನ್ನು ಒಳಗೊಂಡಿದೆ. ಅವುಗಳೆಂದರೆ 1. ಚಿತ್ರದುರ್ಗ 2. ಚಳ್ಳಕೆರೆ 3. ಹಿರಿಯೂರು 4. ಹೊಳಲ್ಕೆರೆ 5. ಹೊಸದುರ್ಗ 6. ಮೊಳಕಾಲ್ಮೂರು. ಈ ಜಿಲ್ಲೆಯನ್ನು ಪೂರ್ವವಲಯ, ಗುಡ್ಡಗಾಡು ವಲಯ ಮತ್ತು ಸಮತಟ್ಟಾದ ವಲಯಗಳೆಂದು ಪರಿಗಣಿಸಬಹುದು. ಪೂರ್ವ ವಲಯವು ಚಳ್ಳಕೆರೆ, ಹಿರಿಯೂರು ಮತ್ತು ಮೊಳಕಾಲ್ಮೂರು ತಾಲ್ಲೂಕಿನ ದಕ್ಷಿಣ ಭಾಗವಾಗಿದ್ದು, ಇದನ್ನು ವೇದಾವತಿ ನದಿ ಬಯಲು ಎಂದು ಕರೆಯುತ್ತಾರೆ. ಈ ಜಿಲ್ಲೆಯ ಏಕೈಕ ನದಿಯಾದ ವೇದಾವತಿ ನದಿಯು ಹೊಸದುರ್ಗ, ಹಿರಿಯೂರು ಮತ್ತು ಮೊಳಕಾಲ್ಮೂರುಗಳಲ್ಲಿ ಹರಿಯುತ್ತದೆ. ಹೊಳಲ್ಕೆರೆ ತಾಲ್ಲೂಕು ಮಧ್ಯಭಾಗದಲ್ಲಿದ್ದು, ಅದು ಕಡಿದಾದ ಗುಡ್ಡಗಳು ಮತ್ತು ಸಮತಟ್ಟಾದ ಕೆಂಪು ಮತ್ತು ಕಪ್ಪು ಮಣ್ಣಿನಿಂದ ಕೂಡಿದ ಫಲವತ್ತಾದ ಪ್ರದೇಶವನ್ನು ಹೊಂದಿದೆ.[1] ಚಿತ್ರದುರ್ಗ ಜಿಲ್ಲೆಯ ಬಗ್ಗೆ ಐತಿಹಾಸಿಕ ಪುರಾಣಗಳು ದೊರೆತಿವೆ. ಭಾರತ ಭೂ ವಿಜ್ಞಾನ ಇಲಾಖೆಯು ಕೈಗೊಂಡ ವೈಜ್ಞಾನಿಕ ವೀಕ್ಷಣೆಯ ಸಂದರ್ಭದಲ್ಲಿ ಚಂದ್ರವಳ್ಳಿಯ ಪಶ್ಚಿಮ ಭಾಗದಲ್ಲಿ ಕಲ್ಲಿನ ಗುಂಪುಗಳಲ್ಲಿ ಶಾತವಾಹನರ ಕಾಲದ ಸೀಸದ ನಾಣ್ಯ, ರೋಮನ್ ಅವಧಿಯ

ಚಿನ್ನದ ನಾಣ್ಯ, ಬೆಳ್ಳಿಯ ನಾಣ್ಯಗಳು ಹಾಗೂ ಇತರೆ ಆಭರಣಗಳು ದೊರೆತಿವೆ ಎಂದು ಉಲ್ಲೇಖಿಸಲಾಗಿದೆ. ಇದಲ್ಲದೆ ಹೊಳಪಿನ ಮಡಿಕೆಗಳು, ದೊಡ್ಡ ಗಾತ್ರದ ಇಟ್ಟಿಗೆಗಳಿಂದ ಕಟ್ಟಿರುವ ಗೋಡೆಗಳು ಇದ್ದವೆಂದು ಇವು ಕದಂಬರ ಕಾಲದ ಮಯೂರವರ್ಮನ ಕಾಲಕ್ಕೆ ಸೇರಿದಂತವುಗಳು ಎಂದು ಗುರುತಿಸಲಾಗಿದೆ. ಚಿತ್ರದುರ್ಗ ಜಿಲ್ಲೆಯನ್ನು ಒಂದೊಂದು ಕಾಲದಲ್ಲಿ ಒಂದೊಂದು ಹೆಸರಿನಿಂದ ಗುರುತಿಸಲಾಗಿದೆ. ಪುರಾಣ ಕಾಲದಲ್ಲಿ ಚಂದ್ರವಳ್ಳಿ ಎಂದೂ, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು ಮತ್ತು ಕಲ್ಯಾಣಿಚಾಲುಕ್ಯರ ಕಾಲದಲ್ಲಿ ಸೂಳ್ಯಾಲುನಾಡು ಎಂದು, ಹೊಯ್ಸಳ ಕಾಲದಲ್ಲಿ ಪೆರು ಮಾಳೀಪುರವೆಂದು, ವಿಜಯನಗರ ಕಾಲದಲ್ಲಿ ಚಿತ್ರಕಲ್ಲುದುರ್ಗವೆಂದು, ಹೈದರಾಲಿಯ ಕಾಲದಲ್ಲಿ ಪರಕಾಜೂದ್ ಎಂಬ ಹೆಸರುಗಳಿಂದ ಕರೆಯಲಾಗುತ್ತಿತು.**2** ಹೀಗೆ ಐತಿಹಾಸಿಕವಾಗಿ ಜಿಲ್ಲೆಯು ಮಹತ್ವ ಪಡೆದಿದೆ.

### 3.3. ಜಿಲ್ಲೆಯ ಸಾಮಾಜಿಕ ಮತ್ತು ಆರ್ಥಿಕ ವಿವರಗಳು

ಜಿಲ್ಲೆಯ ಸಾಮಾಜಿಕ ಮತ್ತು ಆರ್ಥಿಕ ವಿವರಗಳನ್ನು ನೋಡಿದಾಗ, ಜಿಲ್ಲೆಯು ವಿವಿಧ ಜಾತಿ ವರ್ಗಗಳನ್ನು ಹೊಂದಿದೆ. ಇವುಗಳಲ್ಲಿ ಮುಖ್ಯವಾಗಿ ವಾಲ್ಮೀಕಿ, ಲಿಂಗಾಯತ, ಕುರುಬ, ಮುಸ್ಲಿಂ, ಮತ್ತು ಮಾದಿಗ ಜನಾಂಗಗಳನ್ನು ಹೊಂದಿದೆ. ಜಿಲ್ಲೆಯ ಸಾಮಾಜಿಕ ವಿವರಗಳನ್ನು ನೋಡಿದಾಗ ಕರ್ನಾಟಕ ರಾಜ್ಯ ಮತ್ತು ಚಿತ್ರದುರ್ಗ ಜಿಲ್ಲೆಗಳ ಜನಸಂಖ್ಯೆ 2001 ಜನಗಣತಿಯ ಪ್ರಕಾರ ಯಾವ ಪ್ರಮಾಣದಲ್ಲಿದೆ ಎಂಬುದನ್ನು ತಿಳಿಯಬಹುದಾಗಿದೆ, ರಾಜ್ಯವು ಒಟ್ಟು 4,49,77,201 ಜನಸಂಖ್ಯೆಯನ್ನು ಹೊಂದಿದ್ದು ಇದರಲ್ಲಿ 2,29,51,917ರಷ್ಟು ಪುರುಷರು ಮತ್ತು 2,20,55,284 ಮಹಿಳೆಯರಿದ್ದು, ಪುರುಷರ ಸಂಖ್ಯೆ ಹೆಚ್ಚಾಗಿರುವುದು ಕಂಡುಬರುತ್ತದೆ. ನಂತರ ಗ್ರಾಮೀಣ ಮತ್ತು ನಗರ ಜನಸಂಖ್ಯೆಗೆ ಸಂಬಂಧಿಸಿದಂತೆ ನಗರ ಜನಸಂಖ್ಯೆಗಿಂತ ಗ್ರಾಮೀಣ ಪ್ರದೇಶದ ಜನಸಂಖ್ಯೆ ಹೆಚ್ಚಾಗಿದ್ದು, ಇಲ್ಲಿಯೂ ಕೂಡ ಮಹಿಳೆಯರ ಸಂಖ್ಯೆಗಿಂತ ಪುರುಷರ ಸಂಖ್ಯೆ ಹೆಚ್ಚಾಗಿದೆ. ನಂತರ ಚಿತ್ರದುರ್ಗ ಜಿಲ್ಲೆಗೆ ಸಂಬಂಧಿಸಿದಂತೆ ಅವಲೋಕಿಸಿದಾಗ 21,80,443 ಒಟ್ಟು ಜನಸಂಖ್ಯೆಯನ್ನು ಹೊಂದಿದ್ದು, ಇದರಲ್ಲಿ 15,91,765 ಜನರು ಗ್ರಾಮೀಣ ಪ್ರದೇಶಕ್ಕೆ ಹಾಗೂ 5,78,678 ಜನಸಂಖ್ಯೆ ನಗರ ಪ್ರದೇಶಕ್ಕೆ ಸೇರಿದ್ದಾರೆ.[3] ಪುರುಷ ಮತ್ತು ಮಹಿಳಾ ಜನಸಂಖ್ಯೆಯ ಅನುಪಾತ ಗ್ರಾಮೀಣ ಮತ್ತು ನಗರ ಪ್ರದೇಶಗಳೆರಡರಲ್ಲಿ ಪುರುಷರ ಸಂಖ್ಯೆಗಿಂತ ಮಹಿಳೆಯರ ಸಂಖ್ಯೆ ಕಡಿಮೆಯಾಗಿರುವುದು ಕಂಡುಬರುತ್ತದೆ. ಜಿಲ್ಲೆಯ ಜನಸಂಖ್ಯೆಯ ಪ್ರಮಾಣವನ್ನು ಅವಲೋಕಿಸಿದ ನಂತರ ಜಿಲ್ಲೆಯ ಜನರ ಸಾಕ್ಷರತೆಯ ಪ್ರಮಾಣ ಯಾವ ಮಟ್ಟದಲ್ಲಿ ಇದೆ ಎಂಬುದನ್ನು ತಿಳಿಯಬೇಕಾದ ಅಗತ್ಯತೆ ಇದ್ದು, ಹೆಚ್ಚಿನ ವಿವರಗಳನ್ನು ಕೋಷ್ಟಕದ ಅಂಕಿಅಂಶಗಳಿಂದ ತಿಳಿಯಬಹುದಾಗಿದೆ.

ಇಡೀ ಜಿಲ್ಲಾದ್ಯಂತ ಗ್ರಾಮೀಣ ಪ್ರದೇಶಕ್ಕಿಂತ ನಗರ ಪ್ರದೇಶಗಳಲ್ಲಿ ಸಾಕ್ಷರತೆಯ ಪ್ರಮಾಣ ಹೆಚ್ಚಾಗಿರುವುದು ಕಂಡುಬರುತ್ತದೆ. ನಂತರ ಪುರುಷ ಮತ್ತು ಮಹಿಳೆಯರ ಸಾಕ್ಷರತೆಯ ಪ್ರಮಾಣದಲ್ಲಿ ಮಹಿಳೆಯರಿಗಿಂತ ಪುರುಷರ ಸಾಕ್ಷರತೆಯ ಪ್ರಮಾಣ ಹೆಚ್ಚಾಗಿದ್ದು, ಗ್ರಾಮೀಣ ಪ್ರದೇಶದ ಮಹಿಳಾ ಸಾಕ್ಷರತೆಯ ಪ್ರಮಾಣಕ್ಕಿಂತ ನಗರ ಪ್ರದೇಶದಲ್ಲಿನ ಮಹಿಳೆಯರ ಸಾಕ್ಷರತೆಯ ಪ್ರಮಾಣ ಹೆಚ್ಚಾಗಿರುವುದು ಕಂಡುಬರುತ್ತದೆ. ಒಟ್ಟಾರೆಯಾಗಿ ಗ್ರಾಮೀಣ ಪ್ರದೇಶಕ್ಕಿಂತ ನಗರ ಪ್ರದೇಶದಲ್ಲಿ ಸಾಕ್ಷರತೆಯ ಪ್ರಮಾಣ ಉತ್ತಮವಾಗಿದ್ದು, ಮಹಿಳೆಯರಿಗಿಂತ ಪುರುಷರ ಸಾಕ್ಷರತೆಯ ಪ್ರಮಾಣ ಹೆಚ್ಚಾಗಿರುವುದು ಕಂಡುಬರುತ್ತದೆ. ಶಿಕ್ಷಣ ಸೌಲಭ್ಯಕ್ಕೆ ಸಂಬಂಧಿಸಿದಂತೆ ಕ್ಷೇತ್ರಾಧ್ಯಯನದ ಸಂದರ್ಭದಲ್ಲಿ ಗಮನಿಸಿದಂತೆ ಜಿಲ್ಲೆಯ ಗ್ರಾಮೀಣ ಪ್ರದೇಶದಲ್ಲಿ ಪ್ರಾಥಮಿಕ ಶಾಲೆಗಳ ಲಭ್ಯತೆ ಉತ್ತಮವಾಗಿದ್ದರೂ ಕೂಡ ಗ್ರಾಮೀಣ ಜನತೆಗೆ ಶಿಕ್ಷಣದ ಬಗ್ಗೆ ಕಾಳಜಿ ಇಲ್ಲದಿರುವುದು ಕಂಡುಬರುತ್ತದೆ.[4] ಏಕೆಂದರೆ ಜಿಲ್ಲೆಯಲ್ಲಿ 14 ವರ್ಷಕ್ಕಿಂತ ಕಡಿಮೆ ಇರುವ ಮಕ್ಕಳು ಶಾಲೆಗೆ ಹೋಗುವುದಕ್ಕೆ ಬದಲಾಗಿ ಕೃಷಿ, ಪಶುಪಾಲನೆ, ಹಾಗೂ ಕುರಿ ಸಾಕಣೆಯಂತಹ ಕೃಷಿ ಆಧಾರಿತ ಕೆಲಸಗಳಲ್ಲಿ ನಿರತರಾಗಿದ್ದಾರೆ. ಹಾಗೂ ನಗರದ ಹೋಟೆಲ್, ಗ್ಯಾರೇಜ್, ಮಂಡಕ್ಕಿ ಬಟ್ಟಿಗಳಲ್ಲಿ ಬಾಲಕಾರ್ಮಿಕರಾಗಿ ದುಡಿಯು ತ್ತಿದ್ದಾರೆ. ಇದಕ್ಕೆ ಕಾರಣವೇನು ಎಂಬುದನ್ನು ಅವಲೋಕಿಸಿದಾಗ ಆ ಮಕ್ಕಳ ಪೋಷಕರೇ ಹೇಳುವಂತೆ ಅವನು ದುಡಿಯದಿದ್ದರೆ ನಮ್ಮ ಕುಟುಂಬದ ದೈನಂದಿನ ಜೀವನ ನಡೆಸುವುದೇ ಕಷ್ಟವಾಗುತ್ತದೆ. ಆದ್ದರಿಂದ ಶಾಲೆಗೆ ಕಳುಹಿಸುವುದಕ್ಕೆ ಬದಲಾಗಿ ಕೆಲಸಕ್ಕೆ ಕಳುಹಿಸಲಾಗುತ್ತದೆ ಎಂದು ಮುಗ್ಧತೆಯಿಂದ ಉತ್ತರಿಸುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಸರ್ವಶಿಕ್ಷಣ ಅಭಿಯಾನ ದಂತಹ ಕಾರ್ಯಕ್ರಮಗಳಿಂದಾಗಿ ಈ ರೀತಿಯ ಬಾಲಕಾರ್ಮಿಕರ ಪ್ರಮಾಣ ಸ್ವಲ್ಪಮಟ್ಟಿಗೆ ಕಡಿಮೆಯಾಗಿದೆ. ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳಲ್ಲಿ ಇದರ ಪ್ರಮಾಣ ಇನ್ನೂ ಕಡಿಮೆಯಾಗಬೇಕಾದ ಅಗತ್ಯತೆ ಇರುವುದು ಕಂಡುಬರುತ್ತದೆ. ಜಿಲ್ಲೆಯಲ್ಲಿ ಸಾಕ್ಷರತೆಯು ತಾಲ್ಲೂಕುವಾರು ಯಾವ ಪ್ರಮಾಣದಲ್ಲಿ ಇದೆ ಮತ್ತು ಸಾಕ್ಷರತೆಯ ಪ್ರಮಾಣ ಜಿಲ್ಲೆಯಲ್ಲಿ ಕುಸಿದಿರುವುದಕ್ಕೆ ಕಾರಣವೇನು ಎಂಬುದನ್ನು ಅವಲೋಕಿಸಿದಾಗ ಜಿಲ್ಲೆಯಲ್ಲಿ ಲಭ್ಯವಿರುವ ಜನಸಂಖ್ಯೆಯಲ್ಲಿ ಕಾರ್ಮಿಕರ ಪ್ರಮಾಣ ಯಾವ ಮಟ್ಟದಲ್ಲಿ ಇದೆ ಎಂಬುದನ್ನು ವಿವರಿಸಲಾಗಿದೆ.

**ಅಧ್ಯಯನಕ್ಕೊಳಪಡಿಸಿದ ಜಿಲ್ಲಾ, ತಾಲ್ಲೂಕು ಮತ್ತು ಗ್ರಾಮ ಪಂಚಾಯತ್‌ಗಳ ವಿವರಣೆಗಳು**

ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಸ್ಥಾಯಿಸಮಿತಿಗಳ ಪಾತ್ರ ಈ ವಿಷಯದ ಅಧ್ಯಯನಕ್ಕಾಗಿ ಚಿತ್ರದುರ್ಗ ಜಿಲ್ಲಾ ಪಂಚಾಯತಿಯನ್ನು, ಚಿತ್ರದುರ್ಗ, ಹಿರಿಯೂರು ಮತ್ತು ಮೊಳಕಾಲ್ಮೂರು ತಾಲ್ಲೂಕು ಪಂಚಾಯತ್‌ಗಳನ್ನು ಹಾಗೂ ಚಿತ್ರದುರ್ಗ ತಾಲೂಕಿನಿಂದ ಮಠದ ಕುರುಬರಹಟ್ಟಿ, ಮದಕರಿಪುರ ಮತ್ತು ಹಿರಿಯೂರು ತಾಲೂಕಿನಿಂದ ಬಬ್ಬೂರು, ಗೌಡನಹಳ್ಳಿ ಹಾಗೂ ಮೊಳಕಾಲ್ಮೂರು ತಾಲೂಕಿನಿಂದ ಹಾನಗಲ್, ರಾಯಪುರ ಗ್ರಾಮ ಪಂಚಾಯತ್‌ಗಳನ್ನು ಆಯ್ಕೆ ಮಾಡಿಕೊಂಡಿದ್ದು

ಜನರು 965(98.06%)ರಷ್ಟು ಇದ್ದು. ಅದರಲ್ಲಿ ಪುರುಷರು 565(57.41%)ರಷ್ಟು ಇದ್ದು ಮತ್ತು ಮಹಿಳೆಯರು 400(40.65%)ರಷ್ಟು ಇರುವುದನ್ನು ನೊಡಬಹುದಾಗಿದೆ. ಅದೇ ರೀತಿಯಲ್ಲಿ ಇತರೆ ವರ್ಗಕ್ಕೆ ಸೇರಿದ ಜನರ ಅಪ್ರಸ್ತುತತೆಯನ್ನು ನೋಡಬಹುದಾಗಿದೆ.[42]

ರಾಯಪುರ ಗ್ರಾಮ ಪಂಚಾಯತಿಯಲ್ಲಿ ಗ್ರಾಮವಾರು ಕುಟುಂಬಗಳ ಮತ್ತು ಜನಸಂಖ್ಯೆಯನ್ನು ಸಮೀಕ್ಷೆ ಮಾಡಿದಾಗ ಯರ್ರೇನಹಳ್ಳಿ ಗ್ರಾಮದ ಒಟ್ಟು ಕುಟುಂಬಗಳ ಸಂಖ್ಯೆ 234(100%)ರಷ್ಟು ಇದ್ದು, ಗ್ರಾಮದ ಒಟ್ಟು ಜನಸಂಖ್ಯೆಯು 1,350(100%)ರಷ್ಟು ಇದ್ದು, ಅದರಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಒಟ್ಟು ಜನಸಂಖ್ಯೆಯಲ್ಲಿ 410(30.37%)ರಷ್ಟು ಇದ್ದು, ಅಂದರೆ ಪುರುಷರು 221(16.37%)ರಷ್ಟು ಇದ್ದು ಮತ್ತು ಮಹಿಳೆಯರು 189(14.00%)ರಷ್ಟು ಇರುವುದನ್ನು ನೋಡಬಹುದಾಗಿದೆ. ಹಾಗೆಯೇ ಪರಿಶಿಷ್ಟ ಪಂಗಡಕ್ಕೆ ಸೇರಿದ ಒಟ್ಟು ಜನಸಂಖ್ಯೆಯಲ್ಲಿ 915(67.77%)ರಷ್ಟು ಇದ್ದು, ಅಂದರೆ ಪುರುಷರು 501(37.11%)ರಷ್ಟು ಇದ್ದು ಮತ್ತು ಮಹಿಳೆಯರು 414(30.66%)ರಷ್ಟು ಇರುವುದನ್ನು ನೋಡಬಹುದಾಗಿದೆ. ಅದೇ ರೀತಿಯಲ್ಲಿ ಇತರೆ ವರ್ಗಕ್ಕೆ ಸೇರಿದ ಒಟ್ಟು ಜನಸಂಖ್ಯೆಯಲ್ಲಿ 25(1.85%)ರಷ್ಟು ಇದ್ದು, ಅಂದರೆ 13(0.96%)ರಷ್ಟು ಪುರುಷರು ಇದ್ದು, ಮಹಿಳೆಯರು 12(0.88%)ರಷ್ಟು ಇರುವುದನ್ನು ನೋಡಬಹುದಾಗಿದೆ.

ರಾಯಪುರ ಗ್ರಾಮ ಪಂಚಾಯತಿಯಲ್ಲಿ ಗ್ರಾಮವಾರು ಕುಟುಂಬಗಳ ಮತ್ತು ಜನಸಂಖ್ಯೆಯನ್ನು ಸಮೀಕ್ಷೆ ಮಾಡಿದ ನಂತರ ಸಿದ್ದಯ್ಯನಕೋಟೆ ಗ್ರಾಮದ ಒಟ್ಟು ಕುಟುಂಬಗಳ ಸಂಖ್ಯೆ 399(100%)ರಷ್ಟು ಇದ್ದು, ಗ್ರಾಮದ ಒಟ್ಟು ಜನಸಂಖ್ಯೆಯು 1,865(100%)ರಷ್ಟು ಇದ್ದು, ಅದರಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಒಟ್ಟು ಜನರು 1,015(54.42%)ರಷ್ಟು ಇದ್ದು, ಅಂದರೆ ಪುರುಷರು 610(32.70%)ರಷ್ಟು ಇದ್ದು ಮತ್ತು ಮಹಿಳೆಯರು 405(21.71%)ರಷ್ಟು ಇರುವುದನ್ನು ನೋಡಬಹುದಾಗಿದೆ. ಹಾಗೆಯೇ ಪರಿಶಿಷ್ಟ ಪಂಗಡಕ್ಕೆ ಸೇರಿದ ಒಟ್ಟು ಜನಸಂಖ್ಯೆಯಲ್ಲಿ 65(3.68%)ರಷ್ಟು ಇದ್ದು. ಅದರಲ್ಲಿ ಪುರುಷರು 35(1.87%)ರಷ್ಟು ಇದ್ದು ಮತ್ತು ಮಹಿಳೆಯರು 30(1.60%)ರಷ್ಟು ಇರುವುದನ್ನು ನೋಡಬಹುದಾಗಿದೆ. ಅದೇ ರೀತಿಯಲ್ಲಿ ಇತರೆ ವರ್ಗಕ್ಕೆ ಸೇರಿದ ಒಟ್ಟು ಜನಸಂಖ್ಯೆಯು 785(42.09%)ರಷ್ಟು ಇದ್ದು, ಅದರಲ್ಲಿ ಪುರುಷರು 450(25.12%)ರಷ್ಟು ಇದ್ದು, ಮತ್ತು ಮಹಿಳೆಯರು 335(17.96%)ರಷ್ಟು ಇರುವುದನ್ನು ನೋಡಬಹುದಾಗಿದೆ.

ಕೋಷ್ಟಕ 3.9 ರಲ್ಲಿರುವಂತೆ ರಾಯಪುರ ಗ್ರಾಮ ಪಂಚಾಯತಿಯಲ್ಲಿ ಗ್ರಾಮವಾರು ಕುಟುಂಬಗಳ ಮತ್ತು ಜನಸಂಖ್ಯೆಯನ್ನು ಸಮೀಕ್ಷೆ ಮಾಡಿದಾಗ ವೈ ಪಿ ಜೋಗಿಹಳ್ಳಿ ಗ್ರಾಮದಲ್ಲಿ ಒಟ್ಟು ಕುಟುಂಬಗಳು 57(100%)ರಷ್ಟು ಮತ್ತು ಒಟ್ಟು ಜನಸಂಖ್ಯೆಯು 409(100%)ರಷ್ಟು ಇರುವುದನ್ನು ನೋಡಬಹುದಾಗಿದೆ. ಅದರಲ್ಲಿ ಪರಿಶಿಷ್ಟ ಜಾತಿ ಮತ್ತು ಇತರೆ ವರ್ಗದ ಜನರ ಅಪ್ರಸ್ತುತತೆಯನ್ನು ನೋಡಬಹುದಾಗಿದೆ. ಹಾಗೆಯೇ ಪರಿಶಿಷ್ಟ ಪಂಗಡಕ್ಕೆ ಸೇರಿದ ಒಟ್ಟು ಜನರಲ್ಲಿ

409(100%)ರಷ್ಟು ಇದ್ದು. ಅದರಲ್ಲಿ ಪುರುಷರು 209(51.10%)ರಷ್ಟು ಇದ್ದು ಮತ್ತು ಮಹಿಳೆಯರು 200(48.89%)ರಷ್ಟು ಇರುವುದನ್ನು ನೋಡಬಹುದಾಗಿದೆ. ಕೋಷ್ಟಕ 3.9 ರಲ್ಲಿರುವಂತೆ ರಾಯಪುರ ಗ್ರಾಮ ಪಂಚಾಯತಿಯಲ್ಲಿ ಗ್ರಾಮವಾರು ಕುಟುಂಬಗಳ ಮತ್ತು ಜನಸಂಖ್ಯೆಯನ್ನು ಸಮೀಕ್ಷೆ ಮಾಡಿದ ನಂತರ ಮಠದ ಜೋಗಿಹಳ್ಳಿ ಗ್ರಾಮದಲ್ಲಿ ಒಟ್ಟು ಕುಟುಂಬಗಳು 11(100%)ಇವೆ. ಗ್ರಾಮದ ಒಟ್ಟು ಜನಸಂಖ್ಯೆಯು 69(100%)ರಷ್ಟು ಇದ್ದು, ಅದರಲ್ಲಿ ಪರಿಶಿಷ್ಟ ಜಾತಿಯ ಜನರ ಭಾಗವಹಿಸುವಿಕೆ ಅಪ್ರಸ್ತುತತೆಯಿಂದ ಕೂಡಿದೆ. ಹಾಗೆಯೇ ಪರಿಶಿಷ್ಟ ಪಂಗಡದ ಜನರು 61(88.40%)ರಷ್ಟು ಇದ್ದು. ಅದರಲ್ಲಿ ಪುರುಷರು 31(44.92%)ರಷ್ಟು ಇದ್ದು ಮತ್ತು ಮಹಿಳೆಯರು 30(43.47%)ರಷ್ಟು ಇರುವುದನ್ನು ನೋಡಬಹುದಾಗಿದೆ. ಅದೇ ರೀತಿಯಲ್ಲಿ ಇತರೆ ವರ್ಗಕ್ಕೆ ಸೇರಿದ ಜನಸಂಖ್ಯೆಯು 08(11.59%)ರಷ್ಟು ಇದ್ದು, ಅದರಲ್ಲಿ ಪುರುಷರು 04(5.79%), ರಷ್ಟು ಮತ್ತು ಮಹಿಳೆಯರು 04(5.79%)ರಷ್ಟು ಇರುವುದನ್ನು ನೋಡಬಹುದಾಗಿದೆ.

ರಾಯಪುರ ಗ್ರಾಮ ಪಂಚಾಯತಿಯಲ್ಲಿ ಗ್ರಾಮವಾರು ಕುಟುಂಬಗಳ ಮತ್ತು ಜನಸಂಖ್ಯೆಯನ್ನು ಸಮೀಕ್ಷೆ ಮಾಡಿದ ನಂತರ ತುಪ್ಪದಕ್ಕನಹಳ್ಳಿ ಗ್ರಾಮದಲ್ಲಿ ಒಟ್ಟು ಕುಟುಂಬಗಳು 10(100%)ರಷ್ಟು ಇದ್ದು, ಒಟ್ಟು ಜನಸಂಖ್ಯೆಯು 59(100%)ರಷ್ಟು ಇರುವುದನ್ನು ನೋಡಬಹುದಾಗಿದೆ. ಅದರಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಒಟ್ಟು ಜನರು  59(100%)ಇರುವುದನ್ನು ನೋಡಬಹುದಾಗಿದೆ. ಅದೇ ರೀತಿಯಲ್ಲಿ ಪರಿಶಿಷ್ಟ ಪಂಗಡ ಮತ್ತು ಇತರೆ ವರ್ಗಕ್ಕೆ ಸೇರಿದ ಜನರ ಅಪ್ರಸ್ತುತತೆಯನ್ನು ಕಾಣುತ್ತೇವೆ.[43]

ರಾಯಪುರ ಗ್ರಾಮ ಪಂಚಾಯತಿಯಲ್ಲಿ ಗ್ರಾಮವಾರು ಕುಟುಂಬಗಳ ಮತ್ತು ಜನಸಂಖ್ಯೆಯನ್ನು ಸಮೀಕ್ಷೆ ಮಾಡಿದ ನಂತರ ಐನಹಳ್ಳಿ ಗ್ರಾಮದಲ್ಲಿ ಒಟ್ಟು ಕುಟುಂಬಗಳು 44(100%)ರಷ್ಟು ಇದ್ದು, ಗ್ರಾಮದ ಒಟ್ಟು ಜನಸಂಖ್ಯೆಯು 308(100%)ರಷ್ಟು ಇದ್ದು, ಅದರಲ್ಲಿ ಪರಿಶಿಷ್ಟ ಜಾತಿ ಮತ್ತು ಇತರೆ ವರ್ಗಕ್ಕೆ ಸೇರಿದ ಜನರ ಅಪ್ರಸ್ತುತತೆಯು ಕಾಣುತ್ತದೆ. ಹಾಗೆಯೇ ಪರಿಶಿಷ್ಟ ಪಂಗಡಕ್ಕೆ ಸೇರಿದ ಒಟ್ಟು ಜನಸಂಖ್ಯೆಯಲ್ಲಿ 308(100%)ರಷ್ಟು ಇದ್ದು ಅದರಲ್ಲಿ ಪುರುಷರು 158(51.29%)ರಷ್ಟು ಇದ್ದು ಮತ್ತು ಮಹಿಳೆಯರು 150(48.70%)ರಷ್ಟು ಇರುವುದನ್ನು ನೋಡಬಹುದಾಗಿದೆ.

ರಾಯಪುರ ಗ್ರಾಮ ಪಂಚಾಯತಿಯಲ್ಲಿ ಗ್ರಾಮವಾರು ಕುಟುಂಬಗಳ ಮತ್ತು ಜನಸಂಖ್ಯೆಯನ್ನು ಸಮೀಕ್ಷೆ ಮಾಡಿದ ನಂತರ ಯರ್ಚೇನಹಳ್ಳಿ ಗ್ರಾಮದಲ್ಲಿ ಒಟ್ಟು ಕುಟುಂಬಗಳು 45(100%)ರಷ್ಟು ಇದ್ದು, ಗ್ರಾಮದ ಒಟ್ಟು ಜನಸಂಖ್ಯೆಯು 409(100%)ರಷ್ಟು ಇದ್ದು, ಅದರಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಒಟ್ಟು ಜನರು 205(50.12%)ರಷ್ಟು ಇದ್ದು, ಅಂದರೆ ಪುರುಷರು 106(25.91%)ರಷ್ಟು ಇದ್ದು ಮತ್ತು ಮಹಿಳೆಯರು 99(24.20%)ರಷ್ಟು ಇರುವುದನ್ನು ನೋಡಬಹುದಾಗಿದೆ. ಹಾಗೆಯೇ

ಪರಿಶಿಷ್ಟ ಪಂಗಡಕ್ಕೆ ಸೇರಿದ ಒಟ್ಟು ಜನರಲ್ಲಿ 196(47.92%)ರಷ್ಟು ಇದ್ದು. ಅಂದರೆ ಪುರುಷರು 106(25.91%)ರಷ್ಟು ಇದ್ದು ಮತ್ತು ಮಹಿಳೆಯರು 90(22.00%)ರಷ್ಟು ಇರುವುದನ್ನು ನೋಡಬಹುದಾಗಿದೆ. ಅದೇ ರೀತಿಯಲ್ಲಿ ಇತರೆ ವರ್ಗಕ್ಕೆ ಸೇರಿದ ಜನರು 08(1.95%)ರಷ್ಟು ಇದ್ದು, ಅಂದರೆ ಪುರುಷರು 05(1.22%) ಇದ್ದು, ಮತ್ತು ಮಹಿಳೆಯರು 03(0.78%)ರಷ್ಟು ಇರುವುದನ್ನು ನೋಡಬಹುದಾಗಿದೆ.[44]

ರಾಯಪುರ ಗ್ರಾಮಪಂಚಾಯತಿಯ ಸದಸ್ಯರ ಸಮೀಕ್ಷೆ ಮಾಡಿದ ನಂತರ ಒಟ್ಟು 16(100%)ರಷ್ಟು ಸದಸ್ಯರಲ್ಲಿ ಪುರುಷ ಸದಸ್ಯರು 8(50.0%)ಮತ್ತು ಮಹಿಳಾ ಸದಸ್ಯರು 8(50.0%)ರಷ್ಟು ಇದ್ದು, ಪರಸ್ಪರ ಸಮಾನ ಸ್ಥಾನಮಾನಗಳನ್ನು ಹೊಂದಿದ್ದಾರೆ ಎಂದು ತಿಳಿದುಬರುತ್ತದೆ.

ರಾಯಪುರ ಗ್ರಾಮ ಪಂಚಾಯತಿಯಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿದ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ. ಒಟ್ಟು ಗ್ರಾಮ ಪಂಚಾಯತಿ ಸದಸ್ಯರು 16(100%)ರಷ್ಟು ಇದ್ದು, ಅದರಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಒಟ್ಟು ಸದಸ್ಯರಲ್ಲಿ 4(25.00%)ರಷ್ಟು ಇದ್ದು, ಅಂದರೆ ಪುರುಷ ಸದಸ್ಯರು 2(12.5%)ರಷ್ಟು ಇದ್ದು, ಮತ್ತು ಮಹಿಳೆಯರು 2(12.5%)ರಷ್ಟು ಇರುವುದನ್ನು ನೋಡಬಹುದಾಗಿದೆ. ಹಾಗೆಯೇ ಪರಿಶಿಷ್ಟ ಪಂಗಡಕ್ಕೆ ಸೇರಿದ ಒಟ್ಟು ಸದಸ್ಯರಲ್ಲಿ 9(56.25%)ರಷ್ಟು ಇದ್ದು, ಅದರಲ್ಲಿ ಪುರುಷ ಸದಸ್ಯರು 6(37.5%)ರಷ್ಟು ಇದ್ದು ಮಹಿಳಾ ಸದಸ್ಯರು 3(18.75%)ರಷ್ಟು ಇರುವುದನ್ನು ನೋಡಬಹುದಾಗಿದೆ. ಅದೇ ರೀತಿಯಲ್ಲಿ ಹಿಂದುಳಿದ ವರ್ಗಕ್ಕೆ ಸೇರಿದ ಒಟ್ಟು ಸದಸ್ಯರಲ್ಲಿ 3(18.75%)ರಷ್ಟು ಇದ್ದು, ಅದರಲ್ಲಿ ಪುರುಷರು 2(12.5%)ರಷ್ಟು ಮತ್ತು ಮಹಿಳಾ ಸದಸ್ಯರು 1(6.25%)ರಷ್ಟು ಇರುವುದನ್ನು ನೋಡುತ್ತೇವೆ. ಅದೇ ರೀತಿಯಲ್ಲಿ ಯಾವುದೇ ಇತರೆ ವರ್ಗಕ್ಕೆ ಸೇರಿದ ಸದಸ್ಯರ ಪ್ರಸ್ತುತತೆ ಇರುವುದಿಲ್ಲ.[45]

ಒಟ್ಟಾರೆಯಾಗಿ ರಾಯಪುರ ಗ್ರಾಮ ಪಂಚಾಯತಿ ಸದಸ್ಯರ ವಿವರಗಳನ್ನು ನೋಡಿದಾಗ ಪರಿಶಿಷ್ಟ ಪಂಗಡಕ್ಕೆ ಸೇರಿದ ಸದಸ್ಯರ ಸಂಖ್ಯೆಯು 9(56.25%)ರಷ್ಟು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ಹೀಗೆ ಅಧ್ಯಯನದ ವ್ಯಾಪ್ತಿ ಚಿತ್ರದುರ್ಗ ಜಿಲ್ಲಾ ಪಂಚಾಯತಿಯನ್ನು ಹಾಗೂ ಚಿತ್ರದುರ್ಗ, ಹಿರಿಯೂರು ಮತ್ತು ಮೊಳಕಾಲ್ಮೂರು ತಾಲ್ಲೂಕು ಪಂಚಾಯತ್‌ಗಳನ್ನು ಹಾಗೂ ಚಿತ್ರದುರ್ಗ ತಾಲೂಕಿನ ಮಠದ ಕುರುಬರಹಟ್ಟಿ ಮತ್ತು ಮದಕರಿಪುರ, ಹಿರಿಯೂರು ತಾಲೂಕಿನ ಬಬ್ಬೂರು ಮತ್ತು ಗೌಡನಹಳ್ಳಿ ಮತ್ತು ಮೊಳಕಾಲ್ಮೂರು ತಾಲೂಕಿನ ಹಾನಗಲ್ ಮತ್ತು ರಾಯಪುರ ಗ್ರಾಮ ಪಂಚಾಯತ್‌ಗಳನ್ನು ಆಯ್ಕೆ ಮಾಡಿಕೊಂಡಿದ್ದು ಇವುಗಳ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಸ್ಥಾಯಿಸಮಿತಿಗಳ ವಿವರಗಳನ್ನು ಅಂಕಿ ಅಂಶಗಳ ಸಮೇತ ವಿಶ್ಲೇಷಿಸಲಾಗಿದೆ. ಹೀಗೆ ಚಿತ್ರದುರ್ಗ ಕ್ಷೇತ್ರ ಪರಿಚಯವನ್ನ ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

## ಕೊನೆ ಟಿಪ್ಪಣಿಗಳು


1. ಡೈರೆಕ್ಟರ್ ಆಫ್ ಸೆನ್ಸಸ್, **ಆಪರೇಷನ್,** ಡಿಸ್ಟ್ರಿಕ್ಟ್ ಸೆನ್ಸಸ್ ಹ್ಯಾಂಡ್‌ಬುಕ್ ಚಿತ್ರದುರ್ಗಡಿಸ್ಟ್ರಿಕ್ಟ್, ಬೆಂಗಳೂರು, ಗವರ್ನಮೆಂಟ್ ಆಫ್ ಕರ್ನಾಟಕ, 2005.
2. ಕಾಮತ್ ಸೂರ್ಯನಾಥ್, **ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ–2,** ಬೆಂಗಳ್ರರು, ಕರ್ನಾಟಕ ರಾಜ್ಯ ಸರ್ಕಾರ, ಲೋಟಸ್, ಪು.539
3. ಡೈರೆಕ್ಟರ್ ಆಫ್ ಸೆನ್ಸಸ್, **ಆಪರೇಷನ್,** ಡಿಸ್ಟ್ರಿಕ್ಟ್ ಸೆನ್ಸಸ್ ಹ್ಯಾಂಡ್‌ಬುಕ್ ಚಿತ್ರದುರ್ಗ ಡಿಸ್ಟ್ರಿಕ್ಟ್, ಬೆಂಗಳೂರು, ಗವರ್ನಮೆಂಟ್ ಆಫ್ ಕರ್ನಾಟಕ, 2005.
4. ಡೈರೆಕ್ಟರ್ ಆಫ್ ಸೆನ್ಸಸ್, **ಆಪರೇಷನ್,** ಡಿಸ್ಟ್ರಿಕ್ಟ್ ಸೆನ್ಸಸ್ ಹ್ಯಾಂಡ್‌ಬುಕ್ ಚಿತ್ರದುರ್ಗ ಡಿಸ್ಟ್ರಿಕ್ಟ್, ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ, ಚಿತ್ರದುರ್ಗ 2011–12.
5. **ಜಿಲ್ಲಾ ಪಂಚಾಯತಿಗಳ ದಾಖಲೆಗಳು,** ಜಿಲ್ಲಾ ಪಂಚಾಯತಿ ಕಾರ್ಯಾಲಯ, ಚಿತ್ರದುರ್ಗ, 2010–11.
6. **ತಾಲ್ಲೂಕು ಪಂಚಾಯತಿಗಳ ದಾಖಲೆಗಳು,** ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಚಿತ್ರದುರ್ಗ, 2010–11.
7. **ತಾಲ್ಲೂಕು ಪಂಚಾಯತಿಗಳ ದಾಖಲೆಗಳು,** ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಹಿರಿಯೂರು, 2010–11
8. **ತಾಲ್ಲೂಕು ಪಂಚಾಯತಿಗಳ ದಾಖಲೆಗಳು,** ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಮೊಳಕಾಲ್ಮೂರು, 2010–11.
9. **ಗ್ರಾಮ ಪಂಚಾಯತಿಗಳ ದಾಖಲೆಗಳು, ಗ್ರಾಮ** ಪಂಚಾಯತಿ ಕಾರ್ಯಾಲಯ, ಮದಕರಿಪುರ, 2010–11.
10. ಪೂರ್ವೋಕ್ತ, ಮದಕರಿಪುರ ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.
11. ಪೂರ್ವೋಕ್ತ, ಮದಕರಿಪುರ ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.
12. ಪೂರ್ವೋಕ್ತ, ಮದಕರಿಪುರ ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.
13. **ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯಿತಿ ಕಾರ್ಯಾಲಯ, ಮಠದ ಕುರುಬರಹಟ್ಟಿ, 2010–11.
14. ಪೂರ್ವೋಕ್ತ, ಮಠದ ಕುರುಬರಹಟ್ಟಿ ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.
15. ಪೂರ್ವೋಕ್ತ, ಮಠದ ಕುರುಬರಹಟ್ಟಿ ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.
16. ಪೂರ್ವೋಕ್ತ, ಮಠದ ಕುರುಬರಹಟ್ಟಿ ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

17. ಪೂರ್ವೋಕ್ತ, ಮಠದ ಕುರುಬರಹಟ್ಟಿ ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

18. ಪೂರ್ವೋಕ್ತ, ಮಠದ ಕುರುಬರಹಟ್ಟಿ ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

19. **ಗ್ರಾಮ ಪಂಚಾಯಿತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಬಬ್ಬೂರು, 2010–11.

20. ಪೂರ್ವೋಕ್ತ, ಬಬ್ಬೂರು ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

21. ಪೂರ್ವೋಕ್ತ, ಬಬ್ಬೂರು ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

22. ಪೂರ್ವೋಕ್ತ, ಬಬ್ಬೂರು ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

23. ಪೂರ್ವೋಕ್ತ, ಬಬ್ಬೂರು ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

24. ಪೂರ್ವೋಕ್ತ, ಬಬ್ಬೂರು ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

25. ಪೂರ್ವೋಕ್ತ, ಬಬ್ಬೂರು ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

26. **ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಗೌಡನಹಳ್ಳಿ, 2010–11.

27. ಪೂರ್ವೋಕ್ತ, ಗೌಡನಹಳ್ಳಿ, ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

28. ಪೂರ್ವೋಕ್ತ, ಗೌಡನಹಳ್ಳಿ, ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

29. ಪೂರ್ವೋಕ್ತ, ಗೌಡನಹಳ್ಳಿ, ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

30. ಪೂರ್ವೋಕ್ತ, ಗೌಡನಹಳ್ಳಿ, ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

31. ಪೂರ್ವೋಕ್ತ, ಗೌಡನಹಳ್ಳಿ, ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

32. ಪೂರ್ವೋಕ್ತ, ಗೌಡನಹಳ್ಳಿ, ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

33. **ಗ್ರಾಮ ಪಂಚಾಯಿತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಹಾನಗಲ್–2010–11.

34. ಪೂರ್ವೋಕ್ತ, ಹಾನಗಲ್, ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

35. ಪೂರ್ವೋಕ್ತ, ಹಾನಗಲ್, ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

36. ಪೂರ್ವೋಕ್ತ, ಹಾನಗಲ್, ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

37. ಪೂರ್ವೋಕ್ತ, ಹಾನಗಲ್, ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

38. ಪೂರ್ವೋಕ್ತ, ಹಾನಗಲ್, ಗ್ರಾಮ ಪಂಚಾಯಿತಿ ಕಾರ್ಯಾಲಯ, 2010–11.

39. ಪೂರ್ವೋಕ್ತ, ಹಾನಗಲ್, ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

40. **ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ರಾಯಪುರ, 2010–11.

41. ಪೂರ್ವೋಕ್ತ, ರಾಯಪುರ, ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

42. ಪೂರ್ವೋಕ್ತ, ರಾಯಪುರ, ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

43. ಪೂರ್ವೋಕ್ತ, ರಾಯಪುರ, ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

44. ಪೂರ್ವೋಕ್ತ, ರಾಯಪುರ, ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

45. ಪೂರ್ವೋಕ್ತ, ರಾಯಪುರ, ಗ್ರಾಮ ಪಂಚಾಯತಿ ಕಾರ್ಯಾಲಯ, 2010–11.

## ಕೋಷ್ಟಕ-3.1

### ಅಧ್ಯಯನಕ್ಕೆ ಒಳಪಡಿಸಿದ ಜಿಲ್ಲೆ, ತಾಲ್ಲೂಕು ಮತ್ತು ಗ್ರಾಮ ಪಂಚಾಯಿತಿಗಳ ವಿವರ

| ಜಿಲ್ಲೆ | ಚಿತ್ರದುರ್ಗ ಜಿಲ್ಲೆ | | | | | |
|---|---|---|---|---|---|---|
| ತಾಲ್ಲೂಕು | ಅಭಿವೃದ್ಧಿ ಹೊಂದಿದ ತಾಲ್ಲೂಕು | | ಅಭಿವೃದ್ಧಿ ಹೊಂದುತ್ತಿರುವ ತಾಲ್ಲೂಕು | | ಹಿಂದುಳಿದ ತಾಲ್ಲೂಕು | |
| | ಚಿತ್ರದುರ್ಗ | | ಹಿರಿಯೂರು | | ಮೊಳಕಾಲ್ಮೂರು | |
| ಗ್ರಾಮ ಪಂಚಾಯಿತಿಗಳು | ಕುರುಬರ ಹಟ್ಟಿ | ಮದಕರಿ ಪುರ | ಬಬ್ಬೂರು | ಗೌಡನ ಹಳ್ಳಿ | ಹಾನಗಲ್ | ರಾಯಪುರ |
| | ಎಂ.ಕೆ. ಹಟ್ಟಿ<br>ಮಲ್ಲನಕಟ್ಟೆ<br>ಸೀಬಾರ<br>ಗುತ್ತಿನಾಡು | ಪಿಳ್ಳೆಕೆರೆನಹಳ್ಳಿ | ಬಬ್ಬೂರು ಫಾರಂ<br>ಮ್ಯಾಕ್ಲೂರ ಹಳ್ಳಿ<br>ಬಾಲದೇವರ ಹಟ್ಟಿ<br>ಹೊಸಹಟ್ಟಿ<br>ಚಿನ್ನಯ್ಯನ ಹಟ್ಟಿ | ಕೆರೆಕೋಡಿ ಹಟ್ಟಿ<br>ರಂಗಾಪುರ<br>ಮಾಳಗೊಂಡಹಳ್ಳಿ<br>ಗಾಂಧಿನಗರ<br>ಬಗ್ಗನಡು<br>ಚಳ್ಳಮಡು<br>ಭೂತನ ಹಟ್ಟಿ | ಬೊಮ್ಮಲಿಂಗನಹಳ್ಳಿ<br>ಪೂಜಾರಹಟ್ಟಿ<br>ಕಾಟನಾಯಕಹಳ್ಳಿ<br>ಮೇಗಳಹಟ್ಟಿ<br>ಕೇಳಗಳಹಟ್ಟಿ<br>ಸೂಲೇನಹಳ್ಳಿ<br>ಕೊಮ್ಮನ ಪಟ್ಟಿ<br>ಹಳೇಕೆರೆ<br>ದೇವರಗುಡ್ಡ | ಮ್ಯಾಸರಹಟ್ಟಿ<br>ಯರ್‍ರೇನಹಳ್ಳಿ<br>ಸಿದ್ದಯ್ಯನ ಕೋಟೆ<br>ವೈ.ಪಿ. ಜೋಗಿಹಳ್ಳಿ<br>ಮಠದಜೋಗಿಹಳ್ಳಿ<br>ತುಪ್ಪದಕ್ಕೆನಹಳ್ಳಿ<br>ಐನಹಳ್ಳಿ<br>ಯರ್ಜೆನಹಳ್ಳಿ |
| ಒಟ್ಟು ಗ್ರಾಮಗಳು | 05 | 02 | 06 | 08 | 10 | 09 |

ಮೂಲ: ಕ್ಷೇತ್ರಕಾರ್ಯಕ್ಕೆ ಆಯ್ಕೆಮಾಡಿಕೊಂಡ ಜಿಲ್ಲಾ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಮತ್ತು ಗ್ರಾಮಪಂಚಾಯಿತಿಗಳ ಗ್ರಾಮವಾರು ವಿವರ 2004-2009

**ಕೋಷ್ಟಕ–3.2**

**ಚಿತ್ರದುರ್ಗ ಜಿಲ್ಲೆಯ ತಾಲ್ಲೂಕುವಾರು ವಿಸ್ತೀರ್ಣ ಮತ್ತು ಜನಸಂಖ್ಯೆ–2001**

| ಕ್ರ.ಸಂ | ತಾಲ್ಲೂಕು | ವಿಸ್ತೀರ್ಣ | ಜನಸಂಖ್ಯೆ–2001 | | | | | | |
|---|---|---|---|---|---|---|---|---|---|
| | | | ಪುರುಷರು | ಮಹಿಳೆಯರು | ಒಟ್ಟು | ಗ್ರಾಮೀಣ | ನಗರ | ಜನಸಾಂದ್ರತೆ | ಲಿಂಗಾನುಪಾತ |
| 1 | ಚಳ್ಳಕೆರೆ | 2063.93 | 170337 | 162381 | 332718 | 283651 | 49067 | 165 | 953 |
| 2 | ಚಿತ್ರದುರ್ಗ | 1375.72 | 193371 | 183135 | 376506 | 251336 | 125170 | 277 | 947 |
| 3 | ಹಿರಿಯೂರು | 1701.4 | 135178 | 129541 | 264719 | 215913 | 48806 | 156 | 958 |
| 4 | ಹೊಳಲ್ಕೆರೆ | 1094.84 | 100809 | 96957 | 197766 | 183192 | 14547 | 182 | 962 |
| 5 | ಹೊಸದುರ್ಗ | 1416.4 | 111339 | 108106 | 219445 | 196957 | 22488 | 166 | 971 |
| 6 | ಮೊಳಕಾಲ್ಮೂರು | 736.49 | 65187 | 61555 | 126742 | 112609 | 14133 | 172 | 944 |
| 7 | ಒಟ್ಟು | 8388.78 | 776221 | 741675 | 1517896 | 1243658 | 274238 | 180 | 955 |

*ಮೂಲ : ಡೈರೆಕ್ಟರ್ ಆಫ್ ಸೆನ್ಸಸ್, ಆಪರೇಷನ್, ಡಿಸ್ಟ್ರಿಕ್ಟ್ ಸೆನ್ಸಸ್ ಹ್ಯಾಂಡ್‌ಬುಕ್ ಚಿತ್ರದುರ್ಗ ಡಿಸ್ಟ್ರಿಕ್ಟ್, ಬೆಂಗಳೂರು: ಗವರ್ನಮೆಂಟ್ ಆಫ್ ಕರ್ನಾಟಕ–2005*

**ಕೋಷ್ಟಕ–3.3**

**ಗ್ರಾಮ ಪಂಚಾಯಿತಿವಾರು ಜಾತಿವಾರು ಮತ್ತು ಲಿಂಗವಾರು ಜನಸಂಖ್ಯೆಯ ವಿವರ**

| ಕ್ರ. ಸ. | ಗ್ರಾಮ ಪಂಚಾಯಿತಿಗಳ ಹೆಸರು | ಜನಸಂಖ್ಯೆ | | | | | | | | | ಒಟ್ಟು | | |
|---|---|---|---|---|---|---|---|---|---|---|---|---|---|
| | | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಇತರರು | | | | | |
| | | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು |
| 01 | ಬಬ್ಬೂರು | 1311 | 1157 | 2468 | 184 | 150 | 334 | 3625 | 3337 | 6962 | 5120 | 4644 | 9764 |
| | | 13.42 | 11.84 | 25.3 | 1.88 | 1.53 | 3.42 | 37.12 | 34.8 | 71.3 | 52.43 | 47.6 | 100 |
| 02 | ಗೌಡನಹಳ್ಳಿ | 978 | 836 | 1813 | 852 | 774 | 1626 | 1982 | 1113 | 3095 | 3812 | 2722 | 6534 |
| | | 14.96 | 12.79 | 27.74 | 13.04 | 11.84 | 24.88 | 30.33 | 17.03 | 47.36 | 58.34 | 41.65 | 100 |
| 03 | ಹಾನಗಲ್ | 520 | 440 | 990 | 1965 | 1123 | 3088 | 1660 | 1281 | 2941 | 4145 | 2844 | 6989 |
| | | 7.44 | 6.29 | 14.16 | 28.11 | 16.06 | 44.18 | 23.75 | 18.35 | 42.02 | 59.30 | 40.69 | 100 |
| 04 | ರಾಯಪುರ | 1300 | 1074 | 2374 | 2174 | 2076 | 4150 | 650 | 424 | 1074 | 4124 | 3474 | 7598 |
| | | 17.10 | 14.13 | 31.24 | 28.61 | 27.32 | 54.61 | 8.55 | 5.58 | 14.13 | 54.27 | 45.72 | 100 |
| 05 | ಮದಕರಿಪುರ | 1227 | 1114 | 2341 | 895 | 795 | 1690 | 2469 | 2198 | 4667 | 4591 | 4107 | 8698 |
| | | 14.10 | 12.80 | 26.91 | 10.05 | 9.14 | 19.42 | 28.38 | 25.27 | 53.65 | 52.78 | 47.21 | 100 |
| 06 | ಮಠದ ಕುರಬರಹಟ್ಟಿ | 808 | 814 | 1622 | 434 | 418 | 852 | 3120 | 2034 | 5424 | 4362 | 3536 | 7898 |
| | | 10.23 | 10.30 | 20.53 | 5.49 | 5.29 | 10.78 | 39.50 | 25.75 | 68.67 | 55.22 | 44.77 | 100 |

ಮೂಲ: ಆಯಾ ಗ್ರಾಮ ಪಂಚಾಯಿತಿಗಳ ದಾಖಲೆಗಳು, ಗ್ರಾಮಪಂಚಾಯಿತಿ ಕಾರ್ಯಾಲಯ, 2010–11

ಕೋಷ್ಟಕ 3.4

ಗ್ರಾಮ ಪಂಚಾಯತಿವಾರು ಬಿಪಿಎಲ್ ಮತ್ತು ಎಪಿಎಲ್ ಕುಟುಂಬಗಳ ವಿವರ

| ಕ್ರ.ಸ. | ಗ್ರಾಮ ಪಂಚಾಯಿತಿಗಳ ಹೆಸರು | ಕುಟುಂಬಗಳ ವಿವರ | | |
|---|---|---|---|---|
| | | ಬಿಪಿಎಲ್ | ಎಪಿಎಲ್ | ಒಟ್ಟು |
| 01 | ಬಬ್ಬೂರು | 1377 | 358 | 1735 |
| | | 79.36 | 20.64 | 100 |
| 02 | ಗೌಡನಹಳ್ಳಿ | 1053 | 354 | 1407 |
| | | 74.86 | 25.15 | 100 |
| 03 | ಹಾನಗಲ್ | 1389 | 49 | 1438 |
| | | 96.59 | 3.41 | 100 |
| 04 | ರಾಯಪುರ | 1235 | 151 | 1386 |
| | | 89.10 | 10.90 | 100 |
| 05 | ಮದಕರಿಪುರ | 1425 | 294 | 1719 |
| | | 82.89 | 17.11 | 100 |
| 06 | ಮಠದ ಕುರುಬರಹಟ್ಟಿ | 1220 | 312 | 1532 |
| | | 79.63 | 20.37 | 100 |

**ಮೂಲ:** ಆಯಾ ಗ್ರಾಮ ಪಂಚಾಯಿತಿಗಳ ದಾಖಲೆಗಳು, ಗ್ರಾಮಪಂಚಾಯಿತಿ ಕಾರ್ಯಾಲಯಗಳು:2010-11

**ಕೋಷ್ಟಕ-3.5**

**ಗ್ರಾಮ ಪಂಚಾಯಿತಿ, ತಾಲೂಕು ಮತ್ತು ಜಿಲ್ಲಾ ಪಂಚಾಯತಿವಾರು ಮತ್ತು ಜಾತಿವಾರು ಸದಸ್ಯರ ವಿವರ**

| ಕ್ರ.ಸಂ | ಗ್ರಾಮಪಂಚಾಯಿತಿ | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಹಿಂದುಳಿದ ವರ್ಗ | | | ಇತರರು | | | ಒಟ್ಟು | | |
|---|---|---|---|---|---|---|---|---|---|---|---|---|---|---|---|---|
| | ಹೆಸರು | ಪು | ಮ | ಒ | ಪು | ಮ | ಒ | ಪು | ಮ | ಒ | ಪು | ಮ | ಒ | ಪು | ಮ | ಒ |
| 01 | ಬಬ್ಬೂರು | 3 | 2 | 5 | 0 | 1 | 1 | 3 | 3 | 6 | 2 | 1 | 4 | 8 | 7 | 15 |
| | | 20.00 | 13.3 | 33.33 | | 6.6 | 6.6 | 20.00 | 20.00 | 40.00 | 13.3 | 6.6 | 26.6 | 53.3 | 46.66 | 100 |
| 02 | ಗೌಡನಹಳ್ಳಿ | 3 | 3 | 6 | 2 | 2 | 4 | 2 | 1 | 3 | 1 | 1 | 2 | 8 | 7 | 15 |
| | | 20.00 | 20.00 | 40.00 | 13.3 | 13.3 | 26.6 | 13.3 | 6.6 | 20.00 | 6.6 | 6.6 | 13.3 | 53.3 | 46.66 | 100 |
| 03 | ಹಾನಗಲ್ | 1 | 1 | 2 | 6 | 3 | 9 | 3 | 2 | 5 | 0 | 0 | 0 | 8 | 8 | 16 |
| | | 6.2 | 6.2 | 12.5 | 37.5 | 18.75 | 56.25 | 18.75 | 12.5 | 31.25 | | | | 50.00 | 50.00 | 100 |
| 04 | ರಾಯಪುರ | 2 | 2 | 4 | 6 | 3 | 9 | 2 | 1 | 3 | 0 | 0 | 0 | 50.00 | 50.00 | 100 |
| | | 12.5 | 12.5 | 25.00 | 37.5 | 18.75 | 56.25 | 12.5 | 6.25 | 18.75 | | | | 50.00 | 50.00 | 100 |
| 05 | ಮದಕರಿಪುರ | 2 | 3 | 5 | 1 | 1 | 2 | 3 | 2 | 5 | 2 | 1 | 3 | 8 | 7 | 15 |
| | | 13.3 | 20.00 | 33.33 | 6.6 | 6.6 | 13.3 | 20.00 | 13.3 | 33.33 | 13.3 | 6.6 | 20.00 | 53.3 | 46.66 | 100 |
| 06 | ಎಂ.ಕೆ.ಹಟ್ಟಿ | 2 | 2 | 4 | 1 | 2 | 3 | 4 | 3 | 7 | 4 | 2 | 6 | 11 | 9 | 20 |
| | | 10.0 | 10.0 | 20.0 | 5.0 | 10.0 | 15.0 | 20.0 | 15.0 | 35.0 | 20.0 | 10.0 | 30.0 | 55.0 | 45.0 | 100 |

| ಕ್ರ.ಸಂ | ಗ್ರಾಮಪಂಚಾಯಿತಿ | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಹಿಂದುಳಿದ ವರ್ಗ | | | ಇತರರು | | | ಒಟ್ಟು | | |
|---|---|---|---|---|---|---|---|---|---|---|---|---|---|---|---|---|
| | ಹೆಸರು | ಪು | ಮ | ಒ | ಪು | ಮ | ಒ | ಪು | ಮ | ಒ | ಪು | ಮ | ಒ | ಪು | ಮ | ಒ |
| 07 | ಚಿತ್ರದುರ್ಗ | 4 | 3 | 7 | 3 | 2 | 5 | 6 | 3 | 9 | 4 | 2 | 6 | 17 | 10 | 27 |
| | ತಾಲೂಕು | 14.81 | 11.11 | 25.92 | 11.11 | 7.40 | 18.51 | 22.22 | 11.11 | 33.33 | 14.81 | 7.4 | 22.22 | 63.46 | 37.03 | 100 |
| 08 | ಹಿರಿಯೂರು | 4 | 2 | 6 | 1 | 2 | 3 | 8 | 5 | 13 | 0 | 0 | 0 | 13 | 9 | 22 |
| | ತಾಲೂಕು | 18.18 | 9.09 | 27.27 | 4.54 | 9.09 | 13.63 | 36.36 | 22.72 | 59.09 | | | | 59.09 | 40.09 | 100 |
| 09 | ಮೊಳಕಾಲ್ಮೂರು | 1 | 1 | 2 | 3 | 3 | 6 | 2 | 2 | 4 | 0 | 0 | 0 | 6 | 6 | 12 |
| | ತಾಲೂಕು | 8.33 | 8.33 | 16.66 | 25.00 | 25.00 | 50.00 | 16.00 | 16.00 | 33.33 | | | | 50.00 | 50.00 | 100 |
| 10. | ಚಿತ್ರದುರ್ಗ ಜಿಲ್ಲೆ | 5 | 3 | 8 | 5 | 2 | 7 | 10 | 4 | 14 | 2 | 3 | 5 | 22 | 12 | 34 |
| | | 14.70 | 8.82 | 23.52 | 14.70 | 5.88 | 20.58 | 29.41 | 11.76 | 41.17 | 5.88 | 8.82 | 14.70 | 64.70 | 35.30 | 1000 |

ಮೂಲ: ಆಯಾ ಗ್ರಾಮಪಂಚಾಯಿತಿ, ತಾಲೂಕು ಮತ್ತು ಜಿಲ್ಲಾ ಪಂಚಾಯತಿವಾರು ದಾಖಲೆಗಳು ಗ್ರಾಮಪಂಚಾಯಿತಿ ಕಾರ್ಯಾಲಯಗಳು:2010–11

# ಅಧ್ಯಾಯ ನಾಲ್ಕು

## ಜಿಲ್ಲಾ, ತಾಲ್ಲೂಕು ಹಾಗೂ ಗ್ರಾಮ ಪಂಚಾಯತಿಗಳ ಸ್ಥಾಯಿ ಸಮಿತಿಗಳ ಕಾರ್ಯಕ್ಷಮತೆ

ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿಗಳ ಕಾರ್ಯಕ್ಷಮತೆಯನ್ನು ಅಳೆಯುವ ಮುಖ್ಯ ಉದ್ದೇಶವನ್ನು ಈ ಅಧ್ಯಯನ ಹೊಂದಿದೆ. ಕಾರ್ಯಕ್ಷಮತೆಯನ್ನು ಗುರುತಿಸಲು ಗ್ರಾಮ ಪಂಚಾಯತಿ ಸ್ಥಾಯಿಸಮಿತಿಗಳ ನಿರ್ವಹಿಸುವ ಮುಖ್ಯ ಕಾರ್ಯಗಳನ್ನು ಕೂಲಂಕಷವಾಗಿ ಪರೀಕ್ಷಿಸಬೇಕಾಗಿದೆ. ನೀರು ಪೂರೈಕೆ, ಗ್ರಾಮೀಣ ನೈರ್ಮಲೀಕರಣ, ವಸತಿ, ಉದ್ಯೋಗ ಭರವಸೆ, ಯೋಜನೆ, ಸಾಮಾಜಿಕ ನ್ಯಾಯದಂತಹ ವಿಷಯಗಳು ಮತ್ತು ಶಿಕ್ಷಣ ಇವೆಲ್ಲವೂ ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿಗಳು ನಿರ್ವಹಿಸುವ ಮುಖ್ಯ ಕಾರ್ಯಗಳಾಗಿವೆ. ಈ ಕಾರ್ಯಕ್ರಮಗಳನ್ನು ವಿಶ್ಲೇಷಿಸುವ ಮೂಲಕ ಪಂಚಾಯತಿಯ ಕಾರ್ಯಕ್ಷಮತೆಯನ್ನು ಅಳೆಯುವ ಪ್ರಯತ್ನ ಮಾಡಲಾಗಿದೆ. ಈ ಮೂಲಭೂತ ಸೌಲಭ್ಯಗಳ ಪೂರೈಕೆ ಇಂದು ಸ್ಥಾಯಿಸಮಿತಿಗಳ ಮೂಲಕ ಹೇಗೆ ಪೂರೈಕೆಯಾಗುತ್ತದೆ ಎಂಬುದನ್ನು ಸ್ಥಾಯಿಸಮಿತಿ ಸದಸ್ಯರಿಂದ, ಗ್ರಾಮದ ಜನತೆಯನ್ನು ಸಂದರ್ಶಿಸುವುದರ ಮೂಲಕ ವಿಷಯವನ್ನು ಸಂಗ್ರಹಿಸಿ ಪ್ರಸ್ತುತ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಈ ಅಧ್ಯಾಯದಲ್ಲಿ ಅಂತಹ ಚರ್ಚೆಯನ್ನು ಸಂಕ್ಷಿಪ್ತವಾಗಿ ಪುನರುಚ್ಚರಿಸಿ ಮುಂದುವರಿಯಲಾಗಿದೆ. ಅಧ್ಯಾಯದ ಮುಖ್ಯಭಾಗ ಮೂಲಭೂತ ಸವಲತ್ತುಗಳನ್ನು ಗ್ರಾಮ ಪಂಚಾಯತಿಯು ತಳಮಟ್ಟದಲ್ಲಿ ಸ್ಥಾಯಿಸಮಿತಿಗಳ ಕಾರ್ಯಕ್ಷಮತೆಯ ಮೂಲಕ ಹೇಗೆ ಪೂರೈಸಿದೆ ಎನ್ನುವುದರ ಸುತ್ತಮುತ್ತ ಇದೆ. ಈ ಅಧ್ಯಾಯದಲ್ಲಿ ಸ್ಥಾಯಿಸಮಿತಿಗಳ ಸದಸ್ಯರ ಸಾಮಾಜಿಕ, ಆರ್ಥಿಕ, ರಾಜಕೀಯ ಹಿನ್ನಲೆ ಮತ್ತು ಸ್ಥಾಯಿಸಮಿತಿಗಳ ಕಾರ್ಯಕ್ಷಮತೆಯು ಜಿಲ್ಲಾ ಪಂಚಾಯತ್, ತಾಲ್ಲೂಕು ಪಂಚಾಯತ್, ಗ್ರಾಮ ಪಂಚಾಯತ್‌ಗಳಲ್ಲಿ ಹೇಗೆ ಕಾರ್ಯ ನಿರ್ವಹಿಸಿದೆ ಎಂಬುದನ್ನು ಚರ್ಚಿಸಲಾಗಿದೆ. ವಿಶೇಷವಾಗಿ ಗ್ರಾಮ ಪಂಚಾಯತಿಗಳ ಸ್ಥಾಯಿ ಸಮಿತಿಗಳು ಯಾವ ರೀತಿ ಕ್ರಮ ಕೈಗೊಂಡಿವೆ ಎಂಬುದನ್ನು ಅಂಕಿ ಅಂಶಗಳ ಮೂಲಕ ವಿಶ್ಲೇಷಣೆ ಮಾಡಲಾಗಿದೆ.

ಚಿತ್ರದುರ್ಗ ಜಿಲ್ಲಾ ಪಂಚಾಯತಿಯ ಸ್ಥಾಯಿಸಮಿತಿಯಲ್ಲಿರುವ ಸದಸ್ಯರ ಜಾತಿವಾರು ವಿವರಗಳನ್ನು ನೋಡಿದಾಗ ಒಟ್ಟು 33 ಸ್ಥಾಯಿಸಮಿತಿಯ ಸದಸ್ಯರಲ್ಲಿ ಪುರುಷರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. 22(66.66%) ಪುರುಷ ಸದಸ್ಯರು ಹಾಗೂ 11(33.33%) ಮಹಿಳಾ ಸದಸ್ಯರು ಇರುವುದನ್ನು ಇಲ್ಲಿ ಕಾಣಬಹುದು.

ಜಿಲ್ಲಾ ಪಂಚಾಯತಿ ಸ್ಥಾಯಿಸಮಿತಿಯಲ್ಲಿ ಹೆಚ್ಚಾಗಿ ಪರಿಶಿಷ್ಟ ಜಾತಿಗೆ ಸೇರಿದ ಸದಸ್ಯರು ಇದ್ದಾರೆ. ಒಟ್ಟು 33 ಸದಸ್ಯರಲ್ಲಿ ಇವರ ಪ್ರಮಾಣ 8ರಷ್ಟಿದೆ. ಅಂದರೆ ಶೇಕಡ 24.24%ರಷ್ಟು ಪರಿಶಿಷ್ಟ ಜಾತಿಯವರಿದ್ದಾರೆ. ಇವರಲ್ಲಿ ಪುರುಷ ಸದಸ್ಯರು 5(15.15%) ಹಾಗೂ ಮಹಿಳಾ ಸದಸ್ಯರು 3(9.09%) ಇದ್ದಾರೆ. ಹಾಗೆಯೇ ಪರಿಶಿಷ್ಟ ಪಂಗಡದ 7(21.21%) ಸದಸ್ಯರು ಇರುವುದನ್ನು ಕಾಣಬಹುದು. ಇವರಲ್ಲಿ ಪುರುಷ ಸದಸ್ಯರು 5(15.15%) ಹಾಗೂ ಮಹಿಳಾ ಸದಸ್ಯರು 2(6.06%) ಇರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ ಜಿಲ್ಲಾ ಪಂಚಾಯತಿ ಸ್ಥಾಯಿಸಮಿತಿಯ ಒಟ್ಟು ಸದಸ್ಯರಲ್ಲಿ ಹಿಂದುಳಿದ ವರ್ಗಕ್ಕೆ ಸೇರಿದ ಸದಸ್ಯರು ಹೆಚ್ಚಾಗಿರುವುದನ್ನು ಕಾಣುತ್ತೇವೆ. ಒಟ್ಟು 33 ಸದಸ್ಯರಲ್ಲಿ ಹಿಂದುಳಿದ ವರ್ಗಗಳ ಸದಸ್ಯರ ಸಂಖ್ಯೆ 12(36.36%)ರಷ್ಟಿದೆ. ಇವರಲ್ಲಿ 7(21.21%) ಪುರುಷ ಸದಸ್ಯರು ಹಾಗೂ 5(15.15%) ಮಹಿಳಾ ಸದಸ್ಯರು ಇರುವುದನ್ನು ಕಾಣುತ್ತೇವೆ. ಹಾಗೆಯೇ ಸಾಮಾನ್ಯ ವರ್ಗಕ್ಕೆ ಸೇರಿದ ಸದಸ್ಯರ ಸಂಖ್ಯೆ 6(18.18%)ರಷ್ಟಿದೆ. ಇವರಲ್ಲಿ 4(12.12%) ಪುರುಷ ಸದಸ್ಯರು ಹಾಗೂ 2(6.06%) ಮಹಿಳಾ ಸದಸ್ಯರು ಇರುವುದನ್ನು ಕಾಣುತ್ತೇವೆ.[1]

ಒಟ್ಟಾರೆಯಾಗಿ ಚಿತ್ರದುರ್ಗ ಜಿಲ್ಲಾ ಪಂಚಾಯತಿಯ ಸ್ಥಾಯಿಸಮಿತಿಯ ಸದಸ್ಯರ ಜಾತಿವಾರು ವಿವರಗಳನ್ನು ನೋಡಿದಾಗ ಹಿಂದುಳಿದ ವರ್ಗದ 12(36.36%) ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಹಾಗೆಯೇ ಇಡೀ ಜಿಲ್ಲಾ ಪಂಚಾಯತಿಯಲ್ಲಿ ಎಲ್ಲಾ ಜಾತಿಯ ಜನಸಂಖ್ಯೆಗೆ ಅನುಗುಣವಾಗಿ ಸಮಾನ ಸ್ಥಾನಮಾನಗಳನ್ನು ನೀಡಲಾಗಿದೆ ಎಂದು ಈ ಮೇಲಿನ ಅಂಕಿ ಅಂಶಗಳಿಂದ ತಿಳಿಯಬಹುದಾಗಿದೆ. ಚಿತ್ರದುರ್ಗ ಜಿಲ್ಲೆಯ ಜಿಲ್ಲಾ ಪಂಚಾಯತಿ ವ್ಯಾಪ್ತಿಯ ಗ್ರಾಮ ಪಂಚಾಯತಿ ವಾರು ಸಂದರ್ಶನ ಮಾಡಿದ ಗ್ರಾಮಸ್ಥರ ಜಾತಿವಾರು ವಿವರಗಳನ್ನು ಕೆಳಗಿನಂತೆ ಕಾಣಬಹುದಾಗಿದೆ.

ಬಬ್ಬೂರು ಗ್ರಾಮ ಪಂಚಾಯತಿಯ 50 ಗ್ರಾಮಸ್ಥರನ್ನು ಸಂದರ್ಶನ ಮಾಡಿದಾಗ 26(52%) ಪುರುಷರು ಹಾಗೂ 24(48%) ಮಹಿಳಾ ಗ್ರಾಮಸ್ಥರನ್ನು ಜಾತಿವಾರು ಗಣನೆಗೆ ತೆಗೆದುಕೊಂಡಾಗ ಪರಿಶಿಷ್ಟ ಜಾತಿಯ ಒಟ್ಟು 12(24%) ಗ್ರಾಮಸ್ಥರು ಇದ್ದರು. ಅದರಲ್ಲಿ 4(8%) ಪುರುಷ ಗ್ರಾಮಸ್ಥರು ಹಾಗೂ 8(16%) ಮಹಿಳಾ ಗ್ರಾಮಸ್ಥರಾಗಿದ್ದರು. ಅದೇ ರೀತಿಯಲ್ಲಿ ಪರಿಶಿಷ್ಟ ಪಂಗಡದ ಒಟ್ಟು 14(28%) ಗ್ರಾಮಸ್ಥರನ್ನು ಸಂದರ್ಶನ ಮಾಡಲಾಯಿತು. ಅವರಲ್ಲಿ 8(16) ಪುರುಷರು ಹಾಗೂ 6(12%) ಮಹಿಳಾ ಗ್ರಾಮಸ್ಥರು ಇದ್ದರು. ಅದೇ ರೀತಿಯಾಗಿ 16(32%) ಹಿಂದುಳಿದ ವರ್ಗದ

ಗ್ರಾಮಸ್ಥರನ್ನು ಸಂದರ್ಶನ ಮಾಡಲಾಯಿತು. ಅವರಲ್ಲಿ 9(18%) ಪುರುಷರು ಹಾಗೂ 7(14%) ಮಹಿಳಾ ಗ್ರಾಮಸ್ಥರು ಇದ್ದರು. ಹಾಗೆಯೇ ಸಾಮಾನ್ಯ ವರ್ಗದ ಒಟ್ಟು 8(16%) ಗ್ರಾಮಸ್ಥರಲ್ಲಿ 5(10%) ಪುರುಷರು ಹಾಗೂ 3(6%) ಮಹಿಳಾ ಗ್ರಾಮಸ್ಥರನ್ನು ಸಂದರ್ಶನಕ್ಕೆ ಒಳಪಡಿಸಲಾಯಿತು.[2]

ಒಟ್ಟಾರೆಯಾಗಿ ಬಬ್ಬೂರು ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಹಿಂದುಳಿದ ವರ್ಗದ ಜನರು ಹೆಚ್ಚಾಗಿ ಇರುವುದನ್ನು ಕಾಣತ್ತೇವೆ. ಅದೇ ರೀತಿಯಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಗ್ರಾಮಸ್ಥರು ಸಹ ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ.

ಗೌಡನಹಳ್ಳಿ ಗ್ರಾಮ ಪಂಚಾಯತಿಯ 50 ಗ್ರಾಮಸ್ಥರನ್ನು ಸಂದರ್ಶನ ಮಾಡಿದಾಗ 27(54%) ಪುರುಷರು ಹಾಗೂ 23(46%) ಮಹಿಳಾ ಗ್ರಾಮಸ್ಥರನ್ನು ಕಾಣಬಹುದು. ಇವರಲ್ಲಿ ಜಾತಿವಾರು ಗಣನೆಗೆ ತೆಗೆದುಕೊಂಡಾಗ, ಪರಿಶಿಷ್ಟ ಜಾತಿಯ 20(40%) ಗ್ರಾಮಸ್ಥರನ್ನು ಸಂದರ್ಶನಕ್ಕೆ ಒಳಪಡಿಸಿದಾಗ ಇವರಲ್ಲಿ 10(20%) ಪರುಷರು ಹಾಗೂ 10(20%) ಮಹಿಳಾ ಗ್ರಾಮಸ್ಥರು ಇದ್ದರು. ಹಾಗೆಯೇ ಪರಿಶಿಷ್ಟ ಪಂಗಡದ 14(28%) ಒಟ್ಟು ಗ್ರಾಮಸ್ಥರಲ್ಲಿ 8(16%) ಪರುಷರು ಹಾಗೂ 6(12%) ಮಹಿಳಾ ಗ್ರಾಮಸ್ಥರನ್ನು ಸಂದರ್ಶನಕ್ಕೆ ಒಳಪಡಿಸಲಾಯಿತು. ಅದೇ ರೀತಿಯಲ್ಲಿ ಹಿಂದುಳಿದ ವರ್ಗದ ಒಟ್ಟು 12(24%) ಸದಸ್ಯರನ್ನು ಸಂದರ್ಶನಕ್ಕೆ ಒಳಪಡಿಸಲಾಯಿತು. ಅವರಲ್ಲಿ 6(12%) ಪುರುಷರು ಹಾಗೂ 6(12%) ಮಹಿಳಾ ಗ್ರಾಮಸ್ಥರನ್ನು ಸಂದರ್ಶಿಸಲಾಯಿತು.[3]

ಅದರಂತೆಯೇ ಸಾಮಾನ್ಯ ವರ್ಗದ ಜನಸಂಖ್ಯೆ ಕಡಿಮೆ ಇರುವ ಈ ಪಂಚಾಯತಿಯಲ್ಲಿ ಕೇವಲ 4(8%) ಗ್ರಾಮಸ್ಥರನ್ನು ಮಾತ್ರ ಸಂದರ್ಶಿಸಲಾಯಿತು. ಅವರಲ್ಲಿ 3(6%) ಪುರುಷರು ಹಾಗೂ 1(2%) ಮಹಿಳೆಯನ್ನು ಸಂದರ್ಶನ ಮಾಡಲಾಯಿತು.

ಒಟ್ಟಾರೆಯಾಗಿ ಈ ಗ್ರಾಮ ಪಂಚಾಯತಿಯನ್ನು ಅವಲೋಕಿಸಿದಾಗ ಹೆಚ್ಚಾಗಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಗ್ರಾಮಸ್ಥರು ಇರುವುದನ್ನು ಕಾಣಬಹುದು. ಈ ಪಂಚಾಯತಿ ವ್ಯಾಪ್ತಿಯಲ್ಲಿ ಹಿಂದುಳಿದ ವರ್ಗದ ಜಾತಿಯವರು ಹಾಗೂ ಸಾಮಾನ್ಯ ವರ್ಗಕ್ಕೆ ಸೇರಿದ ಗ್ರಾಮಸ್ಥರು ಕಡಿಮೆ ಇರುವುದನ್ನು ಕಾಣುತ್ತೇವೆ.

ಹಾನಗಲ್ ಗ್ರಾಮ ಪಂಚಾಯತಿಯ 50 ಗ್ರಾಮಸ್ಥರನ್ನು ಜಾತಿವಾರು ಸಂದರ್ಶನ ಮಾಡಲಾಯಿತು. ಅವರಲ್ಲಿ 31(62%) ಪುರುಷರು ಹಾಗೂ 19(38%) ಮಹಿಳಾ ಗ್ರಾಮಸ್ಥರನ್ನು ಸಂದರ್ಶನ ಮಾಡಲಾಯಿತು. ಇವರಲ್ಲಿ ಪರಿಶಿಷ್ಟ ಜಾತಿಯ 10(20%) ಗ್ರಾಮಸ್ಥರಲ್ಲಿ 7(14%) ಪುರುಷರು ಹಾಗೂ 3(6%) ಮಹಿಳೆಯರನ್ನು ಸಂದರ್ಶಿಸಲಾಯಿತು. ಅದೇ ರೀತಿಯಾಗಿ ಪರಿಶಿಷ್ಟ ಪಂಗಡದ ಒಟ್ಟು 24(48%) ಗ್ರಾಮಸ್ಥರಲ್ಲಿ 14(28%) ಪುರುಷರು ಹಾಗೂ 10(20%) ಮಹಿಳಾ ಗ್ರಾಮಸ್ಥರನ್ನು ಸಂದರ್ಶನ ಮಾಡಲಾಯಿತು. ಹಾಗೆಯೇ ಹಿಂದುಳಿದ ವರ್ಗದ 12(24%)

ಗ್ರಾಮಸ್ಥರಲ್ಲಿ 7(14) ಪುರುಷರು ಹಾಗೂ 5(10%) ಮಹಿಳೆಯರನ್ನು ಸಂದರ್ಶಿಸಲಾಯಿತು. ಅದರಂತೆ ಸಾಮಾನ್ಯ ವರ್ಗದ ಜನಸಂಖ್ಯೆ ಕಡಿಮೆ ಇರುವ ಈ ಪಂಚಾಯತಿ ವ್ಯಾಪ್ತಿಯಲ್ಲಿ ಕೇವಲ 4(8%) ಗ್ರಾಮಸ್ಥರನ್ನು ಸಂದರ್ಶನ ಮಾಡಲಾಯಿತು. ಅದರಲ್ಲಿ 3(6%) ಪುರುಷರು ಹಾಗೂ 1(2%) ಮಹಿಳೆಯನ್ನು ಸಂದರ್ಶಿಸಲಾಯಿತು.[4]

ಒಟ್ಟಾರೆಯಾಗಿ ಗ್ರಾಮಗಳಲ್ಲಿ ಆನುಷಂಗಿಕವಾಗಿ ಸಂದರ್ಶನ ಮಾಡಿ ಸಂಗ್ರಹಿಸಿದ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದರೇ ಹೆಚ್ಚಿನ ಸಂಖ್ಯೆಯಲ್ಲಿ ಇರುವುದು ಸ್ಪಷ್ಟವಾಯಿತು. ಹಿಂದುಳಿದ ವರ್ಗ ಹಾಗೂ ಸಾಮಾನ್ಯ ವರ್ಗದ ಗ್ರಾಮಸ್ಥರು ಈ ಪಂಚಾಯತಿಯಲ್ಲಿ ಕಡಿಮೆ ಪ್ರಮಾಣದಲ್ಲಿರುವುದನ್ನು ಕಾಣುತ್ತೇವೆ.

ರಾಯಪುರ ಗ್ರಾಮ ಪಂಚಾಯತಿಯ ವ್ಯಾಪ್ತಿಯಲ್ಲಿ 50 ಗ್ರಾಮಸ್ಥರನ್ನು ಸಂದರ್ಶನ ಮಾಡಲಾಯಿತು. ಅವರಲ್ಲಿ 29(58%) ಪುರುಷರು ಹಾಗೂ 21(42%) ಮಹಿಳಾ ಗ್ರಾಮಸ್ಥರನ್ನು ಸಂದರ್ಶಿಸಲಾಯಿತು. ಸಂದರ್ಶಿಸಿದ 50 ಗ್ರಾಮಸ್ಥರಲ್ಲಿ ಪರಿಶಿಷ್ಟ ಜಾತಿಗೆ ಸೇರಿದ 10(20%) ಗ್ರಾಮಸ್ಥರನ್ನು ಸಂದರ್ಶನ ಮಾಡಲಾಯಿತು. ಇವರಲ್ಲಿ 4(8%) ಪುರುಷರು ಹಾಗೂ 6(12%) ಮಹಿಳಾ ಗ್ರಾಮಸ್ಥರು ಸಂದರ್ಶನ ಸಮಯದಲ್ಲಿ ತಾವು ಪರಿಶಿಷ್ಟ ಜಾತಿಗೆ ಸೇರಿದವರಾಗಿದ್ದೇವೆ ಎಂದು ಹೇಳಿದ್ದಾರೆ. ಅದೇ ರೀತಿಯಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿದ 18(36%) ಗ್ರಾಮಸ್ಥರನ್ನು ಸಂದರ್ಶಿಸಲಾಯಿತು. ಅವರಲ್ಲಿ 11(22%) ಪುರುಷರು ಹಾಗೂ 7(14) ಮಹಿಳಾ ಗ್ರಾಮಸ್ಥರು ಇದ್ದರು. ಹಾಗೆಯೇ ಹಿಂದುಳಿದ ವರ್ಗಕ್ಕೆ ಸೇರಿದ 12(24%) ಗ್ರಾಮಸ್ಥರನ್ನು ಸಂದರ್ಶನ ಮಾಡಲಾಯಿತು. ಅದೇ ರೀತಿಯಾಗಿ ಸಾಮಾನ್ಯ ವರ್ಗದ 8(16%) ಗ್ರಾಮಸ್ಥರನ್ನು ಸಂದರ್ಶನ ಮಾಡಲಾಯಿತು. ಅವರಲ್ಲಿ 5(10%) ಪುರುಷರು 3(6%) ಮಹಿಳೆಯರು ಇರುವುದು ಸಂದರ್ಶನದ ಸಮಯದಲ್ಲಿ ತಿಳಿದುಬಂದಿತು.[5]

ಒಟ್ಟಾರೆಯಾಗಿ ರಾಯಪುರ ಗ್ರಾಮ ಪಂಚಾಯತಿಯನ್ನು ಅವಲೋಕಿಸಿದಾಗ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಗ್ರಾಮಸ್ಥರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ. ಇವರು ಒಟ್ಟು ಪಂಚಾಯತಿಯ ಅರ್ಧಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ನಂತರದಲ್ಲಿ ಹಿಂದುಳಿದ ವರ್ಗಕ್ಕೆ ಸೇರಿದ ಗ್ರಾಮಸ್ಥರನ್ನು ಈ ಪಂಚಾಯತಿ ವ್ಯಾಪ್ತಿಯಲ್ಲಿ ಕಾಣುತ್ತೇವೆ. ಸಾಮಾನ್ಯ ವರ್ಗಕ್ಕೆ ಸೇರಿದ ಗ್ರಾಮಸ್ಥರ ಸಂಖ್ಯೆ ಕಡಿಮೆ ಇರುವುದು ತಿಳಿದುಬಂದಿದೆ.

ಮದಕರಿಪುರ ಗ್ರಾಮ ಪಂಚಾಯತಿ ವ್ಯಾಪ್ತಿಯ 50 ಗ್ರಾಮಸ್ಥರನ್ನು ಸಂದರ್ಶನ ಮಾಡಲಾಯಿತು. ಅವರಲ್ಲಿ 31(62%) ಪುರುಷರು ಹಾಗೂ 19(38%) ಮಹಿಳಾ ಗ್ರಾಮಸ್ಥರನ್ನು ಸಂದರ್ಶನ ಮಾಡಲಾಯಿತು. ಇವರನ್ನು ತಮ್ಮ ಜಾತಿ ಯಾವುದೆಂದು ಕೇಳಿದಾಗ 20(40%)

ರಷ್ಟು ಗ್ರಾಮಸ್ಥರು ನಮ್ಮದು ಪರಿಶಿಷ್ಟ ಜಾತಿಯೆಂದು ಹೇಳಿದರು. ಅವರಲ್ಲಿ 12(24%) ಪುರುಷರು ಹಾಗೂ 8(16%) ಮಹಿಳೆಯರಾಗಿದ್ದರು. ಅದೇ ರೀತಿಯಲ್ಲಿ ಪರಿಶಿಷ್ಟ ಪಂಗಡ ನಮ್ಮ ಜಾತಿ ಎಂದು 6(12%) ಗ್ರಾಮಸ್ಥರು ಹೇಳಿದರು. ಅವರಲ್ಲಿ 4(8%) ಪುರುಷರು ಹಾಗೂ 2(4%) ಮಹಿಳೆಯರು ಇದ್ದರು. ಹಾಗೆಯೇ ನಮ್ಮ ಜಾತಿ ಹಿಂದುಳಿದ ವರ್ಗಕ್ಕೆ ಸೇರಿದೆ ಎಂದು 24(48%) ಗ್ರಾಮಸ್ಥರು ಸಂದರ್ಶನ ಸಮಯದಲ್ಲಿ ಹೇಳಿದ್ದಾರೆ. ಅವರಲ್ಲಿ 15(30%) ಪುರುಷರು ಹಾಗೂ 9(18%) ಮಹಿಳೆಯರು ಇದ್ದರು ಎಂದು ಹೇಳಬಹುದು.[6]

ಈ ಎಲ್ಲಾ ಅಂಶಗಳನ್ನು ಅವಲೋಕಿಸಿದಾಗ ಈ ಪಂಚಾಯತಿ ವ್ಯಾಪ್ತಿಯಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಗ್ರಾಮಸ್ಥರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ಇವರ ಪ್ರಮಾಣ ಸುಮಾರು ಅರ್ಧಕ್ಕಿಂತ ಹೆಚ್ಚಾಗಿರುವುದನ್ನು ಕಾಣುತ್ತೇವೆ. ಅದೇ ರೀತಿ ಹಿಂದುಳಿದ ವರ್ಗಕ್ಕೆ ಸೇರಿದ ಗ್ರಾಮಸ್ಥರು ಸಹ ಇಲ್ಲಿ ಇರುವುದನ್ನು ಕಾಣಬಹುದು.

ಎಂ.ಕೆ ಹಟ್ಟಿ ಗ್ರಾಮಪಂಚಾಯತಿ ವ್ಯಾಪ್ತಿಯ 50 ಗ್ರಾಮಸ್ಥರನ್ನು ಅವರ ಜಾತಿ ಕುರಿತು ಎಂದು ಸಂದರ್ಶನ ಸಮಯದಲ್ಲಿ ಕೇಳಿದಾಗ 22(44%) ಗ್ರಾಮಸ್ಥರು ಪರಿಶಿಷ್ಟ ಜಾತಿ ಎಂದು ಹೇಳಿದ್ದಾರೆ, ಅವರಲ್ಲಿ 13(26%) ಪುರುಷರು ಹಾಗೂ 9(18%) ಮಹಿಳಾ ಗ್ರಾಮಸ್ಥರು ಈ ರೀತಿಯಾಗಿ ಹೇಳಿದ್ದಾರೆ ಎಂದು ಹೇಳಬಹುದು. ಹಾಗೆಯೆ ಪರಿಶಿಷ್ಟ ಪಂಗಡ ನಮ್ಮ ಜಾತಿ ಎಂದು 10(20%) ಗ್ರಾಮಸ್ಥರು ಹೇಳಿದ್ದಾರೆ. ಅವರಲ್ಲಿ 4(8%) ಪುರುಷರು ಹಾಗೂ 6(12%) ಮಹಿಳೆಯರು ಇದ್ದಾರೆ. 8(16%)ರಷ್ಟು ಗ್ರಾಮಸ್ಥರು ನಾವು ಹಿಂದುಳಿದ ವರ್ಗಕ್ಕೆ ಸೇರಿದವರಾಗಿದ್ದೇವೆ ಎಂದು ಹೇಳಿದ್ದಾರೆ. ಅವರಲ್ಲಿ 5(10%) ಪುರುಷರು 3(6%) ಮಹಿಳೆಯರು ಇದ್ದಾರೆ. ನಾವು ಸಾಮಾನ್ಯ ವರ್ಗಕ್ಕೆ ಸೇರಿದವರೆಂದು 10(20%) ಗ್ರಾಮಸ್ಥರು ಹೇಳಿದ್ದಾರೆ. ಅವರಲ್ಲಿ 6(12%) ಪುರುಷರು ಹಾಗೂ 4(8%) ಮಹಿಳೆಯರು ಇದ್ದಾರೆ.[7]

ಒಟ್ಟಾರೆ ಈ ಪಂಚಾಯತಿಯ ಜಾತಿವಾರು ಸಂದರ್ಶನ ಮಾಡಿದಾಗ ಪರಿಶಿಷ್ಟ ಜಾತಿಗೆ ಸೇರಿದ ಗ್ರಾಮಸ್ಥರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ಅತಿ ಕಡಿಮೆ ಪ್ರಮಾಣದಲ್ಲಿ ಹಿಂದುಳಿದ ವರ್ಗಕ್ಕೆ ಸೇರಿದ ಗ್ರಾಮಸ್ಥರನ್ನು ಈ ಪಂಚಾಯತಿ ವ್ಯಾಪ್ತಿಯಲ್ಲಿ ಕಾಣುತ್ತೇವೆ.

ಒಟ್ಟಾರೆಯಾಗಿ ಈ ಆರು ಗ್ರಾಮ ಪಂಚಾಯತಿಗಳ ವ್ಯಾಪ್ತಿಯಲ್ಲಿ 300 ಗ್ರಾಮಸ್ಥರನ್ನು ಸಂದರ್ಶನ ಮಾಡಿದ್ದು, ಅವರಲ್ಲಿ 168 ಪುರುಷರು ಹಾಗೂ 132 ಮಹಿಳಾ ಗ್ರಾಮಸ್ಥರು. ಅವರಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದರೇ ಹೆಚ್ಚಾಗಿರುವುದು ಕಂಡುಬಂದಿತು. ನಂತರದ ಸ್ಥಾನದಲ್ಲಿ ಹಿಂದುಳಿದ ವರ್ಗಕ್ಕೆ ಸೇರಿದ ಗ್ರಾಮಸ್ಥರು ಹೆಚ್ಚಿನ ಪ್ರಮಾಣದಲ್ಲಿ ಇದ್ದು, ಸಾಮಾನ್ಯ ವರ್ಗಕ್ಕೆ ಸೇರಿದ ಗ್ರಾಮಸ್ಥರು ಅತೀ ಕಡಿಮೆ

ಪ್ರಮಾಣದಲ್ಲಿರುವುದನ್ನು ಕಾಣುತ್ತೇವೆ. ಬಹುತೇಕ ಎಲ್ಲಾ ಗ್ರಾಮ ಪಂಚಾಯತಿಗಳಲ್ಲಿನ ಜನಸಾಮಾನ್ಯರು ಸ್ಥಾಯಿಸಮಿತಿಗಳ ಬಗ್ಗೆ ಅತೃಪ್ತಿ ವ್ಯಕ್ತಪಡಿಸಿದ್ದಾರೆ. ಕೆಲವು ಗ್ರಾಮ ಪಂಚಾಯತಿಗಳಲ್ಲಿ ಜನಸಾಮಾನ್ಯರು ಸ್ಥಾಯಿಸಮಿತಿಗಳ ಬಗ್ಗೆ ಕನಿಷ್ಠ ತಿಳಿವಳಿಕೆ ಮತ್ತು ಅರಿವು ಅರಿವು ಇಲ್ಲದಿರುವುದು ಕಂಡುಬಂದಿದೆ. ಅಲ್ಲದೆ ಈ ಸ್ಥಾಯಿ ಸಮಿತಿಗಳು ಸೂಕ್ತ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿಲ್ಲ ಎಂದು ಒಟ್ಟಾರೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಗ್ರಾಮ ಪಂಚಾಯತಿವಾರು ಸ್ಥಾಯಿಸಮಿತಿಯಲ್ಲಿರುವ ಸದಸ್ಯರ ಶೈಕ್ಷಣಿಕ ವಿವರಗಳನ್ನು ನೋಡಿದಾಗ ಬಬ್ಬೂರು ಗ್ರಾಮ ಪಂಚಾಯತಿಯ ಒಟ್ಟು 15 ಸ್ಥಾಯಿಸಮಿತಿಯ ಸದಸ್ಯರಲ್ಲಿ ಪುರುಷರು ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾಭ್ಯಾಸ ಹೊಂದಿರುವುದನ್ನು ಕಾಣಬಹುದು. ಪುರುಷ 8(53.80%) ಸದಸ್ಯರು ಹಾಗೂ ಮಹಿಳಾ 7(46.70%) ಸದಸ್ಯರು ಇರುವುದನ್ನು ಕಾಣಬಹುದು.

ಬಬ್ಬೂರು ಗ್ರಾಮ ಪಂಚಾಯತಿ ಸ್ಥಾಯಿಸಮಿತಿಯಲ್ಲಿ ಪ್ರಾಥಮಿಕ ಶಿಕ್ಷಣ ಕಲಿತವರು ಹೆಚ್ಚಾಗಿ ಇದ್ದಾರೆ. ಒಟ್ಟು 15 ಸದಸ್ಯರಲ್ಲಿ ಇವರ ಪ್ರಮಾಣ 5ರಷ್ಟಿದೆ. ಶೇಕಡ 33.33% ಇದ್ದಾರೆ. ಹಾಗೆಯೆ ಅನಕ್ಷರಸ್ಥ 3(20.00%) ಸದಸ್ಯರು ಇರುವುದನ್ನು ಕಾಣಬಹುದು. ಇವರಲ್ಲಿ ಪುರುಷ ಸದಸ್ಯರು 0(00.00%) ಹಾಗೂ ಮಹಿಳಾ ಸದಸ್ಯರು 3(20.00%) ಇರುವುದನ್ನು ಕಾಣುತ್ತೇವೆ. ಹಾಗೆಯೆ ಪ್ರೌಢಶಾಲೆ ಶಿಕ್ಷಣ ಪಡೆದ 4(26.66%) ಸದಸ್ಯರು ಇರುವುದನ್ನು ಕಾಣಬಹುದು. ಇವರಲ್ಲಿ ಪುರುಷ ಸದಸ್ಯರು 4(26.60%) ಹಾಗೂ ಮಹಿಳಾ ಸದಸ್ಯರು ಯಾವುದೇ ಶಿಕ್ಷಣ ಪಡೆದಿರುವುದಿಲ್ಲ. ಮುಂದುವರಿದು ಪದವಿಪೂರ್ವ ಶಿಕ್ಷಣದಲ್ಲಿ 1(06.60) ಸದಸ್ಯರು ಇರುವುದನ್ನು ಕಾಣಬಹುದು. ಇವರಲ್ಲಿ ಪುರುಷ ಸದಸ್ಯರು 1(06.60) ಹಾಗೂ ಇಲ್ಲಿಯೂ ಮಹಿಳಾ ಸದಸ್ಯರು ಶಿಕ್ಷಣವನ್ನು ಪಡೆದಿರುವುದಿಲ್ಲ ಹಾಗೂ ಪದವಿ ಶಿಕ್ಷಣದಲ್ಲಿ 2(13.30%) ಸದಸ್ಯರು ಇರುವುದನ್ನು ಕಾಣಬಹುದು. ಇವರಲ್ಲಿ ಪುರುಷ ಸದಸ್ಯರು 2(13.30%) ಹಾಗೂ ಪುನಃ ಮಹಿಳಾ ಸದಸ್ಯರು ಇಲ್ಲಿಯೂ ಕೂಡ ಶಿಕ್ಷಣದಿಂದ ವಂಚಿತರಾಗಿರುವುದನ್ನು ಕಾಣಬಹುದು. ಅದೇ ರೀತಿಯಲ್ಲಿ ಬಬ್ಬೂರು ಗ್ರಾಮ ಪಂಚಾಯತಿ ಸ್ಥಾಯಿಸಮಿತಿಯ ಒಟ್ಟು ಸದಸ್ಯರಲ್ಲಿ ಪುರುಷ ಸದಸ್ಯರ ವಿದ್ಯಾಭ್ಯಾಸ ಮುಂದೆ ಇರುವುದನ್ನು ಕಾಣುತ್ತೇವೆ. ಒಟ್ಟು 15 ಸದಸ್ಯರಲ್ಲಿ ಪುರುಷರ ಸಂಖ್ಯೆ 8(53.28%)ರಷ್ಟಿದೆ. ಇವರಲ್ಲಿ ಅನಕ್ಷರಸ್ಥರು ಕಾಣದೆ, ಪ್ರಾಥಮಿಕ ಶಿಕ್ಷಣ 1(06.66)ರಷ್ಟು, ಪ್ರೌಢ ಶಿಕ್ಷಣ 4(26.60%)ರಷ್ಟು, ಪದವಿ ಪೂರ್ವ ಶಿಕ್ಷಣದಲ್ಲಿ 1(06.60)ರಷ್ಟು ಹಾಗೂ ಪದವಿ ಶಿಕ್ಷಣದಲ್ಲಿ 2(13.30%) ಇರುವುದನ್ನು ಕಾಣುತ್ತೇವೆ.[8] ಒಟ್ಟಾರೆಯಾಗಿ ಬಬ್ಬೂರು ಗ್ರಾಮ ಪಂಚಾಯಿತಿಯ ಸ್ಥಾಯಿ ಸಮಿತಿಯ ಸದಸ್ಯರ ವಿದ್ಯಾಭ್ಯಾಸದ ವಿವರಗಳನ್ನು ನೋಡಿದಾಗ ಪುರುಷ ಸದಸ್ಯರು 8(53.80%) ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು.

ಗ್ರಾಮ ಪಂಚಾಯತಿವಾರು ಸ್ಥಾಯಿಸಮಿತಿಯಲ್ಲಿರುವ ಸದಸ್ಯರ ವಿದ್ಯಾಭ್ಯಾಸ ಸಮೀಕ್ಷೆಯನ್ನು ಮಾಡಿದ ನಂತರ ಗೌಡನಹಳ್ಳಿ ಗ್ರಾಮ ಪಂಚಾಯತಿಯು ಒಟ್ಟು 15 ಸ್ಥಾಯಿಸಮಿತಿ ಸದಸ್ಯರಲ್ಲಿ ಪುರುಷರು ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾಭ್ಯಾಸ ಹೊಂದಿರುವುದನ್ನು ಕಾಣಬಹುದು. 8 ಪುರುಷ ಸದಸ್ಯರು(53.80%) ಹಾಗೂ 7 ಮಹಿಳಾ (46.70%)ಸದಸ್ಯರು ಇರುವುದನ್ನು ಕಾಣಬಹುದಾಗಿದೆ.

ಗೌಡನಹಳ್ಳಿ ಗ್ರಾಮ ಪಂಚಾಯತಿ ಸ್ಥಾಯಿಸಮಿತಿಯಲ್ಲಿ ಪ್ರಾಥಮಿಕ ಶಿಕ್ಷಣ ಕಲಿತವರು ಹೆಚ್ಚಾಗಿದ್ದಾರೆ. ಒಟ್ಟು 15 ಸದಸ್ಯರಲ್ಲಿ ಇವರ ಪ್ರಮಾಣ 8(53.30%)ರಷ್ಟು ಇದ್ದಾರೆ. ಹಾಗೆಯೆ ಅನಕ್ಷರಸ್ಥರ ಪ್ರಮಾಣದಲ್ಲಿ ಯಾವುದೇ ಫಲಿತಾಂಶವನ್ನು ನೀಡದೆ, ಹಾಗೆಯೆ ಪ್ರೌಢಶಾಲಾ ಶಿಕ್ಷಣದಲ್ಲಿ 6(40.00%) ಸದಸ್ಯರು ಇರುವುದನ್ನು ಕಾಣಬಹುದು. ಇವರಲ್ಲಿ ಪುರುಷರು 4(26.60%) ಹಾಗೂ ಮಹಿಳಾ ಸದಸ್ಯರು 2(13.30%) ಪಡೆದಿದ್ದು ಮುಂದುವರೆದು ಪದವಿ ಪೂರ್ವ ಕಾಲೇಜಿನಲ್ಲಿ 1(06.60%) ಸದಸ್ಯರು ಇರುವುದನ್ನು ಕಾಣಬಹುದು. ಇವರಲ್ಲಿ ಪುರುಷರು 1(06.60%) ಹಾಗೂ ಮಹಿಳಾ ಸದಸ್ಯರು ಯಾವುದೇ ಶಿಕ್ಷಣವನ್ನು ಪಡೆಯದೇ ತಮ್ಮ ಸ್ಥಾನವನ್ನು ನಿಭಾಯಿಸುತ್ತಿದ್ದಾರೆ ಹಾಗೂ ಪದವಿ ಶಿಕ್ಷಣದಲ್ಲಿ ಯಾವುದೇ ಸದಸ್ಯರು ವಿದ್ಯಾಭ್ಯಾಸವನ್ನು ಮಾಡದೇ ಅನುಕ್ರಮವಾಗಿ ಆಡಳಿತವನ್ನು ನಡೆಸುತ್ತಿದ್ದಾರೆ. ಅದೇ ರೀತಿಯಲ್ಲಿ ಗೌಡನಹಳ್ಳಿ ಗ್ರಾಮ ಪಂಚಾಯತಿ ಸ್ಥಾಯಿಸಮಿತಿಯ ಒಟ್ಟು ಸದಸ್ಯರಲ್ಲಿ ಪುರುಷ ಸದಸ್ಯರು ವಿದ್ಯಾಭ್ಯಾಸದಲ್ಲಿ ಮುಂದೆ ಇರುವುದನ್ನು ಕಾಣುತ್ತೇವೆ. ಒಟ್ಟು 15 ಸದಸ್ಯರಲ್ಲಿ ಪುರುಷ ಸದಸ್ಯರ ಸಂಖ್ಯೆ8(53.80%)ರಷ್ಟಿದ್ದು, ಇವರಲ್ಲಿ ಅನಕ್ಷರಸ್ಥರು ಕಾಣದೇ ಪ್ರಾಥಮಿಕ ಶಿಕ್ಷಣ 3(20.00%) ಪ್ರೌಢಶಿಕ್ಷಣ 4(26.60%) ಹಾಗೂ ಪದವಿ ಪೂರ್ವ ಶಿಕ್ಷಣ 1(06.60%) ಅಂದರೆ ಪದವಿ ಶಿಕ್ಷಣದಲ್ಲಿ ಯಾವುದೇ ಪ್ರಗತಿಯನ್ನು ಕಾಣದೇ ಆಡಳಿತವನ್ನು ನಡೆಸಿಕೊಂಡು ಹೋಗುತ್ತಿದ್ದಾರೆ.[9]

ಒಟ್ಟಾರೆಯಾಗಿ ಗೌಡನಹಳ್ಳಿ ಗ್ರಾಮ ಪಂಚಾಯತಿ ಸ್ಥಾಯಿಸಮಿತಿ ಸದಸ್ಯರ ವಿದ್ಯಾಭ್ಯಾಸದ ವಿವರಗಳನ್ನು ನೋಡಿದಾಗ ಪುರುಷ 8(53.80%)ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿರುವುದು ಈ ಮೇಲಿನ ಅಂಕಿ ಅಂಶಗಳಿಂದ ತಿಳಿದುಬರುತ್ತದೆ.

ಗ್ರಾಮ ಪಂಚಾಯತಿವಾರು ಸ್ಥಾಯಿಸಮಿತಿಯಲ್ಲಿರುವ ಸದಸ್ಯರ ವಿದ್ಯಾಭ್ಯಾಸ ಸಮೀಕ್ಷೆಯನ್ನು ಮಾಡಿದ ನಂತರ ಹಾನಗಲ್ ಗ್ರಾಮ ಪಂಚಾಯತಿಯು ಒಟ್ಟು 16 ಸ್ಥಾಯಿಸಮಿತಿ ಸದಸ್ಯರಲ್ಲಿ ಪುರುಷರು ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾಭ್ಯಾಸ ಹೊಂದಿರುವುದನ್ನು ಕಾಣಬಹುದು. ಪುರುಷ 10(62.50%) ಸದಸ್ಯರು ಹಾಗೂ ಮಹಿಳಾ 2(37.50%) ಸದಸ್ಯರು ಇರುವುದನ್ನು ಕಾಣಬಹುದು.

ಹಾನಗಲ್ ಗ್ರಾಮ ಪಂಚಾಯತಿ ಸ್ಥಾಯಿಸಮಿತಿಯಲ್ಲಿ ಪ್ರೌಢ ಶಿಕ್ಷಣ ಕಲಿತವರು ಹೆಚ್ಚಾಗಿದ್ದಾರೆ. ಒಟ್ಟು 16 ಸದಸ್ಯರಲ್ಲಿ ಇವರ ಪ್ರಮಾಣ 10(62.50%)ರಷ್ಟು ಇದೆ. ಹಾಗೆಯೆ ಅನಕ್ಷರಸ್ಥರ

ಪ್ರಮಾಣದಲ್ಲಿ ಯಾವುದೆ ಫಲಿತಾಂಶವನ್ನು ನೀಡದೆ ಮುಂದುವರಿದು ಪ್ರಾಥಮಿಕ ಶಿಕ್ಷಣದಲ್ಲಿ ವಿದ್ಯಾಭ್ಯಾಸ ಪಡೆಯದೆ ಇರುವ ಸದಸ್ಯರನ್ನು ಕಾಣಬಹುದಾಗಿದೆ. ಪದವಿ ಪೂರ್ವ ಶಿಕ್ಷಣ ಪಡೆದ 2(12.50%) ಸದಸ್ಯರು ಇರುವುದನ್ನು ಕಾಣಬಹುದು. ಇವರಲ್ಲಿ ಪುರುಷ ಸದಸ್ಯರು 2(12.50%) ಹಾಗೂ ಮಹಿಳಾ ಸದಸ್ಯರು ಇಲ್ಲದಿರುವುದನ್ನು ನೋಡಬಹುದು ಹಾಗೂ ಪದವಿ ಶಿಕ್ಷಣದಲ್ಲಿ 3(18.75%) ಸದಸ್ಯರು ಇರುವುದನ್ನು ಕಾಣಬಹುದು. ಇವರಲ್ಲಿ ಪುರುಷರು 2(12.50%) ಹಾಗೂ ಮಹಿಳಾ ಸದಸ್ಯರು 1(06.20%) ಇರುವುದನ್ನು ಕಾಣಬಹುದಾಗಿದೆ. ಅದೇ ರೀತಿಯಲ್ಲಿ ಹಾನಗಲ್ ಗ್ರಾಮ ಪಂಚಾಯತಿ ಸ್ಥಾಯಿ ಸಮಿತಿಯ ಒಟ್ಟು ಸದಸ್ಯರಲ್ಲಿ ಪುರುಷ ಸದಸ್ಯರು ವಿದ್ಯಾಭ್ಯಾಸದಲ್ಲಿ ಮುಂದುವರೆದಿರುವುದನ್ನು ಕಾಣುತ್ತೇವೆ. ಒಟ್ಟು 16 ಸದಸ್ಯರಲ್ಲಿ ಪುರುಷ ಸದಸ್ಯರ ಸಂಖ್ಯೆ 10(62.5%)ರಷ್ಟಿದೆ. ಇವರಲ್ಲಿ ಅನಕ್ಷರಸ್ಥರು ಕಾಣದೆ ಪ್ರಾಥಮಿಕ ಶಿಕ್ಷಣವನ್ನು ಕಲಿಯದ, ಪ್ರೌಢ ಶಿಕ್ಷಣದಲ್ಲಿ 6(37.50%) ಹಾಗೂ ಪದವಿ ಪೂರ್ವ ಶಿಕ್ಷಣ 2(12.50%) ಅಂದರೆ ಪದವಿ ಶಿಕ್ಷಣದಲ್ಲಿ 2(12.50%) ವಿದ್ಯಾಭ್ಯಾಸವನ್ನು ಪಡೆದು ಆಡಳಿತವನ್ನು ಸುಸಂಘಟಿತವಾಗಿ ನಡೆಸಿಕೊಂಡು ಹೋಗುತ್ತಿರುವುದನ್ನು ಕಾಣಬಹುದು.[10]

ಒಟ್ಟಾರೆಯಾಗಿ ಹಾನಗಲ್ ಗ್ರಾಮ ಪಂಚಾಯತಿ ಸ್ಥಾಯಿಸಮಿತಿಯ ಸದಸ್ಯರ ವಿದ್ಯಾಭ್ಯಾಸದ ವಿವರಗಳನ್ನು ನೋಡಿದಾಗ ಪುರುಷ 10(62.5%) ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಇಲ್ಲಿನ ಅಂಕಿ ಅಂಶಗಳಿಂದ ಖಚಿತವಾಗುತ್ತದೆ.

ಗ್ರಾಮ ಪಂಚಾಯತಿವಾರು ಸ್ಥಾಯಿಸಮಿತಿಯಲ್ಲಿರುವ ಸದಸ್ಯರ ವಿದ್ಯಾಭ್ಯಾಸ ಸಮೀಕ್ಷೆ ಮಾಡಿದಾಗ ರಾಯಪುರ ಗ್ರಾಮ ಪಂಚಾಯತಿಯು ಒಟ್ಟು 16 ಸ್ಥಾಯಿಸಮಿತಿಯ ಸದಸ್ಯರಲ್ಲಿ ಪುರುಷರು ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾಭ್ಯಾಸ ಹೊಂದಿರುವುದನ್ನು ಕಾಣಬಹುದು. ಪುರುಷರ 9(56.25%) ಸದಸ್ಯರು ಹಾಗೂ ಮಹಿಳಾ 1(6.25%) ಸದಸ್ಯರು ಇರುವುದನ್ನು ಕಾಣಬಹುದು.

ರಾಯಪುರ ಗ್ರಾಮ ಪಂಚಾಯತಿ ಸ್ಥಾಯಿಸಮಿತಿಯಲ್ಲಿ ಹೆಚ್ಚಾಗಿ ಪ್ರಾಥಮಿಕ ಶಿಕ್ಷಣ ಕಲಿತವರು ಹೆಚ್ಚಾಗಿ ಇದ್ದಾರೆ. ಒಟ್ಟು 16 ಸದಸ್ಯರಲ್ಲಿ ಇವರ ಪ್ರಮಾಣ 9(56.25%) ಇದೆ. ಹಾಗೆಯೇ ಅನಕ್ಷರಸ್ಥರು 6(37.50%) ಸದಸ್ಯರು ಇರುವುದನ್ನು ಕಾಣಬಹುದು. ಇವರಲ್ಲಿ ಪುರುಷ ಸದಸ್ಯರು, 1(06.20%) ಹಾಗೂ ಮಹಿಳಾ ಸದಸ್ಯರು 5(31.25%) ಇರುವುದನ್ನು ಕಾಣುತ್ತೇವೆ. ಹಾಗೆಯೇ ಪ್ರೌಢಶಾಲೆ ಶಿಕ್ಷಣ ಪಡೆದ 3(18.75%) ಸದಸ್ಯರು ಇರುವುದನ್ನು ಕಾಣಬಹುದು. ಇವರಲ್ಲಿ ಪುರುಷ ಸದಸ್ಯರು 3(18.75%) ಹಾಗೂ ಮಹಿಳಾ ಸದಸ್ಯರು ಯಾವುದೇ ಶಿಕ್ಷಣ ಪಡೆದಿರುವುದಿಲ್ಲ. ಮುಂದುವರಿದು ಪದವಿಪೂರ್ವ ಶಿಕ್ಷಣ ಪಡೆದಿರುವುದಿಲ್ಲ. ಪದವಿಪೂರ್ವ ಶಿಕ್ಷಣ ಪಡೆದ 1(06.70%) ಸದಸ್ಯರು ಇರುವುದನ್ನು ಕಾಣಬಹುದು. ಇವರಲ್ಲಿ ಪುರುಷ ಸದಸ್ಯರು

1(06.20%) ಹಾಗೂ ಇಲ್ಲಿಯೂ ಮಹಿಳಾ ಸದಸ್ಯರು ಶಿಕ್ಷಣವನ್ನು ಪಡೆದಿರುವುದಿಲ್ಲ. ಹಾಗೂ ಪದವಿ ಶಿಕ್ಷಣದಲ್ಲಿ 1(06.20%) ಸದಸ್ಯರು ಇರುವುದನ್ನು ಕಾಣಬಹುದು. ಇವರಲ್ಲಿ ಪುರುಷ ಸದಸ್ಯರು 1(06.20%) ಸದಸ್ಯರು ಹಾಗೂ ಪುನಃ ಮಹಿಳಾ ಸದಸ್ಯರು ಇಲ್ಲಿಯೂ ಕೂಡ ಶಿಕ್ಷಣದಿಂದ ವಂಚಿತರಾಗಿರುವುದನ್ನು ಕಾಣಬಹುದು. ಅದೇ ರೀತಿಯಲ್ಲಿ ರಾಯಪುರ ಗ್ರಾಮ ಪಂಚಾಯತಿ ಸ್ಥಾಯಿಸಮಿತಿಯ ಒಟ್ಟು ಸದಸ್ಯರಲ್ಲಿ ಪುರುಷರ ಸದಸ್ಯರು ವಿದ್ಯಾಭ್ಯಾಸ ಮುಂದೆ ಇರುವುದನ್ನು ಕಾಣುತ್ತೇವೆ. ಒಟ್ಟು 16 ಸದಸ್ಯರಲ್ಲಿ ಪುರುಷರ ಸಂಖ್ಯೆ 9(56.25%) ರಷ್ಟಿದೆ, ಇವರಲ್ಲಿ ಅನಕ್ಷರಸ್ಥರ ಪ್ರಮಾಣ 1(06.20%) ಪ್ರಾಥಮಿಕ ಶಿಕ್ಷಣ 4(25.00%), ಪ್ರೌಢ ಶಿಕ್ಷಣ 3(18.75%), ಪದವಿ ಪೂರ್ವ ಶಿಕ್ಷಣದಲ್ಲಿ 1(06.20%) ಹಾಗೂ ಪದವಿ ಶಿಕ್ಷಣದಲ್ಲಿ 1(06.20%) ಇರುವುದನ್ನು ಕಾಣುತ್ತೇವೆ.[11]

ಒಟ್ಟಾರೆಯಾಗಿ ರಾಯಪುರ ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿಯ ಸದಸ್ಯರ ವಿದ್ಯಾಭ್ಯಾಸದ ವಿವರಗಳನ್ನು ನೋಡಿದಾಗ ಪುರುಷ ಸದಸ್ಯರು 9(56.25%) ಹೆಚ್ಚಿನ ಸಂಖ್ಯೆಯಲ್ಲಿರುವುದು ಈ ಮೇಲಿನ ಅಂಕಿ ಅಂಶಗಳಿಂದ ತಿಳಿಯುತ್ತದೆ/

ಗ್ರಾಮ ಪಂಚಾಯತಿವಾರು ಸ್ಥಾಯಿಸಮಿತಿಯಲ್ಲಿರುವ ಸದಸ್ಯರ ವಿದ್ಯಾಭ್ಯಾಸವನ್ನು ಸಮೀಕ್ಷೆ ಮಾಡಿದಾಗ ಮದಕರಿಪುರ ಗ್ರಾಮ ಪಂಚಾಯತಿಯ ಒಟ್ಟು 15 ಸ್ಥಾಯಿಸಮಿತಿಯು ಸದಸ್ಯರಲ್ಲಿ ಪುರುಷರು ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾಭ್ಯಾಸ ಹೊಂದಿರುವುದನ್ನು ಕಾಣಬಹುದು. ಪುರುಷ 9(60.0%) ಸದಸ್ಯರು ಹಾಗೂ ಮಹಿಳಾ 5(33.34%) ಸದಸ್ಯರು ಇರುವುದನ್ನು ಕಾಣಬಹುದು.

ಮದಕರಿಪುರ ಗ್ರಾಮ ಪಂಚಾಯತಿ ಸ್ಥಾಯಿಸಮಿತಿಯಲ್ಲಿ ಹೆಚ್ಚಾಗಿ ಪ್ರಾಥಮಿಕ ಶಿಕ್ಷಣ ಕಲಿತವರು ಇದ್ದಾರೆ. ಒಟ್ಟು 15 ಸದಸ್ಯರಲ್ಲಿ ಇವರ ಪ್ರಮಾಣ 9(60.0%)ರಷ್ಟಿದೆ. ಹಾಗೆಯೇ ಅನಕ್ಷರಸ್ಥರು. 1(06.60%)ರಷ್ಟಿರುವುದನ್ನು ಕಾಣಬಹುದು. ಇವರಲ್ಲಿ ಮಹಿಳಾ ಸದಸ್ಯರು ಮಾತ್ರ 1(06.60%) ಇರುವುದನ್ನು ಕಾಣುತ್ತೇವೆ. ಹಾಗೆಯೇ ಪ್ರೌಢಶಾಲೆ ಶಿಕ್ಷಣವನ್ನು ಪಡೆಯದೇ, ಮುಂದುವರಿದು ಪದವಿ ಪೂರ್ವ ಶಿಕ್ಷಣದಲ್ಲಿ 4(26.66%) ಸದಸ್ಯರಲ್ಲಿ ಇರುವುದನ್ನು ಕಾಣಬಹುದು. ಇವರಲ್ಲಿ ಪುರುಷ ಸದಸ್ಯರು 2(13.30%) ಹಾಗೂ ಮಹಿಳಾ ಸದಸ್ಯರು 2(13.30%)ರಷ್ಟು ಇದ್ದಾರೆ. ಹಾಗೂ ಪದವಿ ಶಿಕ್ಷಣದಲ್ಲಿ 1(06.60%) ಸದಸ್ಯರು ಇರುವುದನ್ನು ಕಾಣಬಹುದು. ಇವರಲ್ಲಿ ಪುರುಷ ಸದಸ್ಯರು ಮಾತ್ರ 1(06.60%) ಇರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ ಮದಕರಿಪುರ ಗ್ರಾಮ ಪಂಚಾಯತಿ ಸ್ಥಾಯಿಸಮಿತಿಯ ಒಟ್ಟು ಸದಸ್ಯರಲ್ಲಿ ಪುರುಷ ಸದಸ್ಯರು ವಿದ್ಯಾಭ್ಯಾಸದಲ್ಲಿ ಮುಂದೆ ಇರುವುದನ್ನು ಕಾಣುತ್ತೇವೆ. ಒಟ್ಟು 15 ಸದಸ್ಯರಲ್ಲಿ ಪುರುಷರ ಸಂಖ್ಯೆ 9(60.0%)ರಷ್ಟಿದೆ. ಇವರಲ್ಲಿ ಅನಕ್ಷರಸ್ಥರ ಪ್ರಮಾಣ 1(06.60%), ಪ್ರಾಥಮಿಕ ಶಿಕ್ಷಣ 6(40.00%), ಪ್ರೌಢ ಶಿಕ್ಷಣದಿಂದ

ವಂಚಿತಗೊಂಡಿರುವುದನ್ನು ನೋಡುತ್ತಾ, ಪದವಿ ಪೂರ್ವ ಶಿಕ್ಷಣ 2(13.30%) ಹಾಗೂ ಪದವಿ ಶಿಕ್ಷಣ 1(06.60%) ಪಡೆದವರನ್ನು ಕಾಣುತ್ತೇವೆ.[12]

ಒಟ್ಟಾರೆಯಾಗಿ ಮದಕರಿಪುರ ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿಯ ಸದಸ್ಯರ ವಿದ್ಯಾಭ್ಯಾಸದ ವಿವರಗಳನ್ನು ನೋಡಿದಾಗ ಪುರುಷ ಸದಸ್ಯರು 9(60.0%) ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಈ ಮೇಲಿನ ಅಂಕಿ ಅಂಶಗಳಿಂದ ತಿಳಿಯಬಹುದಾಗಿದೆ.

ಗ್ರಾಮ ಪಂಚಾಯತಿವಾರು ಸ್ಥಾಯಿಸಮಿತಿಯಲ್ಲಿರುವ ಸದಸ್ಯರ ವಿದ್ಯಾಭ್ಯಾಸ ಸಮೀಕ್ಷೆ ಮಾಡಿದಾಗ ಎಂ.ಕೆ. ಹಟ್ಟಿ ಗ್ರಾಮ ಪಂಚಾಯತಿಯ ಒಟ್ಟು 20 ಸ್ಥಾಯಿಸಮಿತಿಯ ಸದಸ್ಯರಲ್ಲಿ ಪುರುಷರು ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾಭ್ಯಾಸ ಹೊಂದಿರುವುದನ್ನು ಕಾಣಬಹುದು. ಪುರುಷ 10(50.0%) ಸದಸ್ಯರು ಹಾಗೂ ಮಹಿಳಾ 5(25.0%) ಸದಸ್ಯರು ಇರುವುದನ್ನು ಕಾಣಬಹುದು.

ಮಠದ ಕುರಬರಹಟ್ಟಿ ಗ್ರಾಮ ಪಂಚಾಯತಿ ಸ್ಥಾಯಿಸಮಿತಿಯಲ್ಲಿ ಪ್ರಾಥಮಿಕ ಶಿಕ್ಷಣ ಕಲಿತವರು ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ಒಟ್ಟು 20 ಸದಸ್ಯರಲ್ಲಿ ಇವರ ಪ್ರಮಾಣ 10(50.0%)ದಷ್ಟಿದೆ. ಹಾಗೆಯೇ ಅನಕ್ಷರಸ್ಥ 5(25.00%) ಸದಸ್ಯರು ಇರುವುದನ್ನು ಕಾಣಬಹುದು. ಇವರಲ್ಲಿ ಪುರುಷ ಸದಸ್ಯರು 1(05.00%) ಹಾಗೂ ಮಹಿಳಾ ಸದಸ್ಯರು 4(20.00%) ಇರುವುದನ್ನು ಕಾಣುತ್ತೇವೆ. ಹಾಗೆಯೇ ಪ್ರೌಢಶಾಲೆ ಶಿಕ್ಷಣದಲ್ಲಿ 3(15.00%) ಸದಸ್ಯರು ಇರುವುದನ್ನು ಕಾಣಬಹುದು. ಇವರಲ್ಲಿ ಪುರುಷ ಸದಸ್ಯರು 2(10.00%) ಹಾಗೂ ಮಹಿಳಾ ಸದಸ್ಯರು 1.(05.00%) ಇರುವುದನ್ನು ಕಾಣಬಹುದು. ಮುಂದುವರಿದು ಪದವಿ ಪೂರ್ವ ಶಿಕ್ಷಣ ಪಡೆದ 2(10.00%) ಸದಸ್ಯರು ಇರುವುದನ್ನು ಕಾಣಬಹುದು. ಇವರಲ್ಲಿ ಪುರುಷ ಸದಸ್ಯರು ಮಾತ್ರ 2(10.00%) ಇರುವುದನ್ನು ಕಾಣಬಹುದು. ಹಾಗೂ ಪದವಿ ಶಿಕ್ಷಣ ಪಡೆಯದೇ ಇರುವುದನ್ನು ಕಾಣಬಹುದು. ಅದೇ ರೀತಿಯಲ್ಲಿ ಎಂ.ಕೆ. ಹಟ್ಟಿ ಗ್ರಾಮ ಪಂಚಾಯತಿ ಸ್ಥಾಯಿಸಮಿತಿಯ ಒಟ್ಟು ಸದಸ್ಯರಲ್ಲಿ ಪುರುಷ ಸದಸ್ಯರು ವಿದ್ಯಾಭ್ಯಾಸ ಮುಂದೆ ಇರುವುದನ್ನು ಕಾಣುತ್ತೇವೆ. ಒಟ್ಟು 20 ಸದಸ್ಯರಲ್ಲಿ ಪುರುಷರ ಸಂಖ್ಯೆ 10(50%)ರಷ್ಟಿದೆ. ಇವರಲ್ಲಿ ಅನಕ್ಷರಸ್ಥರ ಪ್ರಮಾಣ 1(05.00%), ಪ್ರಾಥಮಿಕ ಶಿಕ್ಷಣ 6(30.00%), ಪ್ರೌಢ ಶಿಕ್ಷಣ 2(10.00%), ಪದವಿ ಪೂರ್ವ ಶಿಕ್ಷಣದಲ್ಲಿ 2(10.00%) ಹಾಗೂ ಪದವಿ ಶಿಕ್ಷಣದಲ್ಲಿ ಯಾವುದೇ ಅರ್ಹತೆಯನ್ನು ಪಡೆಯದಿರುವುದನ್ನು ಕಾಣಬಹುದು.[13]

ಒಟ್ಟಾರೆಯಾಗಿ ಎಂ.ಕೆ.ಹಟ್ಟಿ ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿಯ ಸದಸ್ಯರ ವಿದ್ಯಾಭ್ಯಾಸದ ವಿವರಗಳನ್ನು ನೋಡಿದಾಗ ಪುರುಷ ಸದಸ್ಯರು 10(50.00%) ಹೆಚ್ಚಿನ ಸಂಖ್ಯೆಯಲ್ಲಿ ರುವುದನ್ನು ಕಾಣಬಹುದು. ಸ್ಥಾಯಿ ಸಮಿತಿಗಳ ಸದಸ್ಯರ ಶೈಕ್ಷಣಿಕ ಮಟ್ಟ ಉತ್ತಮವಾಗಿದ್ದರೂ ಎಲ್ಲಾ ಗ್ರಾಮಪಂಚಾಯತಿಗಳಲ್ಲಿ ಸ್ಥಾಯಿಸಮಿತಿಗಳು ಸಮರ್ಪಕ ಕಾರ್ಯಕ್ಷಮತೆ ಕಂಡುಬಂದಿಲ್ಲ.

ಗ್ರಾಮ ಪಂಚಾಯತಿವಾರು ಸ್ಥಾಯಿಸಮಿತಿಯಲ್ಲಿರುವ ಸದಸ್ಯರ ವಯೋಮಾನ ಸಮೀಕ್ಷೆ ಮಾಡಿದಾಗ ಬಬ್ಬೂರು ಗ್ರಾಮ ಪಂಚಾಯತಿಯು ಒಟ್ಟು 15 ಸ್ಥಾಯಿಸಮಿತಿಯ ಸಂದರ್ಶಿತ ಸದಸ್ಯರಲ್ಲಿ 25 ವರ್ಷದವರೆಗೆ ಯಾವ ಸದಸ್ಯರು ಹೊಂದಿರದೆ. ಶೇ.6.7ರಷ್ಟು ಸದಸ್ಯರು 26 ರಿಂದ 35 ವರ್ಷ ವಯಸ್ಸಿನವರು ಇದ್ದು, 36 ರಿಂದ 45 ವರ್ಷದವರು ಶೇ.66.7ರಷ್ಟಿದ್ದಾರೆ, 46 ರಿಂದ 55 ವರ್ಷದವರು ಶೇ.6.7ರಷ್ಟು ಮತ್ತು 56 ವರ್ಷಕ್ಕಿಂತ ಮೇಲ್ಪಟ್ಟವರು ಶೇ.20.0ರಷ್ಟು ಇದ್ದಾರೆ. ಒಟ್ಟಾರೆ 26 ವರ್ಷದಿಂದ 55 ವರ್ಷ ವಯಸ್ಸಾದವರು ಹೆಚ್ಚು ಕಂಡುಬಂದಿದ್ದಾರೆ. 25 ವರ್ಷದ ಒಳಗಿನವರು ಇರದೆ ಮತ್ತು 56 ವರ್ಷಕ್ಕಿಂತ ಹೆಚ್ಚು ವಯಸ್ಸಾದವರು ಕಡಿಮೆ ಸಂಖ್ಯೆಯಲ್ಲಿ ಇರುವುದನ್ನು ಕಾಣಬಹುದಾಗಿದೆ.[14]

ಚಿಕ್ಕವಯಸ್ಸಿನರು ರಾಜಕೀಯದಲ್ಲಿ ಹಚ್ಚಿನ ಉತ್ಸಾಹ ತೋರುತ್ತಿರುವುದು ಹಾಗೂ ಭಾಗವಹಿಸುವಿಕೆ ಇಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಆದರೆ ಅವರಿಗೆ ರಾಜಕೀಯ ಅನುಭವ ಕಡಿಮೆ ಇರುವುದರಿಂದ ರಾಜಕೀಯದಲ್ಲಿ ಪಾಲ್ಗೊಳ್ಳಲು ಕಡಿಮೆ ಅವಕಾಶವಿರುತ್ತದೆ. ಮತ್ತು ವಯಸ್ಸಾದವರಿಗೆ ರಾಜಕೀಯ ಅನುಭವವಿದ್ದರೂ ಅವರು ರಾಜಕೀಯಲ್ಲಿ ಪಾಲ್ಗೊಳ್ಳಲು ಹೆಚ್ಚು ಉತ್ಸಾಹ ತೋರದ ಕಾರಣ ಅವರ ಸಂಖ್ಯೆಯೂ ಕಡಿಮೆ ಇರುವುದನ್ನು ಕಾಣಬಹುದು. ಆದರೆ ಮಧ್ಯಮ ವಯಸ್ಸಿನವರಿಗೆ ರಾಜಕೀಯದಲ್ಲಿ ಭಾಗವಹಿಸುವ ಉತ್ಸಾಹ ಮತ್ತು ರಾಜಕೀಯ ಅನುಭವ ಎರಡೂ ಇರುವ ಕಾರಣ ಗ್ರಾಮ ಪಂಚಾಯತಿ ಸ್ಥಾಯಿಸಮಿತಿ ಸದಸ್ಯರಾಗಿ ಆಯ್ಕೆಯಾಗುವವರ ಸಂಖ್ಯೆ ಹೆಚ್ಚಾಗಿದೆ ಎಂದು ಈ ಮೇಲಿನ ಅಂಕಿ ಅಂಶಗಳಿಂದ ತಿಳಿದುಬರುತ್ತದೆ.

ಗ್ರಾಮ ಪಂಚಾಯತಿವಾರು ಸ್ಥಾಯಿಸಮಿತಿಯಲ್ಲಿರುವ ಸದಸ್ಯರ ವಯೋಮಾನ ಸಮೀಕ್ಷೆ ಮಾಡಿದಾಗ ಗೌಡನಹಳ್ಳಿ ಗ್ರಾಮ ಪಂಚಾಯತಿಯು ಒಟ್ಟು 15 ಸ್ಥಾಯಿಸಮಿತಿಯ ಸಂದರ್ಶಿತ ಸದಸ್ಯರಲ್ಲಿ 25 ವರ್ಷದವರೆಗೆ ಯಾವ ಸದಸ್ಯರು ಹೊಂದಿರದೆ. 20% ರಷ್ಟು ಸದಸ್ಯರು 26 ರಿಂದ 35ವರ್ಷ ವಯಸ್ಸಿನವರು ಇದ್ದು, 36 ರಿಂದ 45 ವರ್ಷದವರೂ ಸಹ 40%ರಷ್ಟು ಇದ್ದಾರೆ. 46 ರಿಂದ 55 ವರ್ಷದವರು ಕೂಡ 40.0%ರಷ್ಟು, ಮತ್ತು 56 ವರ್ಷಕ್ಕಿಂತ ಮೇಲ್ಪಟ್ಟವರು ಯಾವುದೇ ಪ್ರಮಾಣವನ್ನು ಕಾಣದೆ, ಒಟ್ಟಾರೆ 26 ವರ್ಷದಿಂದ 55 ವರ್ಷ ವಯಸ್ಸಾದವರು ಹೆಚ್ಚು ಕಂಡುಬಂದಿದ್ದಾರೆ. 25 ವರ್ಷದ ಒಳಗಿನವರು ಮತ್ತು 56 ವರ್ಷಕ್ಕಿಂತ ಹೆಚ್ಚು ವಯಸ್ಸಾದವರು ಕಡಿಮೆ ಸಂಖ್ಯೆಯಲ್ಲಿ ಇರುವುದನ್ನು ಕಾಣಬಹುದಾಗಿದೆ.[15]

ಗ್ರಾಮ ಪಂಚಾಯತಿವಾರು ಸ್ಥಾಯಿಸಮಿತಿಯಲ್ಲಿರುವ ಸದಸ್ಯರ ವಯೋಮಾನ ಸಮೀಕ್ಷೆ ಮಾಡಿದಾಗ ಹಾನಗಲ್ ಗ್ರಾಮ ಪಂಚಾಯತಿಯು ಒಟ್ಟು 16 ಸ್ಥಾಯಿಸಮಿತಿಯ ಸಂದರ್ಶಿತ ಸದಸ್ಯರಲ್ಲಿ 25 ವರ್ಷದವರಿಗೆ ಯಾವ ಸದಸ್ಯರನ್ನು ಹೊಂದಿರದೆ. 26 ರಿಂದ 35 ವರ್ಷದವರೂ

ಯಾವ ಸದಸ್ಯರನ್ನು ಸಹ ಹೊಂದಿರದೆ, 36 ರಿಂದ 45 ವರ್ಷದವರೂ 50.0%ರಷ್ಟು ಇದ್ದಾರೆ. 46 ರಿಂದ 55 ವರ್ಷದವರು 18.8%ರಷ್ಟು, ಮತ್ತು 56 ವರ್ಷಕ್ಕಿಂತ ಮೇಲ್ಪಟ್ಟವರು ಶೇ 25.0ರಷ್ಟು ಇದ್ದಾರೆ. ಒಟ್ಟಾರೆ 36 ವರ್ಷದಿಂದ 45ವರ್ಷ ವಯಸ್ಸಾದವರು ಹೆಚ್ಚು ಕಂಡುಬಂದಿದ್ದಾರೆ. 35 ವರ್ಷದ ಒಳಗಿನವರು ಇರದೆ ಮತ್ತು 56 ವರ್ಷಕ್ಕಿಂತ ಹೆಚ್ಚು ವಯಸ್ಸಾದವರು ಕಡಿಮೆ ಸಂಖ್ಯೆಯಲ್ಲಿ ಇರುವುದನ್ನು ಕಾಣಬಹುದಾಗಿದೆ.[16]

ಗ್ರಾಮ ಪಂಚಾಯತಿವಾರು ಸ್ಥಾಯಿಸಮಿತಿಯಲ್ಲಿರುವ ಸದಸ್ಯರ ವಯೋಮಾನ ಸಮೀಕ್ಷೆ ಮಾಡಿದಾಗ ರಾಯಪುರ ಗ್ರಾಮ ಪಂಚಾಯತಿಯು ಒಟ್ಟು 16 ಸ್ಥಾಯಿಸಮಿತಿಯ ಸಂದರ್ಶಿತ ಸದಸ್ಯರಲ್ಲಿ 25 ವರ್ಷದವರಿಗೆ ಯಾವ ಸದಸ್ಯರು ಹೊಂದಿರದೆ. ಶೇಕಡ 6.6% ಸದಸ್ಯರು 26 ರಿಂದ 35ವರ್ಷ ವಯಸ್ಸಿನವರು ಇದ್ದು, 36ರಿಂದ 45 ವರ್ಷದವರೂ ಶೇಕಡ 31.3ರಷ್ಟು, ಮತ್ತು 56 ವರ್ಷಕ್ಕಿಂತ ಮೇಲ್ಪಟ್ಟವರು ಶೇಕಡ .18.8%ರಷ್ಟು ಇದ್ದಾರೆ. ಒಟ್ಟಾರೆ 26 ವರ್ಷದಿಂದ 55 ವರ್ಷ ವಯಸ್ಸಿನವರು ಹೆಚ್ಚು ಕಂಡುಬಂದಿದ್ದಾರೆ. 25 ವರ್ಷದ ಒಳಗಿನವರು ಇರದೆ ಮತ್ತು 56 ವರ್ಷಕ್ಕಿಂತ ಹೆಚ್ಚು ವಯಸ್ಸಾದವರು ಕಡಿಮೆ ಸಂಖ್ಯೆಯಲ್ಲಿ ಇರುವುದನ್ನು ನೋಡಬಹುದಾಗಿದೆ.[17]

ಗ್ರಾಮ ಪಂಚಾಯತಿವಾರು ಸ್ಥಾಯಿಸಮಿತಿಯಲ್ಲಿರುವ ಸದಸ್ಯರ ವಯೋಮಾನ ಸಮೀಕ್ಷೆ ಮಾಡಿದಾಗ ಮದಕರಿಪುರ ಗ್ರಾಮ ಪಂಚಾಯತಿಯ ಒಟ್ಟು 15 ಸ್ಥಾಯಿಸಮಿತಿಯ ಸಂದರ್ಶಿತ ಸದಸ್ಯರಲ್ಲಿ 25 ವರ್ಷದವರೆಗೆ ಯಾವ ಸದಸ್ಯರು ಹೊಂದಿರದೆ. ಶೇಕಡ 20.0ರಷ್ಟು ಸದಸ್ಯರು 26 ರಿಂದ 35 ವರ್ಷ ವಯಸ್ಸಿನವರು ಇದ್ದು, 36 ರಿಂದ 45ವರ್ಷದವರೂ ಶೇಕಡ 46.7ರಷ್ಟು ಇದ್ದಾರೆ, 46ರಿಂದ 55 ವರ್ಷದವರೂ ಶೇಕಡ 13.3ರಷ್ಟು ಮತ್ತು 56 ವರ್ಷಕ್ಕಿಂತ ಮೇಲ್ಪಟ್ಟವರು ಶೇಕಡ 20.0ರಷ್ಟು ಇದ್ದಾರೆ. ಒಟ್ಟಾರೆ 26 ವರ್ಷದಿಂದ 55 ವರ್ಷ ವಯಸ್ಸಾದವರು ಹೆಚ್ಚು ಕಂಡುಬಂದಿದ್ದಾರೆ. 25 ವರ್ಷದ ಒಳಗಿನವರು ಇರದೆ ಮತ್ತು 56 ವರ್ಷಕ್ಕಿಂತ ಹೆಚ್ಚು ವಯಸ್ಸಾದವರು ಕಡಿಮೆ ಸಂಖ್ಯೆಯಲ್ಲಿ ಇರುವುದನ್ನು ಕಾಣಬಹುದು.[18]

ಗ್ರಾಮ ಪಂಚಾಯತಿವಾರು ಸ್ಥಾಯಿಸಮಿತಿಯಲ್ಲಿರುವ ಸದಸ್ಯರ ವಯೋಮಾನ ಸಮೀಕ್ಷೆ ಮಾಡಿದಾಗ ಎಂ.ಕೆ. ಹಟ್ಟಿ ಗ್ರಾಮ ಪಂಚಾಯತಿಯು ಒಟ್ಟು 20 ಸ್ಥಾಯಿಸಮಿತಿಯ ಸಂದರ್ಶಿತ ಸದಸ್ಯರಲ್ಲಿ 25ವರ್ಷದವರೆಗೆ ಯಾವ ಸದಸ್ಯರು ಹೊಂದಿರದೆ. ಶೇಕಡ 10.0%ರಷ್ಟು ಸದಸ್ಯರು 26 ರಿಂದ 35ವರ್ಷ ವಯಸ್ಸಿನವರು ಇದ್ದು 36 ರಿಂದ 45 ವರ್ಷದವರೂ ಸಹ ಶೇಕಡ 45.0%ರಷ್ಟು ಇದ್ದಾರೆ. 46 ರಿಂದ 55 ವರ್ಷದವರು ಶೇಕಡ 40.0%ರಷ್ಟು ಮತ್ತು 56 ವರ್ಷಕ್ಕಿಂತ ಮೇಲ್ಪಟ್ಟವರು ಶೇಕಡ 5.0%ರಷ್ಟು ಇದ್ದಾರೆ. ಒಟ್ಟಾರೆ 26 ವರ್ಷದಿಂದ 55 ವರ್ಷ ವಯಸ್ಸಾದವರು ಹೆಚ್ಚು ಕಂಡುಬಂದಿದ್ದಾರೆ. 25 ವರ್ಷದ ಒಳಗಿನವರು ಆಯ್ಕೆಯಾಗದೆ ಮತ್ತು 56ವರ್ಷಕ್ಕಿಂತ ಹೆಚ್ಚು ವಯಸ್ಸಾದವರು. ಕಡಿಮೆ ಸಂಖ್ಯೆಯಲ್ಲಿ ಇರುವುದನ್ನು ಕಾಣಬಹುದಾಗಿದೆ.[19]

ತಾಲ್ಲೂಕು ಪಂಚಾಯತಿವಾರು ಸಂದರ್ಶಿಸಿದ ಸ್ಥಾಯಿಸಮಿತಿ ಸದಸ್ಯರ ವಯೋಮಾನದ ವಿವರವನ್ನು ಈ ಮುಂದಿನಂತೆ ವಿಶ್ಲೇಷಿಸಬಹುದು. ಚಿತ್ರದುರ್ಗ ತಾಲ್ಲೂಕು ಪಂಚಾಯತಿಯ ಒಟ್ಟು 27 ಸ್ಥಾಯಿ ಸಮಿತಿ ಸದಸ್ಯರ ವಯೋಮಾನ ವಿವರದಲ್ಲಿ 18–25 ವಯಸ್ಸಿನ ಯಾವ ಸದಸ್ಯರು ಇಲ್ಲ. 26–35 ವಯೋಮಾನದ 2(7.4%) ಸದಸ್ಯರನ್ನು ಕಾಣಬಹುದು. ಅವರಲ್ಲಿ 1(3.7%) ಪುರುಷ ಹಾಗೂ 1(3.7%) ಮಹಿಳಾ ಸದಸ್ಯರಾಗಿದ್ದಾರೆ. 36–45 ವಯಸ್ಸಿನ 11(40.7%) ಸದಸ್ಯರಲ್ಲಿ 5(18.5%) ಪುರುಷ ಹಾಗೂ 6(22.2%) ಮಹಿಳಾ ಸದಸ್ಯರು ಇರುವುದನ್ನು ಕಾಣಬಹುದು. ಅದೇ ರೀತಿಯಲ್ಲಿ 46–55 ವಯಸ್ಸಿನ 11(40.7%) ಸದಸ್ಯರಲ್ಲಿ 9(33.3%) ಪುರುಷ ಹಾಗೂ 3(11.1%) ಮಹಿಳಾ ಸದಸ್ಯರಿದ್ದಾರೆ. 56 ವಯಸ್ಸಿಗಿಂತ ಹೆಚ್ಚಿರುವ 2 (7.4%) ಪುರುಷ ಸದಸ್ಯರಿರುವುದನ್ನು ಕಾಣುತ್ತೇವೆ.[20]

ಒಟ್ಟಾರೆಯಾಗಿ ಚಿತ್ರದುರ್ಗ ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರಲ್ಲಿ 36 ರಿಂದ 55ರ ವಯೋಮಾನದ ಸದಸ್ಯರು ಅತೀ ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ.

ಹಿರಿಯೂರು ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ವಿವರವನ್ನು ನೋಡಿದಾಗ ಒಟ್ಟು 22 ಸದಸ್ಯರಲ್ಲಿ 18–25 ವಯಸ್ಸಿನ ಯಾವ ಸದಸ್ಯರು ಇಲ್ಲ. 26–35 ವಯಸ್ಸಿನ 2(9.1%) ಮಹಿಳಾ ಸದಸ್ಯರು ಮಾತ್ರ ಇದ್ದಾರೆ. 36–45 ವಯೋಮಾನದ 10(45.5%) ಸದಸ್ಯರನ್ನು ಕಾಣುತ್ತೇವೆ. ಅವರಲ್ಲಿ 4(18.2%) ಪುರುಷ ಹಾಗೂ 6(27.3%) ಮಹಿಳಾ ಸದಸ್ಯರು ಇರುವುದನ್ನು ಕಾಣಬಹುದು. 46–55 ವಯೋಮಾನದ 8(36.4%) ಸದಸ್ಯರಲ್ಲಿ 7(31.8%) ಪುರುಷ ಹಾಗೂ 1(4.5%) ಮಹಿಳಾ ಸದಸ್ಯರು ಇರುವುದನ್ನು ಕಾಣಬಹುದಾಗಿದೆ. 56ಕ್ಕಿಂತ ಹೆಚ್ಚಿರುವ ವಯೋಮಾನದ 2(9.1%) ಪುರುಷ ಸದಸ್ಯರನ್ನು ನಾವು ಈ ಪಂಚಾಯತಿಯಲ್ಲಿ ಇರುವುದನ್ನು ಕಾಣುತ್ತೇವೆ.[21]

ಒಟ್ಟಾರೆಯಾಗಿ ಹಿರಿಯೂರು ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರಲ್ಲಿ 36 ರಿಂದ 55 ರವರೆಗೆ ಇರುವ ವಯೋಮಾನದ ಸದಸ್ಯರು ಅತೀ ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಕಾಣಬಹುದಾಗಿದೆ.

ಮೊಳಕಾಲ್ಮೂರು ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ವಿವರವನ್ನು ನೋಡಿದಾಗ ಒಟ್ಟು 12 ಸದಸ್ಯರಲ್ಲಿ 18–25 ವಯಸ್ಸಿನ ಯಾವ ಸದಸ್ಯರು ಸಿಗುವುದಿಲ್ಲ. 26–35ರ ವಯೋಮಾನದ 3(25%) ಸದಸ್ಯರಿದ್ದಾರೆ ಅವರಲ್ಲಿ 1(8.3%) ಪುರುಷ ಹಾಗೂ 2(16.6%) ಮಹಿಳಾ ಸದಸ್ಯರಿದ್ದಾರೆ. 36–45 ವಯಸ್ಸಿನ ಒಟ್ಟು 3(25%) ಸದಸ್ಯರಲ್ಲಿ 2(16.6%) ಪುರುಷ ಹಾಗೂ 1(8.3%) ಮಹಿಳಾ ಸದಸ್ಯರಿದ್ದಾರೆ. ಹಾಗೆಯೇ 46–55 ವಯಸ್ಸಿನ 3(25%) ಸದಸ್ಯರಲ್ಲಿ

1(8.3%) ಪುರುಷ ಹಾಗೂ 2(16.6%) ಮಹಿಳಾ ಸದಸ್ಯರಿದ್ದಾರೆ. 56ಕ್ಕಿಂತ ಹೆಚ್ಚು ವಯೋಮಾನದ 3(25%) ಸದಸ್ಯರಿದ್ದಾರೆ. ಅವರಲ್ಲಿ 2(16.6%) ಪುರುಷ ಹಾಗೂ 1(8.3%) ಮಹಿಳಾ ಸದಸ್ಯರಿದ್ದಾರೆ.[22]

ಒಟ್ಟಾರೆಯಾಗಿ ಮೊಳಕಾಲ್ಮೂರು ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರಲ್ಲಿ ವಯೋಮಾನದ ವಿವರಗಳನ್ನು ಅವಲೋಕಿಸಿದಾಗ 18–25 ವಯೋಮಾನದವರನ್ನು ಹೊರತುಪಡಿಸಿ ಉಳಿದ ಎಲ್ಲಾ ವಯೋಮಾನದ ಸದಸ್ಯರು ಸಮಾನ ಸಂಖ್ಯೆಯಲ್ಲಿರುವುದನ್ನು ಗುರುತಿಸಬಹುದಾಗಿದೆ.

ಒಟ್ಟಾರೆಯಾಗಿ ಈ ಎಲ್ಲಾ ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ವಯೋಮಾನದ ವಿವರವನ್ನು ಅವಲೋಕಿಸಿದಾಗ 18–25 ವಯೋಮಾನದ ಯಾವ ಸದಸ್ಯರು ಇರುವುದಿಲ್ಲ. ಹೆಚ್ಚಿನ ಪ್ರಮಾಣದಲ್ಲಿ 36 ರಿಂದ 55 ರ ವಯೋಮಾನದ ಸದಸ್ಯರು ಹೆಚ್ಚಾಗಿರುವುದನ್ನು ನಾವು ಕಾಣಬಹುದಾಗಿದೆ.

ಚಿತ್ರದುರ್ಗ ಜಿಲ್ಲಾ ಪಂಚಾಯತಿವಾರು ಸಂದರ್ಶಿಸಿದ ಸ್ಥಾಯಿಸಮಿತಿ ಸದಸ್ಯರ ವಯೋಮಾನದ ವಿವರವನ್ನು ಈ ಮುಂದಿನಂತೆ ವಿಶ್ಲೇಷಣೆ ಮಾಡಬಹುದಾಗಿದೆ. ಚಿತ್ರದುರ್ಗ ಜಿಲ್ಲಾ ಪಂಚಾಯತಿಯ ಸ್ಥಾಯಿಸಮಿತಿಯಲ್ಲಿ ಒಟ್ಟು 34 ಸದಸ್ಯರು ಇದ್ದಾರೆ. ಅವರಲ್ಲಿ 18–25 ವಯೋಮಾನದ ಯಾವ ಸದಸ್ಯರು ಇರುವುದಿಲ್ಲ. 26–35 ವಯೋಮಾನದ 3(8.8%) ಸದಸ್ಯರಲ್ಲಿ 1(2.9%) ಪುರುಷ ಹಾಗೂ 2(5.9%) ಮಹಿಳಾ ಸದಸ್ಯರಿದ್ದಾರೆ. 36–45 ವಯೋಮಾನದ 12(35.3%) ಸದಸ್ಯರಲ್ಲಿ 5(14.7%) ಪುರುಷ ಹಾಗೂ 7(20.6%) ಮಹಿಳಾ ಸದಸ್ಯರಿದ್ದಾರೆ. ಹಾಗೆಯೇ 46–55 ವಯೋಮಾನದ 10(29.4%) ಸದಸ್ಯರಲ್ಲಿ 7(20.6%) ಪುರುಷ ಹಾಗೂ 3(8.8%) ಮಹಿಳಾ ಸದಸ್ಯರಿದ್ದಾರೆ. 56 ಕ್ಕಿಂತ ಹೆಚ್ಚಿನ ವಯೋಮಾನದ 2(5.9%) ಪುರುಷ ಸದಸ್ಯರಿರುವುದನ್ನು ಕಾಣುತ್ತೇವೆ.[23]

ಒಟ್ಟಾರೆಯಾಗಿ ಚಿತ್ರದುರ್ಗ ಜಿಲ್ಲಾ ಪಂಚಾಯತಿಯಲ್ಲಿ ಸಂದರ್ಶಿಸಿದ ಸ್ಥಾಯಿಸಮಿತಿ ಸದಸ್ಯರಲ್ಲಿ 18–25 ವಯೋಮಾನದ ಯಾವ ಸದಸ್ಯರು ಇಲ್ಲ. ಹಾಗೆಯೇ 35 ರಿಂದ 55ರ ವರೆಗೆ ವಯೋಮಾನ ಹೊಂದಿರುವ ಸದಸ್ಯರು ಅತೀ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ.

ಗ್ರಾಮ ಪಂಚಾಯತಿವಾರು ಸಂದರ್ಶಿತ ಗ್ರಾಮಸ್ಥರ ವಯೋಮಾನ ಸಮೀಕ್ಷೆ ಮಾಡಿದಾಗ ಬಬ್ಬೂರು ಗ್ರಾಮ ಪಂಚಾಯತಿಯು ಒಟ್ಟು 50 ಸಂದರ್ಶಿತ ಗ್ರಾಮಸ್ಥರಲ್ಲಿ ಪುರುಷರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ಪುರುಷರು 27(54.0%) ಸದಸ್ಯರು ಹಾಗೂ ಮಹಿಳೆಯರು 23(46.0%) ಸದಸ್ಯರು ಇರುವುದನ್ನು ಕಾಣಬಹುದು.

ಒಟ್ಟು 50 ಸದಸ್ಯರಲ್ಲಿ ಅಂದರೆ 18 ವರ್ಷದಿಂದ 25 ವಯಸ್ಸಿನವರಲ್ಲಿ ಪುರುಷರು 5(10.0%)ರಷ್ಟು ಮಹಿಳೆಯರು 3(6.0)ರಷ್ಟು ಒಟ್ಟು 8(16.0%) ಸದಸ್ಯರು ಇರುತ್ತಾರೆ. 26

ಮತ್ತು 35 ವರ್ಷ ವಯಸ್ಸಿನವರಲ್ಲಿ ಒಟ್ಟು 15(30.0%) ಗ್ರಾಮಸ್ಥರು ಇದ್ದು ಅಂದರೆ ಪುರುಷರು 8(16.0%) ಹಾಗೂ ಮಹಿಳೆಯರು 7(14.0%)ರಷ್ಟು ಇರುತ್ತಾರೆ. 36 ರಿಂದ 45ವರ್ಷ ವಯಸ್ಸಿನವರಲ್ಲಿ ಒಟ್ಟು 9(18.0%) ಸಂದರ್ಶಿತ ಗ್ರಾಮಸ್ಥರು ಇದ್ದು, ಅದರಲ್ಲಿ ಪುರುಷರು 5(10.0%) ಮತ್ತು ಮಹಿಳೆಯರು 9(18.0%)ಕಂಡುಬರುತ್ತಾರೆ. ಮುಂದುವರಿದು 46 ರಿಂದ 55 ವರ್ಷ ವಯಸ್ಸಿನವರಲ್ಲಿ ಒಟ್ಟು 12(24.0%) ಸಂದರ್ಶಿತ ಗ್ರಾಮಸ್ಥರು ಇದ್ದು, ಅವರಲ್ಲಿ ಪುರುಷರು 7(14.0%) ಮತ್ತು ಮಹಿಳೆಯರು 5(10.0%) ಇರುತ್ತಾರೆ. ಹಾಗೆಯೇ 56 ವರ್ಷಕ್ಕಿಂತ ಮೇಲ್ಪಟ್ಟು ಸಂದರ್ಶಿತರ ಗ್ರಾಮಸ್ಥರು 4(8.0%)ರಷ್ಟು ಇರುವುದನ್ನು ಕಾಣುತ್ತೇವೆ. ಪುರುಷ 3(6.0%) ಮತ್ತು ಮಹಿಳೆಯರು 1(2.0%) ಇದ್ದಾರೆ.[24]

ಒಟ್ಟಾರೆಯಾಗಿ ಗ್ರಾಮ ಪಂಚಾಯತಿವಾರು ಸಂದರ್ಶಿಸಿದ ಗ್ರಾಮಸ್ಥರ ವಯೋಮಾನದಲ್ಲಿ 26 ರಿಂದ 35 ವರ್ಷ ವಯಸ್ಸಿನವರು ಹೆಚ್ಚು ಕಂಡುಬರುತ್ತಾರೆ.

ಗ್ರಾಮ ಪಂಚಾಯತಿವಾರು ಸಂದರ್ಶಿತ ಗ್ರಾಮಸ್ಥರ ವಯೋಮಾನ ಸಮೀಕ್ಷೆ ಮಾಡಿದ ನಂತರ ಗೌಡನಹಳ್ಳಿ ಗ್ರಾಮ ಪಂಚಾಯತಿಯು ಒಟ್ಟು 50 ಸಂದರ್ಶಿತ ಗ್ರಾಮಸ್ಥರಲ್ಲಿ ಪುರುಷರು 27 (54.0%) ಮತ್ತು ಮಹಿಳೆಯರು 23 (46.0%) ಇರುವುದನ್ನು ಕಾಣಬಹುದು.

ಒಟ್ಟು 50 ಸದಸ್ಯರಲ್ಲಿ ಅಂದರೆ 18 ರಿಂದ 25 ವರ್ಷ ವಯಸ್ಸಿನವರಲ್ಲಿ ಪುರುಷರು 4(8.0%) ಮತ್ತು ಮಹಿಳೆಯರು 2(4.0%)ರಷ್ಟು ಒಟ್ಟು 6(12.0%) ಸದಸ್ಯರು ಇದ್ದು, ಹಾಗೂ 26 ರಿಂದ 35 ವರ್ಷ ವಯಸ್ಸಿನವರಲ್ಲಿ ಒಟ್ಟು 17(34.0%) ಗ್ರಾಮಸ್ಥರು ಇದ್ದು, ಅಂದರೆ ಪುರುಷರು 8(16.0%) ಮತ್ತು ಮಹಿಳೆಯರು 09(18.0%)ರಷ್ಟು ತೆಗೆದುಕೊಳ್ಳಲಾಗಿದೆ. ಹಾಗೆಯೇ 45 ರಿಂದ 96 ವರ್ಷ ವಯಸ್ಸಿನವರಲ್ಲಿ ಒಟ್ಟು 8(16.0%) ಸಂದರ್ಶಿತ ಗ್ರಾಮಸ್ಥರು ಇದ್ದು, ಅವರಲ್ಲಿ ಪುರುಷರು 5(10.0%) ಮತ್ತು ಮಹಿಳೆಯರು 03(6.0%) ಕಂಡುಬಂದಿದ್ದಾರೆ. ಮುಂದುವರಿದು 46 ರಿಂದ 55 ವರ್ಷ ವಯಸ್ಸಿನವರಲ್ಲಿ ಒಟ್ಟು 03(6.0%) ಸಂದರ್ಶಿತ ಗ್ರಾಮಸ್ಥರು ಒಳಗೊಂಡಿದ್ದು, ಅವರಲ್ಲಿ ಪುರುಷರು 2(4.0%) ಮತ್ತು ಮಹಿಳೆಯರು 01(2.0%) ಇರುತ್ತಾರೆ ಹಾಗೆಯೇ 56 ವರ್ಷಕ್ಕಿಂತ ಮೇಲ್ಪಟ್ಟು ಸಂದರ್ಶಿತರ ಗ್ರಾಮಸ್ಥರು 01(2.0%)ರಷ್ಟು ಇರುವುದನ್ನು ಕಾಣುತ್ತೇವೆ. ಅಂದರೆ ಪುರುಷರು 1(2.0%) ಮತ್ತು ಮಹಿಳೆಯರನ್ನು ಸಂದರ್ಶನದಲ್ಲಿ ಭಾಗವಹಿಸದೆ ಇರುವುದನ್ನು ಕಾಣುತ್ತೇವೆ.[25]

ಒಟ್ಟಾರೆಯಾಗಿ ಗ್ರಾಮ ಪಂಚಾಯತಿವಾರು ಸಂದರ್ಶಿತ ಗ್ರಾಮಸ್ಥರ ವಯೋಮಾನದಲ್ಲಿ 26 ರಿಂದ 35 ವರ್ಷ ವಯಸ್ಸಿನವರು ಹೆಚ್ಚು ಕಂಡುಬಂದಿದ್ದಾರೆ ಎಂದು ಈ ಮೇಲಿನ ಅಂಕಿ ಅಂಶಗಳಿಂದ ತಿಳಿದುಬರುತ್ತದೆ.

ಗ್ರಾಮ ಪಂಚಾಯತಿವಾರು, ಸಂದರ್ಶಿತವಾರು, ಸಂದರ್ಶಿತ ಗ್ರಾಮಸ್ಥರ ವಯೋಮಾನ ಸಮೀಕ್ಷೆ ಮಾಡಿದಾಗ ಅಂದರೆ ಹಾನಗಲ್ ಗ್ರಾಮ ಪಂಚಾಯತಿಯು ಒಟ್ಟು 50 ಸಂದರ್ಶಿತ ಗ್ರಾಮಸ್ಥರಲ್ಲಿ ಪುರುಷರು 28(56.0%) ಸದಸ್ಯರು ಮತ್ತು ಮಹಿಳೆಯರು 22(44.0%) ಸದಸ್ಯರು ಇರುವುದನ್ನು ಕಾಣಬಹುದು.

ಒಟ್ಟು 50ಸದಸ್ಯರಲ್ಲಿ ಅಂದರೆ 18 ರಿಂದ 25 ವರ್ಷ ವಯಸ್ಸಿನವರಲ್ಲಿ ಒಟ್ಟು 10(20.0%) ಸದಸ್ಯರು ಇದ್ದು, ಅಂದರೆ ಪುರುಷರು 6(12.05%) ಮತ್ತು ಮಹಿಳೆಯರು 4(8.0%)ರಷ್ಟು, ಹಾಗೂ 26 ರಿಂದ 35 ವರ್ಷ ವಯಸ್ಸಿನವರಲ್ಲಿ ಒಟ್ಟು 13(26.0%) ಗ್ರಾಮಸ್ಥರು ಇದ್ದು, ಅಂದರೆ ಪುರುಷರು 9(18.0%) ಗ್ರಾಮಸ್ಥರು ಮತ್ತು ಮಹಿಳೆಯರು 04(8.0%)ರಷ್ಟು ಕಂಡುಬಂದಿದ್ದಾರೆ. ಹಾಗೆಯೇ 36 ರಿಂದ 45 ವರ್ಷ ವಯಸ್ಸಿನವರಲ್ಲಿ ಒಟ್ಟು 7(14.0%) ಸಂದರ್ಶಿತ ಗ್ರಾಮಸ್ಥರು ಇದ್ದು, ಅವರಲ್ಲಿ ಪುರುಷ ಗ್ರಾಮಸ್ಥರು 04(8.0%)ಮತ್ತು ಮಹಿಳೆಯರು 03(6.0%) ಕಂಡುಬಂದಿದ್ದಾರೆ. ಮುಂದುವರಿದು 46 ರಿಂದ 55 ವರ್ಷ ವಯಸ್ಸಿನವರಲ್ಲಿ ಒಟ್ಟು 05(10.0%) ಸಂದರ್ಶಿತ ಗ್ರಾಮಸ್ಥರು ಒಳಗೊಂಡಿದ್ದು, ಅದರಲ್ಲಿ ಪುರುಷರು 3(6.0%) ಮತ್ತು ಮಹಿಳೆಯರು 02(4.0%)ರಷ್ಟು ಇರುತ್ತಾರೆ. ಹಾಗೆಯೇ 56 ವರ್ಷಕ್ಕಿಂತ ಮೇಲ್ಪಟ್ಟ ಸಂದರ್ಶಿತರ ಗ್ರಾಮಸ್ಥರು 3(6.0%) ಇದ್ದು, ಅದರಲ್ಲಿ ಪುರುಷರು 2(4.0%) ಮತ್ತು ಮಹಿಳೆಯರು 01(2.0%) ಇರುವುದನ್ನು ಕಾಣುತ್ತೇವೆ.[26]

ಒಟ್ಟಾರೆಯಾಗಿ ಗ್ರಾಮ ಪಂಚಾಯತಿವಾರು ಸಂದರ್ಶಿಸಿದ ಗ್ರಾಮಸ್ಥರ ವಯೋಮಾನದಲ್ಲಿ 26 ರಿಂದ 35 ವರ್ಷ ವಯಸ್ಸಿನವರು ಹೆಚ್ಚು ಕಂಡುಬಂದಿದ್ದು, ಈ ಮೇಲಿನ ಅಂಕಿ ಅಂಶಗಳಿಂದ ತಿಳಿದುಬರುತ್ತದೆ.

ಗ್ರಾಮ ಪಂಚಾಯತಿವಾರು ಸಂದರ್ಶಿತ ಗ್ರಾಮಸ್ಥರ ವಯೋಮಾನ ಸಮೀಕ್ಷೆ ಮಾಡಿದ ನಂತರ ರಾಯಪುರ ಗ್ರಾಮ ಪಂಚಾಯತಿಯು ಒಟ್ಟು 50 ಸಂದರ್ಶಿತ ಗ್ರಾಮಸ್ಥರಲ್ಲಿ ಪುರುಷರು 30 ಸದಸ್ಯರು (60.0%) ಮತ್ತು ಮಹಿಳೆಯರು 20 ಸದಸ್ಯರು (40.0%) ಇರುವುದನ್ನು ಕಾಣಬಹುದು.

ಒಟ್ಟು 50 ಸಬಸ್ಯರಲ್ಲಿ ಅಂದರೆ 18 ರಿಂದ 25 ವರ್ಷ ವಯಸ್ಸಿನವರಲ್ಲಿ ಪುರುಷರು 5(10.0%) ಮತ್ತು ಮಹಿಳೆಯರು 4(8.0%)ರಷ್ಟು ಒಟ್ಟು 9(18.0%) ಸದಸ್ಯರು ಇದ್ದು, ಹಾಗೂ 26 ರಿಂದ 35 ವರ್ಷ ವಯಸ್ಸಿನವರಲ್ಲಿ ಒಟ್ಟು 15(30.0%) ಗ್ರಾಮಸ್ಥರು ಇದ್ದು, ಅಂದರೆ ಪುರುಷರು 9(18.0%) ಮತ್ತು ಮಹಿಳೆಯರು 6(12.0%)ರಷ್ಟು ತೆಗೆದುಕೊಳ್ಳಲಾಗಿದೆ. ಹಾಗೆಯೇ 36 ರಿಂದ 45 ವರ್ಷ ವಯಸ್ಸಿನವರಲ್ಲಿ ಒಟ್ಟು 9(18.0%) ಸಂದರ್ಶಿತ ಗ್ರಾಮಸ್ಥರು ಇದ್ದು, ಅವರಲ್ಲಿ ಪುರುಷರು 6(12.0%) ಮತ್ತು ಮಹಿಳೆಯರು 3(6.0%) ಕಂಡುಬಂದಿದ್ದಾರೆ. ಮುಂದುವರಿದು

46 ರಿಂದ 55 ವರ್ಷ ವಯಸ್ಸಿನವರಲ್ಲಿ ಒಟ್ಟು 14(28.0%) ಸಂದರ್ಶಿತ ಗ್ರಾಮಸ್ಥರು ಒಳಗೊಂಡಿದ್ದು, ಅದರಲ್ಲಿ ಪುರುಷರು 8(16.0%) ಮತ್ತು ಮಹಿಳೆಯರು 6(12.0%) ಇರುತ್ತಾರೆ. ಹಾಗೆಯೇ 56 ವರ್ಷಕ್ಕಿಂತ ಮೇಲ್ಪಟ್ಟು ಸಂದರ್ಶಿತ ಗ್ರಾಮಸ್ಥರು 03(6.0%)ರಷ್ಟು ಇರುವುದನ್ನು ಕಾಣುತ್ತೇವೆ. ಅಂದರೆ ಪುರುಷರು 2(4.0%) ಮತ್ತು ಮಹಿಳೆಯರು 1(2.0%) ಇರುವುದನ್ನು ನೋಡುತ್ತೇವೆ.[27]

ಒಟ್ಟಾರೆಯಾಗಿ ಗ್ರಾಮ ಪಂಚಾಯತಿವಾರು ಸಂದರ್ಶಿಸಿದ ಗ್ರಾಮಸ್ಥರ ವಯೋಮಾನದಲ್ಲಿ 26 ರಿಂದ 35 ವರ್ಷ ವಯಸ್ಸಿನವರು ಹೆಚ್ಚು ಕಂಡುಬಂದಿದೆ ಎಂದು ಈ ಮೇಲಿನ ಅಂಕಿ ಅಂಶಗಳಿಂದ ತಿಳಿದುಬರುತ್ತದೆ.

ಗ್ರಾಮ ಪಂಚಾಯತಿವಾರು, ಸಂದರ್ಶಿತವಾರು, ಸಂದರ್ಶಿತ ಗ್ರಾಮಸ್ಥರ ವಯೋಮಾನ ಸಮೀಕ್ಷೆ ಮಾಡಿದಾಗ, ಅಂದರೆ ಮದಕರಿಪುರ ಗ್ರಾಮ ಪಂಚಾಯತಿಯು ಒಟ್ಟು 50 ಸಂದರ್ಶಿತ ಗ್ರಾಮಸ್ಥರಲ್ಲಿ ಪುರುಷರು 32(64.0%) ಸದಸ್ಯರು ಮತ್ತು ಮಹಿಳೆಯರು 18(36.0%) ಸದಸ್ಯರು ಇರುವುದನ್ನು ಕಾಣಬಹುದು.

ಒಟ್ಟು 50 ಸದಸ್ಯರಲ್ಲಿ ಅಂದರೆ 18 ರಿಂದ 25 ವರ್ಷ ವಯಸ್ಸಿನವರಲ್ಲಿ ಪುರುಷರು 6(12.0%) ಮತ್ತು ಮಹಿಳೆಯರು 4(8.0%)ರಷ್ಟು ಒಟ್ಟು 10(20.0%) ಸದಸ್ಯರು ಇದ್ದು, 26 ರಿಂದ 35 ವರ್ಷ ವಯಸ್ಸಿನವರಲ್ಲಿ ಒಟ್ಟು 15(30.0%) ಗ್ರಾಮಸ್ಥರು ಇದ್ದು, ಅದರಲ್ಲಿ ಪುರುಷರು 8(16.0%) ಮತ್ತು ಮಹಿಳೆಯರನ್ನು 7(14.0%) ತೆಗೆದುಕೊಳ್ಳಲಾಗಿದೆ. ಹಾಗೆಯೇ 36 ರಿಂದ 45 ವರ್ಷ ವಯಸ್ಸಿನವರಲ್ಲಿ ಒಟ್ಟು 13(26.0%) ಸಂದರ್ಶಿತ ಗ್ರಾಮಸ್ಥರು ಒಳಗೊಂಡಿದ್ದು, ಅವರಲ್ಲಿ ಪುರುಷರು 8(16.0%) ಮತ್ತು ಮಹಿಳೆಯರು 5(10.0%) ಕಂಡುಬಂದಿದ್ದಾರೆ. ಮುಂದುವರಿದು 46 ರಿಂದ 55 ವರ್ಷ ವಯಸ್ಸಿನವರಲ್ಲಿ ಒಟ್ಟು 9(18.0%) ಸಂದರ್ಶನಕ್ಕೆ ಒಳಗಾದವರು, ಅದರಲ್ಲಿ ಪುರುಷರು 7(14.0%) ಮತ್ತು ಮಹಿಳೆಯರು 2(04.0%)ರಷ್ಟು ಇದ್ದಾರೆ. ಹಾಗೆಯೇ 56 ವರ್ಷಕ್ಕಿಂತ ಮೇಲ್ಪಟ್ಟು ಸಂದರ್ಶಿತರ ಗ್ರಾಮಸ್ಥರು 4(08.0%) ಇರುವುದನ್ನು ಕಾಣುತ್ತೇವೆ. ಅದರಲ್ಲಿ ಪುರುಷರು 3(6.0%) ಮತ್ತು ಮಹಿಳೆಯರು 1(2.0%) ಗ್ರಾಮಸ್ಥರ ಉಪಸ್ಥಿತಿಯನ್ನು ಕಾಣುತ್ತೆವೆ.[28]

ಒಟ್ಟಾರೆಯಾಗಿ ಗ್ರಾಮ ಪಂಚಾಯತಿವಾರು ಸಂದರ್ಶಿಸಿದ ಗ್ರಾಮಸ್ಥರ ವಯೋಮಾನದಲ್ಲಿ 26 ರಿಂದ 35 ವರ್ಷ ವಯಸ್ಸಿನವರು ಹೆಚ್ಚು ಕಂಡುಬಂದಿದ್ದು ಈ ಮೇಲಿನ ಅಂಕಿ ಅಂಶಗಳಿಂದ ತಿಳಿದುಬರುತ್ತದೆ.

ಗ್ರಾಮ ಪಂಚಾಯತಿವಾರು, ಸಂದರ್ಶಿತವಾರು, ಸಂದರ್ಶಿತ ಗ್ರಾಮಸ್ಥರ ವಯೋಮಾನ ಸಮೀಕ್ಷೆ ಮಾಡಿದಾಗ ಅಂದರೆ ಎಂ,ಕೆ.ಹಟ್ಟಿ ಗ್ರಾಮ ಪಂಚಾಯತಿಯ ಒಟ್ಟು 50 ಸಂದರ್ಶಿತ

ಗ್ರಾಮಸ್ಥರಲ್ಲಿ ಪುರುಷರು 30(60.0%) ಮತ್ತು ಮಹಿಳೆಯರು 20(40.0%) ಇರುವುದನ್ನು ಕಾಣಬಹುದು.

ಒಟ್ಟು 50 ಸದಸ್ಯರಲ್ಲಿ ಅಂದರೆ 18 ರಿಂದ 25 ವರ್ಷ ವಯಸ್ಸಿನವರಲ್ಲಿ ಪುರುಷರು 3(6.0%) ಮತ್ತು ಮಹಿಳೆಯರು 3(6.0%)ರಷ್ಟು ಒಟ್ಟು 6 ಗ್ರಾಮಸ್ಥರು ಒಳಗೊಂಡಿದ್ದು, 26 ರಿಂದ 35 ವರ್ಷ ವಯಸ್ಸಿನವರಲ್ಲಿ ಒಟ್ಟು 16(32.0%) ಗ್ರಾಮಸ್ಥರು ಇದ್ದು, ಅಂದರೆ ಪುರುಷರು 9(18.0%) ಮತ್ತು ಮಹಿಳೆಯರು 7(14.0%)ರಷ್ಟು ಒಳಗೊಂಡಿದ್ದು, ಅದರಲ್ಲಿ ಪುರುಷರು 12(24.0%) ಮತ್ತು ಮಹಿಳೆಯರು 11(22.0%) ಸಂದರ್ಶಿತ ಗ್ರಾಮಸ್ಥರು ಒಳಗೊಂಡಿದ್ದು, 46 ರಿಂದ 55 ವರ್ಷ ವಯಸ್ಸಿನವರಲ್ಲಿ ಒಟ್ಟು 6(12.0%)ರಷ್ಟು ಒಳಗೊಂಡಿದ್ದು, ಅದರಲ್ಲಿ ಪುರುಷರು 4(8.0%) ಮತ್ತು ಮಹಿಳೆಯರು 2(4.0%)ರಷ್ಟು ಗ್ರಾಮಸ್ಥರ ಸಂದರ್ಶಿತರನ್ನು ಒಳಗೊಂಡಿರುತ್ತದೆ. ಹಾಗೆಯೇ 56 ವರ್ಷಕ್ಕಿಂತ ಮೇಲ್ಪಟ್ಟ ಸಂದರ್ಶಿತರ ಗ್ರಾಮಸ್ಥರು ಒಟ್ಟು 2(4.0%) ಅದರಲ್ಲಿ ಪುರುಷರು 2(4.0%) ಮತ್ತು ಮಹಿಳೆಯರು ಯಾವುದೇ ಸಂದರ್ಶನದಲ್ಲಿ ಭಾಗವಹಿಸಿರುವುದಿಲ್ಲ.[29]

ಒಟ್ಟಾರೆಯಾಗಿ ಗ್ರಾಮ ಪಂಚಾಯತಿವಾರು ಸಂದರ್ಶಿಸಿದ ಗ್ರಾಮಸ್ಥರ ವಯೋಮಾನದಲ್ಲಿ 36 ರಿಂದ 45 ವರ್ಷ ವಯಸ್ಸಿನವರು ಹೆಚ್ಚಾಗಿ ಸಂದರ್ಶನದಲ್ಲಿ ಭಾಗವಹಿಸಿರುತ್ತಾರೆ. 56 ಕ್ಕಿಂತ ಮೇಲ್ಪಟ್ಟ ವಯೋಮಾನದವರು ಕಡಿಮೆ ಸಂಖ್ಯೆಯಲ್ಲಿ ಸಂದರ್ಶನದಲ್ಲಿ ಭಾಗವಹಿಸುತ್ತಾರೆ ಎಂದು ಈ ಮೇಲಿನ ಅಂಕಿ ಅಂಶಗಳಿಂದ ತಿಳಿದುಬರುತ್ತದೆ.

ಬಬ್ಬೂರು ಗ್ರಾಮ ಪಂಚಾಯತಿ ಸದಸ್ಯರ ಜಾತಿವಾರು ಸಮೀಕ್ಷೆ ಮಾಡಿದಾಗ ಒಟ್ಟು 15 ಸ್ಥಾಯಿಸಮಿತಿಯ ಸದಸ್ಯರಲ್ಲಿ ಪುರುಷರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ಪುರುಷರು 8 ಸದಸ್ಯರು (53.3%) ಹಾಗೂ ಮಹಿಳೆಯರು 07(46.7%) ಸದಸ್ಯರು ಇರುವುದನ್ನು ಕಾಣಬಹುದು.

ಗ್ರಾಮ ಪಂಚಾಯತಿವಾರು ಸದಸ್ಯರಲ್ಲಿ ಹೆಚ್ಚಾಗಿ ಹಿಂದುಳಿದ ಜಾತಿಗೆ ಸೇರಿದ ಸದಸ್ಯರು ಇದ್ದಾರೆ. ಒಟ್ಟು 15(100%) ಸದಸ್ಯರುಗಳಲ್ಲಿ ಅಂದರೆ 05(33.3%) ಪ.ಜಾ.ಯವರಿದ್ದರೆ ಇದರಲ್ಲಿ ಪುರುಷರು 3(20.0%) ಹಾಗೂ ಮಹಿಳಾ ಸದಸ್ಯರು 2(13.3%) ಇರುತ್ತಾರೆ. ಹಾಗೆಯೇ ಪರಿಶಿಷ್ಟ ಪಂಗಡದ 1(6.7%) ಸದಸ್ಯರು ಇರುವುದನ್ನು ಕಾಣಬಹುದು. ಇವರಲ್ಲಿ ಪುರುಷ ಸದಸ್ಯರಿಲ್ಲದೆ ಹಾಗೂ ಮಹಿಳಾ ಸದಸ್ಯರು 1(6.7%) ಇರುವುದನ್ನು ಕಾಣುತ್ತೇವೆ. ಮುಂದುವರಿದು ಹಿಂದುಳಿದ ವರ್ಗಕ್ಕೆ ಸೇರಿದ ಪುರುಷ ಸದಸ್ಯರಲ್ಲಿ 3(20.0%) ಮತ್ತು ಮಹಿಳೆ ಸದಸ್ಯರು 4(26.7%) ಇರುವುದನ್ನು ಕಾಣುತ್ತೇವೆ. ಹಾಗೂ ಸಾಮಾನ್ಯ ವರ್ಗಕ್ಕೆ ಸೇರಿದ ಪುರುಷ ಮತ್ತು ಮಹಿಳೆಯರು ಇಲ್ಲದೆ ಇರುವುದು ಕಂಡುಬರುತ್ತದೆ.[30]

ಒಟ್ಟಾರೆಯಾಗಿ ಗ್ರಾಮ ಪಂಚಾಯತಿಯ ಸದಸ್ಯರ ಜಾತಿವಾರು ವಿವರಗಳನ್ನು ನೋಡಿದಾಗ ಹಿಂದುಳಿದ ಜಾತಿಗೆ ಸೇರಿದ 7(46.7%) ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ಹಾಗೆಯೇ ಇಡೀ ಗ್ರಾಮ ಪಂಚಾಯತಿಯಲ್ಲಿ ಎಲ್ಲಾ ಜಾತಿಗಳಿಗೆ ಜನಸಂಖ್ಯೆಗೆ ಅನುಗುಣವಾಗಿ ಸಮಾನ ಸ್ಥಾನಮಾನಗಳನ್ನು ನೀಡಲಾಗಿದೆ ಎಂದು ಈ ಮೇಲಿನ ಅಂಕಿ ಅಂಶಗಳು ತಿಳಿಸುತ್ತವೆ.

ಗೌಡನಹಳ್ಳಿ ಗ್ರಾಮ ಪಂಚಾಯತಿ ಸದಸ್ಯರುಗಳು ಜಾತಿವಾರು ಸಮೀಕ್ಷೆ ಮಾಡಿದಾಗ ಒಟ್ಟು 15 ಸದಸ್ಯರಲ್ಲಿ ಪುರುಷರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. 8 ಪುರುಷ ಸದಸ್ಯರು (53.3%) ಹಾಗೂ 7 ಮಹಿಳಾ ಸದಸ್ಯರು (50.0%) ಇರುವುದನ್ನು ಕಾಣಬಹುದು.

ಗೌಡನಹಳ್ಳಿ ಗ್ರಾಮ ಪಂಚಾಯತಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಸದಸ್ಯರು ಇದ್ದಾರೆ. ಒಟ್ಟು 15 ಸದಸ್ಯರಲ್ಲಿ ಇವರ ಪ್ರಮಾಣ 06(40.0%)ರಷ್ಟಿದೆ. ಇವರಲ್ಲಿ ಪುರುಷ ಸದಸ್ಯರು 3(20.0%) ಹಾಗೂ ಮಹಿಳಾ ಸದಸ್ಯರು 3(20.0%) ಇರುತ್ತಾರೆ. ಹಾಗೆಯೇ ಪರಿಶಿಷ್ಟ ಪಂಗಡದ 4(26.7%) ಸದಸ್ಯರು ಇರುವುದನ್ನು ಕಾಣಬಹುದು. ಇವರಲ್ಲಿ ಪುರುಷ ಸದಸ್ಯರು 2(13.3%) ಹಾಗೂ ಮಹಿಳಾ ಸದಸ್ಯರು 2(13.3%) ಇರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ ಹಿಂದುಳಿದ ವರ್ಗಕ್ಕೆ ಸೇರಿದ ಸದಸ್ಯರು 03(20.0%) ಇರುವುದನ್ನು ಕಾಣುತ್ತೇವೆ. ಅಂದರೆ ಇದರಲ್ಲಿ ಪುರುಷರು 2(13.3%) ಮತ್ತು ಮಹಿಳಾ ಸದಸ್ಯರು 1(6.7%) ಇರುವುದನ್ನು ಕಾಣುತ್ತೇವೆ. ಮುಂದುವರಿದು ಸಾಮಾನ್ಯ ವರ್ಗಕ್ಕೆ ಸೇರಿದ ಸದಸ್ಯರ ಪ್ರಮಾಣ 02(13.3%)ರಷ್ಟಿದೆ, ಅದರಲ್ಲಿ ಪುರುಷ ಸದಸ್ಯರು 1(6.7%) ಮತ್ತು 1(6.7%) ಮಹಿಳಾ ಸದಸ್ಯರು ಇರುವುದನ್ನು ಕಾಣುತ್ತೇವೆ.[31]

ಒಟ್ಟಾರೆಯಾಗಿ ಗೌಡನಹಳ್ಳಿ ಗ್ರಾಮ ಪಂಚಾಯತಿ ಸದಸ್ಯರಲ್ಲಿ ಜಾತಿವಾರು ವಿವರಗಳನ್ನು ನೋಡಿದಾಗ ಪರಿಶಿಷ್ಟ ಜಾತಿ 6(40.0%)ರಷ್ಟಿದ್ದು, ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ಹಾಗೆಯೇ ಇಡೀ ಗ್ರಾಮ ಪಂಚಾಯತಿಯಲ್ಲಿ ಎಲ್ಲಾ ಜಾತಿಗಳ ಜನಸಂಖ್ಯೆಗೆ ಅನುಗುಣವಾಗಿ ಸಮಾನ ಸ್ಥಾನಮಾನಗಳನ್ನು ನೀಡಲಾಗಿದೆ ಎಂದು ಈ ಮೇಲಿನ ಅಂಕಿ ಅಂಶಗಳಿಂದ ತಿಳಿಯಬಹುದಾಗಿದೆ.

ಹಾನಗಲ್ ಗ್ರಾಮ ಪಂಚಾಯತಿ ಸದಸ್ಯರುಗಳ ಜಾತಿವಾರು ಸಮೀಕ್ಷೆ ಮಾಡಿದಾಗ ಒಟ್ಟು 16 ಸದಸ್ಯರಲ್ಲಿ ಪುರುಷರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ಪುರುಷರು 10 ಸದಸ್ಯರು (02.5%) ಹಾಗೂ ಮಹಿಳಾ 6(37.5) ಸದಸ್ಯರು ಇರುವುದನ್ನು ಕಾಣಬಹುದು.

ಹಾನಗಲ್ ಗ್ರಾಮ ಪಂಚಾಯತಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿದ ಸದಸ್ಯರು ಇದ್ದಾರೆ. ಒಟ್ಟು 16 ಸದಸ್ಯರು ಇದ್ದು, ಅದರಲ್ಲಿ ಪರಿಶಿಷ್ಟ ಪಂಗಡಕ್ಕೆ 9(56.3%)

ಇದ್ದಾರೆ, ಅಂದರೆ ಪುರುಷ 6(37.5%) ಮತ್ತು ಮಹಿಳಾ 3(18.8%) ಸದಸ್ಯರು ಇದ್ದಾರೆ. ಹಾಗೆಯೇ ಪರಿಶಿಷ್ಟ ಜಾತಿಗೆ ಸೇರಿದವರಲ್ಲಿ ಒಟ್ಟು 2(12.5%) ಇದ್ದು, ಅದರಲ್ಲಿ ಪುರುಷರು 1(6.6%) ಇದ್ದು ಮಹಿಳೆಯರು 1(6.6%) ಸದಸ್ಯರು ಇದ್ದಾರೆ. ಮುಂದುವರಿದು ಹಿಂದುಳಿದ ವರ್ಗಕ್ಕೆ ಸೇರಿದ ಸದಸ್ಯರು 2(12.5%) ಇದ್ದು, ಇದರಲ್ಲಿ ಪುರುಷ 1(6.6%) ಮತ್ತು ಮಹಿಳಾ ಸದಸ್ಯರು 1(6.6%) ಇರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ ಸಾಮಾನ್ಯವರ್ಗಕ್ಕೆ ಸೇರಿದ ಸದಸ್ಯರಲ್ಲಿ 3(18.8%) ಇರುವುದನ್ನು ನೋಡುತ್ತಾ ಅದರಲ್ಲಿ ಪುರುಷ 2(12.5%) ಸದಸ್ಯರು ಮತ್ತು ಮಹಿಳಾ ಸದಸ್ಯರು 1(6.6%)ರಷ್ಟು ಇರುವುದನ್ನು ಕಾಣುತ್ತೇವೆ.[32]

ಒಟ್ಟಾರೆಯಾಗಿ ಹಾನಗಲ್ ಗ್ರಾಮ ಪಂಚಾಯತಿ ಸದಸ್ಯರಲ್ಲಿ ಜಾತಿವಾರು ವಿವರಗಳನ್ನು ನೋಡಿದಾಗ ಪರಿಶಿಷ್ಟ ಪಂಗಡವು 9(56.3%) ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ಹಾಗೆಯೇ ಇಡೀ ಗ್ರಾಮ ಪಂಚಾಯಿತಿಯಲ್ಲಿ ಎಲ್ಲಾ ಜಾತಿಯ ಜನಸಂಖ್ಯೆಗೆ ಅನುಗುಣವಾಗಿ ಸಮಾನ ಸ್ಥಾನಮಾನಗಳನ್ನು ನೀಡಲಾಗಿದೆ ಎಂದು ಈ ಮೇಲಿನ ಅಂಕಿ ಅಂಶಗಳಿಂದ ತಿಳಿಯಬಹುದಾಗಿದೆ.

ರಾಯಪುರ ಗ್ರಾಮ ಪಂಚಾಯತಿ ಸದಸ್ಯರ ಜಾತಿವಾರು ಸಮೀಕ್ಷೆ ಮಾಡಿದಾಗ ಒಟ್ಟು 16 ಸದಸ್ಯರಲ್ಲಿ ಪುರುಷರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ಪುರುಷರು 10(62.5%) ಹಾಗೂ ಮಹಿಳೆಯರು 6(37.5%) ಸದಸ್ಯರು ಇರುವುದನ್ನು ಕಾಣಬಹುದು.

ರಾಯಪುರ ಗ್ರಾಮ ಪಂಚಾಯತಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿದ ಸದಸ್ಯರು ಇದ್ದಾರೆ. ಒಟ್ಟು 16 ಸದಸ್ಯರಲ್ಲಿ ಪರಿಶಿಷ್ಟ ಪಂಗಡದ 09(56.3%) ಸದಸ್ಯರು ಇದ್ದು ಅದರಲ್ಲಿ ಪುರುಷ 6(37.5%) ಮತ್ತು ಮಹಿಳಾ ಸದಸ್ಯರು 3(18.8%) ಇದ್ದು, ಪರಿಶಿಷ್ಟ ಜಾತಿಗೆ ಸೇರಿದವರಲ್ಲಿ ಒಟ್ಟು 4(25.0%)ಇದ್ದು, ಅದರಲ್ಲಿ 2(12.5%) ಮತ್ತು ಮಹಿಳಾ ಸದಸ್ಯರು 2(12.5%) ಇರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ ಹಿಂದುಳಿದ ವರ್ಗಕ್ಕೆ ಸೇರಿದವರಲ್ಲಿ ಒಟ್ಟು 01(6.6%) ಇದ್ದು, ಅದರಲ್ಲಿ ಪುರುಷರು ಯಾವ ಸದಸ್ಯರು ಇಲ್ಲದೆ, ಮಹಿಳೆಯರು, 1(6.6%) ಇರುವುದನ್ನು ಕಾಣುತ್ತೇವೆ. ಅಂದರೆ ಸಾಮಾನ್ಯ ವರ್ಗಕ್ಕೆ ಸೇರಿದವರಲ್ಲಿ ಒಟ್ಟು 02(12.5) ಮತ್ತು ಮಹಿಳಾ ಸದಸ್ಯರು ಇಲ್ಲದೆ ಸಾಮಾನ್ಯ ವರ್ಗವು ತನ್ನ ಆಡಳಿತದಲ್ಲಿ ಸಕ್ರಿಯವಾಗಿ ಪಾಲ್ಗೊಂಡಿರುವುದು ಕಾಣಬಹುದು.[33]

ಒಟ್ಟಾರೆಯಾಗಿ ರಾಯಪುರ ಗ್ರಾಮ ಪಂಚಾಯತಿಯ ಸದಸ್ಯರಲ್ಲಿ ಜಾತಿವಾರು ವಿವರಗಳನ್ನು ನೋಡಿದಾಗ, ಪರಿಶಿಷ್ಟ ಪಂಗಡದವರು 09(56.3%)ರಷ್ಟು ಸದಸ್ಯರು ಇದ್ದು, ಹೆಚ್ಚಿನ ಸಂಖ್ಯೆಯಲ್ಲಿ ರುವುದನ್ನು ಕಾಣಬಹುದು. ಹಾಗೆಯೇ ಇಡೀ ಗ್ರಾಮ ಪಂಚಾಯತಿಯಲ್ಲಿ ಎಲ್ಲಾ ಜಾತಿಯ

ಜನಸಂಖ್ಯೆಗೆ ಅನುಗುಣವಾಗಿ ಸಮಾನ ಸ್ಥಾನಮಾನಗಳನ್ನು ನೀಡಲಾಗಿದೆ ಎಂದು ಈ ಮೇಲಿನ ಅಂಕಿ ಅಂಶಗಳಿಂದ ತಿಳಿಯಬಹುದಾಗಿದೆ.

ಮದಕರಿಪುರ ಗ್ರಾಮ ಪಂಚಾಯತಿ ಸದಸ್ಯರ ಜಾತಿವಾರು ಸಮೀಕ್ಷೆ ಮಾಡಿದಾಗ ಒಟ್ಟು 15 ಸದಸ್ಯರಲ್ಲಿ, ಪುರುಷರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ಪುರುಷ ಸದಸ್ಯರು 08(53.3%) ಹಾಗೂ ಮಹಿಳಾ 07(46.7%) ಸದಸ್ಯರು ಇರುವುದನ್ನು ಕಾಣಬಹುದು.

ಮದಕರಿಪುರ ಗ್ರಾಮ ಪಂಚಾಯತಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಸದಸ್ಯರು ಇದ್ದಾರೆ. ಒಟ್ಟು 15 ಸದಸ್ಯರು ಇದ್ದು, ಅವರಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಒಟ್ಟು 5(33.3%) ಸದಸ್ಯರು ಇದ್ದು, ಅದರಲ್ಲಿ ಪುರುಷ ಸದಸ್ಯರು 2(13.3%) ಮತ್ತು ಮಹಿಳಾ 3(20.0%) ಸದಸ್ಯರು ಇದ್ದಾರೆ. ಹಾಗೆಯೇ ಪರಿಶಿಷ್ಟ ಪಂಗಡಕ್ಕೆ ಸೇರಿದವರಲ್ಲಿ ಒಟ್ಟು 2(13.3%) ಇದ್ದು, ಅವರಲ್ಲಿ ಪುರುಷರು 1(6.7%) ಮತ್ತು ಮಹಿಳಾ ಸದಸ್ಯರು 1(6.7%) ಇದ್ದಾರೆ. ಅದೇ ರೀತಿಯಲ್ಲಿ ಹಿಂದುಳಿದ ವರ್ಗಕ್ಕೆ ಸೇರಿದ ಸದಸ್ಯರು 5(33.3%) ಇರುವುದನ್ನು ಕಾಣುತ್ತೇವೆ. ಅವರಲ್ಲಿ ಪುರುಷ ಸದಸ್ಯರು 3(20.0%) ಮತ್ತು ಮಹಿಳಾ ಸದಸ್ಯರು 2(13.3%) ಇರುವುದನ್ನು ಕಾಣುತ್ತೇವೆ. ಹಾಗೆಯೇ ಸಾಮಾನ್ಯ ವರ್ಗಕ್ಕೆ ಸೇರಿದ ಸದಸ್ಯರಲ್ಲಿ 3(20.0%) ಇರುವುದನ್ನು ನೋಡುತ್ತಾ, ಅದರಲ್ಲಿ ಪುರುಷರು 2(13.3%) ಮತ್ತು ಮಹಿಳಾ ಸದಸ್ಯರು 1(6.7%)ರಷ್ಟು ಇರುವುದನ್ನು ಕಾಣುತ್ತೇವೆ.[34]

ಒಟ್ಟಾರೆಯಾಗಿ ಮದಕರಿಪುರ, ಗ್ರಾಮ ಪಂಚಾಯತಿಯ ಸದಸ್ಯರಲ್ಲಿ ಜಾತಿವಾರು ವಿವರಗಳನ್ನು ನೋಡಿದಾಗ, ಪರಿಶಿಷ್ಟ ಜಾತಿಯು 5(33.3%) ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿ ರುವುದನ್ನು ಕಾಣಬಹುದು. ಹಾಗೆಯೇ ಇಡೀ ಗ್ರಾಮ ಪಂಚಾಯತಿಯಲ್ಲಿ ಎಲ್ಲಾ ಜಾತಿಯ ಜನಸಂಖ್ಯೆಗೆ ಅನುಗುಣವಾಗಿ ಸಮಾನ ಸ್ಥಾನಮಾನಗಳನ್ನು ನೀಡಲಾಗಿದೆ ಎಂದು ಈ ಮೇಲಿನ ಅಂಕಿ ಅಂಶಗಳಿಂದ ತಿಳಿಯಬಹುದಾಗಿದೆ.

ಎಂ.ಕೆ.ಹಟ್ಟಿ ಗ್ರಾಮ ಪಂಚಾಯತಿಯ ಸದಸ್ಯರ ಜಾತಿವಾರು ಸಮೀಕ್ಷೆ ಮಾಡಿದಾಗ ಒಟ್ಟು 20 ಸದಸ್ಯರಲ್ಲಿ ಪುರುಷ 11 (55%) ಸದಸ್ಯರು ಹಾಗೂ ಮಹಿಳಾ 09(45.0%) ಸದಸ್ಯರು ಇರುವುದನ್ನು ಕಾಣಬಹುದು.

ಎಂ.ಕೆ.ಹಟ್ಟಿ ಗ್ರಾಮ ಪಂಚಾಯತಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಹಿಂದುಳಿದ ವರ್ಗಕ್ಕೆ ಸೇರಿದ ಸದಸ್ಯರು ಇದ್ದಾರೆ. ಒಟ್ಟು 20 ಸದಸ್ಯರು ಇದ್ದು, ಅದರಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಒಟ್ಟು ಸದಸ್ಯರಲ್ಲಿ 4(20.0%) ಪುರುಷ ಸದಸ್ಯರು 2(10.0%) ಹಾಗೂ ಮಹಿಳೆಯರು 2(10.0%) ಇರುವುದನ್ನು ಕಾಣುತ್ತೇವೆ. ಹಾಗೆಯೇ ಪರಿಶಿಷ್ಟ ಪಂಗಡಕ್ಕೆ ಸೇರಿದ ಒಟ್ಟು ಸದಸ್ಯರು 3(15.0%)

ಇದ್ದು, ಅದರಲ್ಲಿ ಪುರುಷರು 1(5.0%) ಸದಸ್ಯರು ಮತ್ತು ಮಹಿಳಾ ಸದಸ್ಯರು 2(10.0%)ರಷ್ಟು ಇದ್ದು, ಹಿಂದುಳಿದ ವರ್ಗಕ್ಕೆ ಸೇರಿದವರಲ್ಲಿ ಒಟ್ಟು 07(35.0%) ಸದಸ್ಯರು ಇದ್ದು, ಅದರಲ್ಲಿ ಪುರುಷರು 4(20.0%) ಇದ್ದು, ಮಹಿಳೆಯರು 3(15.0%) ಸದಸ್ಯರು ಇದ್ದು, ಅದೇ ರೀತಿಯಲ್ಲಿ ಸಾಮಾನ್ಯ ವರ್ಗಕ್ಕೆ ಸೇರಿದವರಲ್ಲಿ ಒಟ್ಟು 6(30.0%) ಎಂಬುದನ್ನು ಕಾಣಬಹುದಾಗಿದೆ. ಅದರಲ್ಲಿ ಪುರುಷರು 4(20.0%)ರಷ್ಟು ಸದಸ್ಯರು ಹಾಗೂ ಮಹಿಳೆ ಸದಸ್ಯರು 2(10.0%)ರಷ್ಟು ಇರುವುದನ್ನು ಕಾಣುತ್ತೇವೆ.[35]

ಒಟ್ಟಾರೆಯಾಗಿ ಎಂ.ಕೆ.ಹಟ್ಟಿ ಗ್ರಾಮ ಪಂಚಾಯತಿ ಸದಸ್ಯರಲ್ಲಿ ಜಾತಿವಾರು ವಿವರಗಳನ್ನು ನೋಡಿದಾಗ ಹಿಂದುಳಿದ ವರ್ಗವು 07(35.0%) ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ಹಾಗೆಯೇ ಇಡೀ ಗ್ರಾಮ ಪಂಚಾಯತಿಯಲ್ಲಿ ಎಲ್ಲಾ ಜಾತಿಯ ಜನಸಂಖ್ಯೆಗೆ ಅನುಗುಣವಾಗಿ ಸಮಾನ ಸ್ಥಾನಮಾನಗಳನ್ನು ನೀಡಲಾಗಿದೆ ಎಂದು ಈ ಮೇಲಿನ ಅಂಕಿ ಅಂಶಗಳಿಂದ ತಿಳಿಯಬಹುದಾಗಿದೆ.

ಚಿತ್ರದುರ್ಗ ತಾಲ್ಲೂಕು ಪಂಚಾಯತಿ ಸ್ಥಾಯಿಸಮಿತಿ ಸದಸ್ಯರ ಜಾತಿವಾರು ಸಮೀಕ್ಷೆ ಮಾಡಿದಾಗ ಒಟ್ಟು 27 ಸದಸ್ಯರಲ್ಲಿ ಪುರುಷರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ಪುರುಷ ಸದಸ್ಯರು 17(62.9%) ಹಾಗೂ ಮಹಿಳಾ 10(37.1%) ಸದಸ್ಯರು ಇರುವುದನ್ನು ಕಾಣಬಹುದು.

ಚಿತ್ರದುರ್ಗ ತಾಲ್ಲೂಕು ಪಂಚಾಯತಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಒಟ್ಟು 7(25.9%) ಸದಸ್ಯರು ಇದ್ದು, ಅಂದರೆ ಪುರುಷ ಸ್ಥಾಯಿ ಸಮಿತಿ ಸದಸ್ಯರು 4(14.8%) ಇದ್ದು, ಮತ್ತು ಮಹಿಳೆ 3(11.1%) ಸದಸ್ಯರು ಇದ್ದಾರೆ. ಹಾಗೆಯೇ ಪರಿಶಿಷ್ಟ ಪಂಗಡಕ್ಕೆ ಸೇರಿದವರಲ್ಲಿ ಒಟ್ಟು 5(18.5%) ಸದಸ್ಯರು ಇದ್ದು, ಅದರಲ್ಲಿ ಪುರುಷ 3(11.1%) ಸದಸ್ಯರು ಮತ್ತು ಮಹಿಳಾ ಸದಸ್ಯರು 2(7.4%) ಇರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ ಹಿಂದುಳಿದ ವರ್ಗಕ್ಕೆ ಸೇರಿದ ಒಟ್ಟು ಸ್ಥಾಯಿಸಮಿತಿ ಸದಸ್ಯರಲ್ಲಿ 6(22.2%) ಇದ್ದು, ಅದರಲ್ಲಿ ಪುರುಷರು 3(11.1%) ಮತ್ತು ಮಹಿಳಾ ಸ್ಥಾಯಿಸಮಿತಿ ಸದಸ್ಯರು 3(11.1%) ಇರುವುದನ್ನು ನೋಡಬಹುದು.[36] ಮುಂದುವರಿದು ಸಾಮಾನ್ಯ ವರ್ಗಕ್ಕೆ ಸೇರಿದ ಒಟ್ಟು ಸ್ಥಾಯಿ ಸಮಿತಿ ಸದಸ್ಯರಲ್ಲಿ 6(22.2%) ಇದ್ದು, ಅದರಲ್ಲಿ ಪುರುಷ ಸದಸ್ಯರು 4(14.8%) ಮತ್ತು ಮಹಿಳಾ ಸದಸ್ಯರು 2(7.4%) ಇರುವುದನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಚಿತ್ರದುರ್ಗ ತಾಲ್ಲೂಕು ಪಂಚಾಯತಿ ಸದಸ್ಯರಲ್ಲಿ ಜಾತಿವಾರು ವಿವರಗಳನ್ನು ನೋಡಿದಾಗ ಪರಿಶಿಷ್ಟ ಜಾತಿಯು 7(25.9%) ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು

ಕಾಣಬಹುದು. ಹಾಗೆಯೇ ಇಡೀ ತಾಲ್ಲೂಕು ಪಂಚಾಯತಿಯಲ್ಲಿ ಎಲ್ಲಾ ಜಾತಿಯ ಜನಸಂಖ್ಯೆಗೆ ಅನುಗುಣವಾಗಿ ಸಮಾನ ಸ್ಥಾನಮಾನಗಳನ್ನು ನೀಡಲಾಗಿದೆ ಎಂದು ಈ ಮೇಲಿನ ಅಂಕಿ ಅಂಶಗಳಿಂದ ತಿಳಿಯಬಹುದಾಗಿದೆ.

ಹಿರಿಯೂರು ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರಲ್ಲಿ ಜಾತಿವಾರು ಸಮೀಕ್ಷೆ ಮಾಡಿದ ನಂತರ ಒಟ್ಟು 22(100%) ಸ್ಥಾಯಿ ಸಮಿತಿ ಸದಸ್ಯರಲ್ಲಿ ಪುರುಷ ಸದಸ್ಯರು 13(59.1%) ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ. ಹಾಗೆಯೇ ಮಹಿಳಾ ಸದಸ್ಯರು 9(40.1%) ಕಡಿಮೆ ಸಂಖ್ಯೆಯಲ್ಲಿರುವುದನ್ನು ಕಾಣಬಹುದು.

ಹಿರಿಯೂರು ತಾಲ್ಲೂಕು ಪಂಚಾಯತಿಯಲ್ಲಿ ಹಿಂದುಳಿದ ವರ್ಗದ ಸ್ಥಾಯಿಸಮಿತಿ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ. ಒಟ್ಟು ಸದಸ್ಯರು 22(100%) ಇದ್ದು, ಅದರಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಒಟ್ಟು ಸದಸ್ಯರು 6(27.3%) ಇದ್ದು, ಅದರಲ್ಲಿ ಪುರುಷ ಸದಸ್ಯರು 4(18.2%) ಇದ್ದು, ಮಹಿಳಾ ಸದಸ್ಯರು 2(9.1%) ಇರುವುದನ್ನು ಕಾಣುತ್ತೇವೆ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಒಟ್ಟು ಸದಸ್ಯರು 3(13.7%) ಇದ್ದು, ಅದರಲ್ಲಿ ಪುರುಷ ಸದಸ್ಯರು 1(4.5%) ಇದ್ದು, ಮಹಿಳಾ ಸದಸ್ಯರು 2(9.1%) ಇರುವುದನ್ನು ಕಾಣುತ್ತೇವೆ. ಹಾಗೆಯೇ ಹಿಂದುಳಿದ ವರ್ಗದ ಒಟ್ಟು ಸದಸ್ಯರಲ್ಲಿ 12(54.5%) ಇದ್ದು, ಅದರಲ್ಲಿ ಪುರುಷರು 7(31.8%) ಇದ್ದು, ಮಹಿಳಾ ಸದಸ್ಯರು 5(22.7%) ಇದ್ದಾರೆ. ಅದೇ ರೀತಿಯಲ್ಲಿ ಸಾಮಾನ್ಯ ವರ್ಗಕ್ಕೆ ಸೇರಿದ ಒಟ್ಟು ಸದಸ್ಯರಲ್ಲಿ 1(4.5%) ಇದ್ದು, ಅಂದರೆ ಪುರುಷ ಸದಸ್ಯರು 1(4.5%) ಮಹಿಳಾ ಸದಸ್ಯರ ಭಾಗವಹಿಸುವಿಕೆಯು ಅನುಪಸ್ಥಿತಿಯಿರುವುದನ್ನು ಕಾಣುತ್ತೇವೆ.[37]

ಒಟ್ಟಾರೆಯಾಗಿ ಹಿರಿಯೂರು ತಾಲ್ಲೂಕು ಪಂಚಾಯತಿ ಸದಸ್ಯರಲ್ಲಿ ಜಾತಿವಾರು ವಿವರಗಳನ್ನು ನೋಡಿದಾಗ ಹಿಂದುಳಿದ ವರ್ಗಕ್ಕೆ ಸೇರಿದ ಸದಸ್ಯರ ಸಂಖ್ಯೆಯು 12(54.5%) ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ಹಾಗೆಯೇ ಇಡೀ ತಾಲ್ಲೂಕು ಪಂಚಾಯತಿಯಲ್ಲಿ ಎಲ್ಲಾ ಜಾತಿಯ ಜನಸಂಖ್ಯೆಗೆ ಅನುಗುಣವಾಗಿ ಸಮಾನ ಸ್ಥಾನಮಾನಗಳನ್ನು ನೀಡಲಾಗಿದೆ ಎಂದು ಈ ಮೇಲಿನ ಅಂಕಿ ಅಂಶಗಳಿಂದ ತಿಳಿಯಬಹುದಾಗಿದೆ.

ಮೊಳಕಾಲ್ಮೂರು ತಾಲ್ಲೂಕು ಪಂಚಾಯತಿ ಸ್ಥಾಯಿಸಮಿತಿ ಸದಸ್ಯರ ಜಾತಿವಾರು ಸಮೀಕ್ಷೆ ಮಾಡಿದಾಗ ಒಟ್ಟು 12(100%) ಪುರುಷ ಸದಸ್ಯರು 6(50.0%) ಹಾಗೆಯೇ ಮಹಿಳಾ ಸ್ಥಾಯಿಸಮಿತಿ ಸದಸ್ಯರು 6(50.0%) ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ.

ಮೊಳಕಾಲ್ಮೂರು ತಾಲ್ಲೂಕು ಪಂಚಾಯತಿಯಲ್ಲಿ ಪರಿಶಿಷ್ಟ ಪಂಗಡದ ಸ್ಥಾಯಿಸಮಿತಿ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ. ಒಟ್ಟು ಸದಸ್ಯರು 12(100%) ಇದ್ದು,

ಅದರಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಒಟ್ಟು ಸದಸ್ಯರು 2(16.6%) ಇದ್ದು, ಅದರಲ್ಲಿ ಪುರುಷ ಸದಸ್ಯರು 1(8.3%) ಇದ್ದು, ಮಹಿಳಾ ಸದಸ್ಯರು 1(8.3%) ಇರುವುದನ್ನು ಕಾಣುತ್ತೇವೆ. ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಒಟ್ಟು ಸದಸ್ಯರು 6(50.0%) ಇದ್ದು, ಅದರಲ್ಲಿ ಪುರುಷ ಸದಸ್ಯರು 3(25.0%) ಇದ್ದು, ಮಹಿಳಾ ಸದಸ್ಯರು 3(25.0%) ಇರುವುದನ್ನು ಕಾಣುತ್ತೇವೆ. ಹಾಗೆಯೇ ಹಿಂದುಳಿದ ವರ್ಗದ ಒಟ್ಟು ಸದಸ್ಯರಲ್ಲಿ 4(33.3%) ಇದ್ದು, ಅದರಲ್ಲಿ ಪುರುಷ ಸದಸ್ಯರು 2(16.6%) ಇದ್ದು, ಮಹಿಳಾ ಸದಸ್ಯರು 2(16.6%) ಇರುವುದನ್ನು ಕಾಣುತ್ತೇವೆ.[38] ಅದೇ ರೀತಿಯಲ್ಲಿ ಸಾಮಾನ್ಯವರ್ಗಕ್ಕೆ ಯಾವುದೇ ಸದಸ್ಯರು ಭಾಗವಹಿಸುವುದರಲ್ಲಿ ವಿಫಲತೆಯನ್ನು ನೋಡಬಹುದಾಗಿದೆ.

ಒಟ್ಟಾರೆಯಾಗಿ ಮೊಳಕಾಲ್ಮೂರು ತಾಲ್ಲೂಕು ಪಂಚಾಯತಿ ಸದಸ್ಯರಲ್ಲಿ ಜಾತಿವಾರು ವಿವರಗಳನ್ನು ನೋಡಿದಾಗ ಪರಿಶಿಷ್ಟ ಪಂಗಡಕ್ಕೆ ಸೇರಿದ ಸ್ಥಾಯಿಸಮಿತಿ ಸದಸ್ಯರು 6(50.0%) ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ. ಇಡೀ ತಾಲ್ಲೂಕು ಪಂಚಾಯತಿಯಲ್ಲಿ ಎಲ್ಲಾ ಜಾತಿಯ ಜನಸಂಖ್ಯೆಗೆ ಅನುಗುಣವಾಗಿ ಸಮಾನ ಸ್ಥಾನಮಾನಗಳನ್ನು ನೀಡಲಾಗದೆ. ಸಾಮಾನ್ಯ ವರ್ಗದಲ್ಲಿ ಯಾವುದೇ ಸದಸ್ಯರು ಇಲ್ಲದಿರುವುದನ್ನು ಈ ಮೇಲಿನ ಅಂಕಿ ಅಂಶಗಳಿಂದ ತಿಳಿಯಬಹುದಾಗಿದೆ.

ತಾಲ್ಲೂಕು ಪಂಚಾಯತಿವಾರು ಸ್ಥಾಯಿಸಮಿತಿ ಸದಸ್ಯರ ವಿದ್ಯಾಭ್ಯಾಸದ ವಿವರವನ್ನು ನೋಡಬಹುದು. ಚಿತ್ರದುರ್ಗ ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ಒಟ್ಟು 27 ಸದಸ್ಯರಲ್ಲಿ ಅನಕ್ಷರಸ್ಥರು, 1(3.7%) ಪುರುಷ ಹಾಗೂ 2(7.4%) ಮಹಿಳಾ ಸದಸ್ಯರು ಇರುತ್ತಾರೆ. ಪ್ರಾಥಮಿಕ ಶಿಕ್ಷಣ ಪಡೆದಂತಹ 3(11.11%) ಪುರುಷರು ಹಾಗೂ 5(18.51%) ಮಹಿಳಾ ಸದಸ್ಯರು ಇರುವುದನ್ನು ಕಾಣಬಹುದು. ಪ್ರೌಢ ಶಾಲಾ ಶಿಕ್ಷಣವನ್ನು ಪಡೆದಂತಹ 3(11.11%) ಪುರುಷ ಸದಸ್ಯರನ್ನು ಕಾಣಬಹುದು. ಪದವಿಪೂರ್ವ ಶಿಕ್ಷಣವನ್ನು ಪಡೆದಂತಹ 6(22.22%) ಪುರುಷರು ಹಾಗೂ 1(3.7%) ಮಹಿಳಾ ಸದಸ್ಯರನ್ನು ಕಾಣುತ್ತೇವೆ. ಪದವಿ ಶಿಕ್ಷಣ ಪಡೆದಂತಹ 4(14.81%) ಪುರುಷರು ಹಾಗೂ 2(7.4%) ಮಹಿಳಾ ಸದಸ್ಯರನ್ನು ಕಾಣಬಹುದು. ಹಾಗೆಯೇ ಸ್ನಾತಕೋತ್ತರ ಪದವಿ ಶಿಕ್ಷಣ ಪಡೆದಂತಹ ಯಾವ ಸದಸ್ಯರು ಕಾಣಸಿಗುವುದಿಲ್ಲ.[39]

ಒಟ್ಟಾರೆಯಾಗಿ ಚಿತ್ರದುರ್ಗ ತಾಲ್ಲೂಕು ಪಂಚಾಯತಿ ವ್ಯಾಪ್ತಿಯ ಸ್ಥಾಯಿಸಮಿತಿ ಸದಸ್ಯರ ವಿದ್ಯಾಭ್ಯಾಸದ ಅಂಕಿ ಅಂಶಗಳನ್ನು ಅವಲೋಕನ ಮಾಡಿದಾಗ ಉನ್ನತ ಶಿಕ್ಷಣವನ್ನು ಪಡೆದಿರುವಂತಹ ಸದಸ್ಯರು ಕೆಲವೇ ಸದಸ್ಯರು ಇರುವುದನ್ನು ನಾವು ಕಾಣಬಹುದು.

ಹಿರಿಯೂರು ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ವಿದ್ಯಾಭ್ಯಾಸದ ವಿವರವನ್ನು ವಿಶ್ಲೇಷಣೆ ಮಾಡಿದಾಗ ಒಟ್ಟು 22 ಸದಸ್ಯರನ್ನು ಕಾಣಬಹುದು, ವಿಶೇಷವೆಂದರೆ

ಇಲ್ಲಿನ ಎಲ್ಲಾ ಸದಸ್ಯರು ಶಿಕ್ಷಿತರಾಗಿದ್ದಾರೆ. ಪ್ರಾಥಮಿಕ ಶಿಕ್ಷಣ ಪಡೆದ 5(23.8%) ಸದಸ್ಯರಲ್ಲಿ 2(9.52%) ಪುರುಷರು ಹಾಗೂ 3(12.28%) ಮಹಿಳಾ ಸದಸ್ಯರನ್ನು ಕಾಣಬಹುದು. ಪ್ರೌಢ ಶಿಕ್ಷಣ ಪಡೆದ 5(23.8%) ಸದಸ್ಯರಲ್ಲಿ 2(9.52%) ಪುರುಷರು ಹಾಗೂ 3(14.28%) ಮಹಿಳಾ ಸದಸ್ಯರು ಇರುವುದನ್ನು ಕಾಣುತ್ತೇವೆ. ಪದವಿ ಪೂರ್ವ ಶಿಕ್ಷಣ ಪಡೆದ 6(28.5%) ಸದಸ್ಯರಲ್ಲಿ ಪುರುಷ 6(28.5%) ಸದಸ್ಯರು ಇರುವುದನ್ನು ಕಾಣಬಹುದು. ಸ್ನಾತಕೋತ್ತರ ಪದವಿ ಶಿಕ್ಷಣ ಪಡೆದ 2(9.6%) ಸದಸ್ಯರನ್ನು ಕಾಣಬಹುದು. ಅವರಲ್ಲಿ 1(4.8%) ಪುರುಷ ಸದಸ್ಯ ಹಾಗೂ 1(4.8%) ಮಹಿಳಾ ಸದಸ್ಯರು ಇರುವುದನ್ನು ಕಾಣಬಹುದು.[40]

ಒಟ್ಟಾರೆಯಾಗಿ ಹಿರಿಯೂರು ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ವಿದ್ಯಾಭ್ಯಾಸದ ವಿವರವನ್ನು ಅವಲೋಕನ ಮಾಡಿದಾಗ ಇಲ್ಲಿಯೂ ಸಹ ಉನ್ನತ ಶಿಕ್ಷಣ ಪಡೆದಂತಹ ಸದಸ್ಯರು ಕಡಿಮೆ ಪ್ರಮಾಣದಲ್ಲಿ ಇರುವುದನ್ನು ಕಾಣಬಹುದಾಗಿದೆ.

ಮೊಳಕಲ್ಮೂರು ತಾಲ್ಲೂಕು ಪಂಚಾಯತಿ ಸ್ಥಾಯಿಸಮಿತಿ ಸದಸ್ಯರ ವಿದ್ಯಾಭ್ಯಾಸದ ವಿವರವನ್ನು ಮುಂದಿನಂತೆ ವಿವರಣೆ ಮಾಡಬಹುದಾಗಿದೆ. ಈ ಪಂಚಾಯತಿಯ 12 ಸದಸ್ಯರಲ್ಲಿ ಅನಕ್ಷರಸ್ಥ 3(25%) ಮಹಿಳಾ ಸದಸ್ಯರು ಇರುವುದನ್ನು ಕಾಣುತ್ತೇವೆ. ಪ್ರಾಥಮಿಕ ಶಿಕ್ಷಣ ಪಡೆದ 3(25%) ಸದಸ್ಯರಲ್ಲಿ 1(8.33%) ಪುರುಷರು ಹಾಗೂ 2(16.77%) ಮಹಿಳಾ ಸದಸ್ಯರು ಇರುವುದನ್ನು ಕಾಣುತ್ತೇವೆ. ಪ್ರೌಢ ಶಿಕ್ಷಣ ಪಡೆದ 5(41%) ಸದಸ್ಯರಲ್ಲಿ 4(33.3%) ಪುರುಷರು ಹಾಗೂ 1(8.33%) ಮಹಿಳಾ ಸದಸ್ಯರು ಇರುವುದನ್ನು ಕಾಣುತ್ತೇವೆ. ಹಾಗೆಯೇ ಪದವಿ ಪೂರ್ವ ಹಾಗೂ ಸ್ನಾತಕೋತ್ತರ ಪದವಿ ಪಡೆದ ಯಾವ ಸದಸ್ಯರು ಸಿಗುವುದಿಲ್ಲ. ಪದವಿ ಶಿಕ್ಷಣ ಪಡೆದ 1(8.33%) ಪುರುಷ ಸದಸ್ಯರನ್ನು ನಾವು ಕಾಣಬಹುದಾಗಿದೆ.[41]

ಒಟ್ಟಾರೆಯಾಗಿ ಈ ಎಲ್ಲಾ ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ವಿದ್ಯಾಭ್ಯಾಸದ ವಿವರವನ್ನು ಅವಲೋಕನ ಮಾಡಿದಾಗ ಉನ್ನತ ಶಿಕ್ಷಣ ಪಡೆದ ಸ್ಥಾಯಿ ಸಮಿತಿ ಸದಸ್ಯರ ಸಂಖ್ಯೆ ಕಡಿಮೆ ಇದೆ ಎಂದು ಹೇಳಬಹುದು.

ಚಿತ್ರದುರ್ಗ ಜಿಲ್ಲಾ ಸ್ಥಾಯಿಸಮಿತಿ ಸದಸ್ಯರ ವಿದ್ಯಾಭ್ಯಾಸದ ವಿವರವನ್ನು ಈ ರೀತಿಯಲ್ಲಿ ವಿಶ್ಲೇಷಿಸಬಹುದು. ಚಿತ್ರದುರ್ಗ ಜಿಲ್ಲಾ ಪಂಚಾಯತಿ ಸ್ಥಾಯಿಸಮಿತಿ ಸದಸ್ಯರು ಒಟ್ಟು 34 ಸದಸ್ಯರನ್ನು ಕಾಣಬಹುದು. ಅವರಲ್ಲಿ 21(61.76%) ಪುರುಷರು ಹಾಗೂ 13(38.33%) ಮಹಿಳಾ ಸದಸ್ಯರು ಇರುತ್ತಾರೆ. ಅದರಲ್ಲಿ 2(5.88%) ಮಹಿಳಾ ಸದಸ್ಯರು ಅನಕ್ಷರಸ್ಥರಾಗಿದ್ದಾರೆ. ಪ್ರಾಥಮಿಕ ಶಿಕ್ಷಣ ಪಡೆದ ಯಾವ ಸದಸ್ಯರು ಇಲ್ಲ. ಪ್ರೌಢ ಶಿಕ್ಷಣ ಪಡೆದ 10(29.41%) ಸದಸ್ಯರಲ್ಲಿ 5(14.7%) ಪುರುಷರು ಮತ್ತು 5(14.7%) ಮಹಿಳಾ ಸದಸ್ಯರಿದ್ದಾರೆ. ಪದವಿಪೂರ್ವ ಶಿಕ್ಷಣ

ಪಡೆದ 8(28.52%) ಸದಸ್ಯರಲ್ಲಿ 4(11.76%) ಪುರುಷ ಹಾಗೂ 4(11.76%) ಮಹಿಳಾ ಸದಸ್ಯರು ಇದ್ದಾರೆ. ಪದವಿ ಶಿಕ್ಷಣ ಪಡೆದ 13(38.33%) ಸದಸ್ಯರಲ್ಲಿ 11(32.35%) ಪುರುಷ ಹಾಗೂ 2(5.88%) ಮಹಿಳಾ ಸದಸ್ಯರಿದ್ದಾರೆ. ಸ್ನಾತಕೋತ್ತರ ಪದವಿ ಪಡೆದ 1(2.94%) ಪುರುಷ ಸದಸ್ಯರಿದ್ದಾರೆ.[42]

ಒಟ್ಟಾರೆಯಾಗಿ ಚಿತ್ರದುರ್ಗ ಜಿಲ್ಲಾ ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ವಿದ್ಯಾಭ್ಯಾಸದ ವಿವರವನ್ನು ಅವಲೋಕನ ಮಾಡಿದಾಗ ಉನ್ನತ ಶಿಕ್ಷಣ ಪಡೆದ ಸದಸ್ಯರು ಹೆಚ್ಚಾಗಿರುವುದನ್ನು ಕಾಣಬಹುದು. ಕಡಿಮೆ ಶಿಕ್ಷಣ ಪಡೆದ ಸದಸ್ಯರ ಸಂಖ್ಯೆ ಕಡಿಮೆ ಇರುವುದನ್ನು ಕಾಣುತ್ತೇವೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ ಗ್ರಾಮ ಪಂಚಾಯತಿವಾರು ಸ್ಥಾಯಿಸಮಿತಿ ಸದಸ್ಯರ ಉದ್ಯೋಗದ ವಿವರವನ್ನು ವಿಶ್ಲೇಷಿಸಿದಾಗ ಬಬ್ಬೂರು ಗ್ರಾಮ ಪಂಚಾಯತಿಯಲ್ಲಿ ಒಟ್ಟು 15 ಸ್ಥಾಯಿಸಮಿತಿ ಸದಸ್ಯರಿದ್ದಾರೆ. ಕೂಲಿಯನ್ನು ಉದ್ಯೋಗ ಮಾಡಿಕೊಂಡಿರುವ 3(20%) ಸದಸ್ಯರಿದ್ದಾರೆ. ಅವರಲ್ಲಿ 1(6.6%) ಪುರುಷ ಸದಸ್ಯ ಹಾಗೂ 2(13.3%) ಮಹಿಳಾ ಸದಸ್ಯರಿದ್ದಾರೆ. ಕೃಷಿಯನ್ನು ಉದ್ಯೋಗ ಮಾಡಿಕೊಂಡಿರುವ 10(66.66%) ಸದಸ್ಯರಿದ್ದಾರೆ. ಅವರಲ್ಲಿ 6(40%) ಪುರುಷ ಹಾಗೂ 4(26.66%) ಮಹಿಳಾ ಸದಸ್ಯರಿದ್ದಾರೆ. ಮನೆಗೆಲಸವನ್ನು ಉದ್ಯೋಗವನ್ನಾಗಿ ಮಾಡಿಕೊಂಡಿರುವ 2(13.3%) ಸದಸ್ಯರಿದ್ದಾರೆ. ಅವರಲ್ಲಿ 1(6.6%) ಪುರುಷ ಹಾಗೂ 1(6.6%) ಮಹಿಳಾ ಸದಸ್ಯರಿದ್ದಾರೆ.[43]

ಕೈಗಾರಿಕೆ, ಖಾಸಗಿ, ಹಾಗೂ ಇನ್ನಿತರೆ ಉದ್ಯೋಗವನ್ನು ಮಾಡಿಕೊಂಡಿರುವ ಯಾವ ಸದಸ್ಯರು ಬಬ್ಬೂರು ಗ್ರಾಮ ಪಂಚಾಯತಿಯಲ್ಲಿ ಇರುವುದಿಲ್ಲ. ಒಟ್ಟಾರೆಯಾಗಿ ಬಬ್ಬೂರು ಗ್ರಾಮ ಪಂಚಾಯತಿಯ ಸದಸ್ಯರ ಉದ್ಯೋಗದ ವಿವರವನ್ನು ಅವಲೋಕಿಸಿದಾಗ ಹೆಚ್ಚಿನ ಸಂಖ್ಯೆಯ ಸದಸ್ಯರು ಕೃಷಿಯನ್ನು ತಮ್ಮ ಉದ್ಯೋಗವನ್ನಾಗಿ ಮಾಡಿಕೊಂಡಿರುವುದು ಕಂಡುಬರುತ್ತದೆ. ಉಳಿದಂತೆ ಬೇರೆ ಬೇರೆ ಉದ್ಯೋಗಗಳನ್ನು ಮಾಡುವ ಸದಸ್ಯರ ಸಂಖ್ಯೆ ಕಡಿಮೆ ಪ್ರಮಾಣದಲ್ಲಿರುವುದನ್ನು ಕಾಣಬಹುದು.

ಗೌಡನಹಳ್ಳಿ ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ಉದ್ಯೋಗದ ವಿವರವನ್ನು ಅವಲೋಕಿಸಿದಾಗ ಗೌಡನಹಳ್ಳಿ ಗ್ರಾಮ ಪಂಚಾಯತಿಯಲ್ಲಿ ಒಟ್ಟು 15 ಸ್ಥಾಯಿಸಮಿತಿ ಸದಸ್ಯರಿದ್ದಾರೆ. ಕೂಲಿಯನ್ನು ಉದ್ಯೋಗವನ್ನಾಗಿ ಮಾಡಿಕೊಂಡ ಯಾವ ಸದಸ್ಯರು ಇಲ್ಲ. ಕೃಷಿಯನ್ನು ಉದ್ಯೋಗವನ್ನಾಗಿ ಮಾಡಿಕೊಂಡ 8(53.3%) ಸದಸ್ಯರಿದ್ದಾರೆ. ಅವರಲ್ಲಿ 7(46.66%) ಪರುಷ ಹಾಗೂ 1(6.6%) ಮಹಿಳಾ ಸದಸ್ಯರಿದ್ದಾರೆ. ಮನೆಗೆಲಸವನ್ನು ಉದ್ಯೋಗವನ್ನಾಗಿ ಮಾಡಿಕೊಂಡಿರುವ

6(40%) ಸದಸ್ಯರಿದ್ದಾರೆ. ಅವರಲ್ಲಿ 6(40%) ಸದಸ್ಯರು ಮಹಿಳಾ ಸದಸ್ಯರಾಗಿದ್ದಾರೆ. ಕೈಗಾರಿಕೆಯನ್ನು ಉದ್ಯೋಗವನ್ನಾಗಿ ಮಾಡಿಕೊಂಡ ಯಾವ ಸದಸ್ಯರು ಇಲ್ಲ. ಖಾಸಗಿ ಉದ್ಯೋಗವನ್ನು ಮಾಡಿಕೊಂಡ 1(6.6%) ಮಹಿಳಾ ಸದಸ್ಯರಿದ್ದಾರೆ. ಸ್ವ ಉದ್ಯೋಗ ಮಾಡಿಕೊಂಡಿರುವ 1(6.6%) ಮಹಿಳಾ ಸದಸ್ಯರಿದ್ದಾರೆ.[44]

ಒಟ್ಟಾರೆ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಗೌಡನಹಳ್ಳಿ ಗ್ರಾಮ ಪಂಚಾಯತಿಯಲ್ಲಿ ಕೃಷಿಯನ್ನು ಉದ್ಯೋಗವನ್ನಾಗಿ ಮಾಡಿಕೊಂಡಿರುವ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಉಳಿದಂತೆ ಬೇರೆ ಬೇರೆ ಉದ್ಯೋಗವನ್ನು ಮಾಡುವ ಸದಸ್ಯರು ಕಡಿಮೆ ಸಂಖ್ಯೆಯಲ್ಲಿದ್ದಾರೆ.

ಹಾನಗಲ್ ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿಯಲ್ಲಿ ಒಟ್ಟು 15 ಸ್ಥಾಯಿಸಮಿತಿ ಸದಸ್ಯರಿದ್ದಾರೆ. ಕೂಲಿಯನ್ನು ಉದ್ಯೋಗವನ್ನಾಗಿ ಮಾಡಿಕೊಂಡ ಯಾವ ಸದಸ್ಯರು ಇಲ್ಲ. ಕೃಷಿಯನ್ನು ಉದ್ಯೋಗವನ್ನಾಗಿ ಮಾಡಿಕೊಂಡ 10(62.5%) ಸದಸ್ಯರಿದ್ದಾರೆ. ಅವರಲ್ಲಿ 6(37.5%) ಪುರುಷ ಹಾಗೂ 4(25%) ಮಹಿಳಾ ಸದಸ್ಯರಿದ್ದಾರೆ. ಮನೆಗೆಲಸ ಮಾಡುವ 2(12.5%) ಮಹಿಳಾ ಸದಸ್ಯರಿದ್ದಾರೆ. ಕೈಗಾರಿಕೆಯನ್ನು ಉದ್ಯೋಗವನ್ನಾಗಿ ಮಾಡಿಕೊಂಡಿರುವ 1(6.2%) ಪುರುಷ ಸದಸ್ಯರಿದ್ದಾರೆ.[45]

ಖಾಸಗಿ ಹಾಗೂ ಸ್ವ ಉದ್ಯೋಗಸ್ಥ ಸದಸ್ಯರಾಗಿ ಉದ್ಯೋಗ ಮಾಡುತ್ತಿರುವ ಯಾವ ಸದಸ್ಯರು ಇಲ್ಲ. ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕನ ಮಾಡಿದಾಗ, ಕೃಷಿಯನ್ನು ಉದ್ಯೋಗವನ್ನಾಗಿ ಮಾಡಿಕೊಂಡಿರುವ ಸದಸ್ಯರ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಕಾಣಬಹುದು. ಉಳಿದಂತೆ ಬೇರೆ ಬೇರೆ ಉದ್ಯೋಗಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಸದಸ್ಯರ ಸಂಖ್ಯೆ ಕಡಿಮೆ ಇದೆ ಎಂದು ಹೇಳಬಹುದು.

ರಾಯಪುರ ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿಯಲ್ಲಿ ಒಟ್ಟು 16 ಸ್ಥಾಯಿಸಮಿತಿ ಸದಸ್ಯರಿದ್ದಾರೆ. ಕೂಲಿಯನ್ನು ಉದ್ಯೋಗವನ್ನಾಗಿ ಮಾಡಿಕೊಂಡ 4(25%) ಸದಸ್ಯರಿದ್ದಾರೆ ಅವರಲ್ಲಿ 2(12.5%) ಪುರುಷ ಹಾಗೂ 2(12.5%) ಮಹಿಳಾ ಸದಸ್ಯರಿದ್ದಾರೆ. ಕೃಷಿಯನ್ನು ಉದ್ಯೋಗವನ್ನಾಗಿ ಮಾಡಿಕೊಂಡಿರುವ 10(62.5%) ಸದಸ್ಯರಿದ್ದಾರೆ. ಅವರಲ್ಲಿ 7(43.75%) ಪುರುಷ ಹಾಗೂ 3(18.75%) ಮಹಿಳಾ ಸದಸ್ಯರಿದ್ದಾರೆ. ಮನೆಗೆಲಸವನ್ನು ಉದ್ಯೋಗವನ್ನಾಗಿ ಮಾಡಿಕೊಂಡಿರುವ 1(6.2%) ಮಹಿಳಾ ಸದಸ್ಯರಿದ್ಧಾರೆ.[46]

ಉಳಿದಂತೆ ಕೈಗಾರಿಕೆ, ಖಾಸಗಿ ಹಾಗೂ ಸ್ವ ಉದ್ಯೋಗಸ್ಥ ಸದಸ್ಯರಾಗಿ ಉದ್ಯೋಗ ಮಾಡುತ್ತಿರುವ ಯಾವ ಸದಸ್ಯರು ಇಲ್ಲ. ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ

ರಾಯಪುರ ಗ್ರಾಮ ಪಂಚಾಯತಿಯಲ್ಲಿಯೂ ಸಹ ಕೃಷಿಯನ್ನು ಉದ್ಯೋಗವನ್ನಾಗಿ ಮಾಡಿಕೊಂಡಿರುವ ಸದಸ್ಯರ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಕಾಣಬಹುದು. ಉಳಿದಂತೆ ಬೇರೆ ಬೇರೆ ಉದ್ಯೋಗವನ್ನು ಮಾಡಿಕೊಂಡಿರುವ ಸದಸ್ಯರ ಸಂಖ್ಯೆ ಕಡಿಮೆ ಎಂದು ಹೇಳಬಹುದು.

ಮದಕರಿಪುರ ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿಯಲ್ಲಿ ಒಟ್ಟು 15 ಸದಸ್ಯರಿದ್ದಾರೆ. ಕೂಲಿಯನ್ನು ಉದ್ಯೋಗವನ್ನಾಗಿ ಮಾಡಿಕೊಂಡ 1(6.6%) ಪುರುಷ ಸದಸ್ಯ ಮಾತ್ರ ಇರುವುದನ್ನು ಕಾಣಬಹುದು. ಕೃಷಿಯನ್ನು ಉದ್ಯೋಗವನ್ನಾಗಿ ಮಾಡಿಕೊಂಡ 6(40%) ಸದಸ್ಯರಿದ್ದಾರೆ. ಅವರಲ್ಲಿ 5(33.3%) ಪರುಷ ಹಾಗೂ 1(6.6%) ಮಹಿಳಾ ಸದಸ್ಯರಿದ್ದಾರೆ. ಮನೆಗೆಲಸವನ್ನು ಉದ್ಯೋಗವನ್ನಾಗಿ ಮಾಡಿಕೊಂಡಿರುವ 6(40%) ಮಹಿಳಾ ಸದಸ್ಯರನ್ನು ಕಾಣಬಹುದು. ಕೈಗಾರಿಕೆಯನ್ನು ಉದ್ಯೋಗವನ್ನಾಗಿ ಮಾಡಿಕೊಂಡ 1(6.2%) ಪುರುಷ ಸದಸ್ಯರಿದ್ದಾರೆ. ಖಾಸಗಿ ಉದ್ಯೋಗವನ್ನು ಮಾಡಿಕೊಂಡ 1(6.6%) ಮಹಿಳಾ ಸದಸ್ಯರಿದ್ದಾರೆ. ಸ್ವ ಉದ್ಯೋಗವನ್ನು ಮಾಡಿಕೊಂಡಿರುವ 1(6.6%) ಮಹಿಳಾ ಸದಸ್ಯರಿದ್ದಾರೆ. ಒಟ್ಟಾರೆ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಕೃಷಿ ಹಾಗೂ ಮನೆಗೆಲಸವನ್ನು ಉದ್ಯೋಗವನ್ನಾಗಿ ಮಾಡಿಕೊಂಡಿರುವ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ಉಳಿದಂತೆ ಬೇರೆ ಬೇರೆ ಉದ್ಯೋಗಗಳನ್ನು ಮಾಡಿ ಕೊಂಡಿರುವ ಸದಸ್ಯರ ಸಂಖ್ಯೆ ಕಡಿಮೆ ಇರುವುದನ್ನು ಕಾಣಬಹುದು.[47]

ಮಠದ ಕುರಬರಹಟ್ಟಿ ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿಯಲ್ಲಿ ಒಟ್ಟು 20 ಸದಸ್ಯರಿದ್ದಾರೆ. ಕೂಲಿಯನ್ನು ಉದ್ಯೋಗವನ್ನಾಗಿ ಮಾಡಿಕೊಂಡ 2(10%) ಪುರುಷ ಸದಸ್ಯರಿದ್ದಾರೆ ಅವರಲ್ಲಿ 1(5%) ಪುರುಷ ಹಾಗೂ 1(5%) ಮಹಿಳಾ ಸದಸ್ಯರಿದ್ದಾರೆ. ಕೃಷಿಯನ್ನು ಉದ್ಯೋಗವನ್ನಾಗಿ ಮಾಡಿಕೊಂಡ 6(30%) ಸದಸ್ಯರಿದ್ದಾರೆ. ಅವರಲ್ಲಿ 5(25%) ಪರುಷ ಹಾಗೂ 1(5%) ಮಹಿಳಾ ಸದಸ್ಯರಿದ್ದಾರೆ. ಮನೆಗೆಲಸವನ್ನು ಉದ್ಯೋಗವನ್ನಾಗಿ ಮಾಡಿಕೊಂಡಿರುವ 7(35%) ಮಹಿಳಾ ಸದಸ್ಯರಿದ್ದಾರೆ. ಕೈಗಾರಿಕೆಯನ್ನು ಉದ್ಯೋಗವನ್ನಾಗಿ ಮಾಡಿಕೊಂಡ 2(10%) ಪುರುಷ ಸದಸ್ಯದ್ದಾರೆ.[48]

ಉಳಿದಂತೆ ಬೇರೆ ಯಾವ ಉದ್ಯೋಗವನ್ನು ಮಾಡುವ ಸದಸ್ಯರು ಇಲ್ಲ. ಒಟ್ಟಾರೆಯಾಗಿ ಎಂ.ಕೆ ಹಟ್ಟಿ ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ಉದ್ಯೋಗದ ವಿವರವನ್ನು ವಿಶ್ಲೇಷಿಸಿದಾಗ ಇಲ್ಲಿಯೂ ಸಹ ಕೃಷಿ ಹಾಗೂ ಮನೆಗೆಲಸವನ್ನು ತಮ್ಮ ಉದ್ಯೋಗವನ್ನಾಗಿ ಮಾಡಿಕೊಂಡಿರುವ ಸದಸ್ಯರ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಕಾಣಬಹುದು. ಉಳಿದಂತೆ ಬೇರೆ ಬೇರೆ ಉದ್ಯೋಗಗಳಲ್ಲಿ ತೊಡಗಿಸಿಕೊಂಡಿರುವ ಸದಸ್ಯರ ಸಂಖ್ಯೆ ಕಡಿಮೆ ಪ್ರಮಾಣದಲ್ಲಿರು ವುದನ್ನು ಕಾಣಬಹುದು.

ಮೇಲಿನ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಒಟ್ಟಾರೆಯಾಗಿ ಚಿತ್ರದುರ್ಗ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ ಗ್ರಾಮ ಪಂಚಾಯತಿವಾರು ಸ್ಥಾಯಿಸಮಿತಿ ಸದಸ್ಯರ ಉದ್ಯೋಗದ ವಿವರವನ್ನು ವಿಶ್ಲೇಷಣೆ ಮಾಡಿದಾಗ ಹೆಚ್ಚಿನ ಸಂಖ್ಯೆಯ ಸದಸ್ಯರು ಕೃಷಿ ಹಾಗೂ ಮನೆಗೆಲಸವನ್ನು ತಮ್ಮ ಉದ್ಯೋಗವನ್ನಾಗಿ ಮಾಡಿಕೊಂಡ ಸದಸ್ಯರ ಸಂಖ್ಯೆ ಹೆಚ್ಚಾಗಿರುವುದನ್ನು ಕಾಣಬಹುದು. ಉಳಿದಂತೆ ಬೇರೆ ಬೇರೆ ಉದ್ಯೋಗವನ್ನು ಮಾಡಿಕೊಂಡ ಸದಸ್ಯರು ಕಡಿಮೆ ಪ್ರಮಾಣದಲ್ಲಿರುವುದನ್ನು ಕಾಣಬಹುದು.

ತಾಲ್ಲೂಕು ಪಂಚಾಯತಿವಾರು ಸ್ಥಾಯಿಸಮಿತಿ ಸದಸ್ಯರ ಉದ್ಯೋಗದ ವಿವರವನ್ನು ಸಂದರ್ಶನ ಮಾಡಿದ ಸಂದರ್ಭದಲ್ಲಿ ಕಂಡು ಬಂದಂತಹ ಮಾಹಿತಿಯನ್ನು ಮುಂದಿನಂತೆ ವಿವರಿಸಬಹುದಾಗಿದೆ. ಚಿತ್ರದುರ್ಗ ತಾಲ್ಲೂಕು ಪಂಚಾಯತಿಯ ಒಟ್ಟು 27 ಸದಸ್ಯರಲ್ಲಿ ಕೂಲಿ ಕೆಲಸ ಮಾಡುವ 1(3.7%) ಮಹಿಳೆಯನ್ನು ಕಾಣಬಹುದು. ಅದೇ ರೀತಿಯಲ್ಲಿ ಕೃಷಿಯನ್ನು ತಮ್ಮ ಉದ್ಯೋಗವನ್ನಾಗಿ ಮಾಡುವಂತಹ 12(44.4%) ಪುರುಷರು ಹಾಗೂ 4(14.8%) ಮಹಿಳೆಯರನ್ನು ಕಾಣಬಹುದು. ಹಾಗೆಯೇ ಮನೆಗೆಲಸ ಮಾಡುವ 5(18.51%) ಮಹಿಳೆಯರನ್ನು ಕಾಣುತ್ತೇವೆ. ಕೈಗಾರಿಕೆಯನ್ನು ಉದ್ಯೋಗವನ್ನಾಗಿ ಮಾಡಿಕೊಂಡಿರುವ 1(3.7%) ಪುರುಷನನ್ನು ನಾವು ಕಾಣಬಹುದು. ಅದೇ ರೀತಿಯಾಗಿ ಖಾಸಗಿಯಲ್ಲಿ ಉದ್ಯೋಗ ಮಾಡುವಂತಹ 4(14.81%) ಪುರುಷರನ್ನು ಕಾಣಬಹುದು.[49]

ಒಟ್ಟಾರೆಯಾಗಿ ಚಿತ್ರದುರ್ಗ ತಾಲ್ಲೂಕು ಪಂಚಾಯತಿಯನ್ನು ಅವಲೋಕನ ಮಾಡಿದಾಗ ಅಲ್ಲಿನ ಸ್ಥಾಯಿಸಮಿತಿ ಸದಸ್ಯರ ಉದ್ಯೋಗವು ಹೆಚ್ಚಾಗಿ ಕೃಷಿಯಲ್ಲಿ ತೊಡಗಿಸಿಕೊಂಡಿರುವುದನ್ನು ಕಾಣುತ್ತೇವೆ.

ಹಿರಿಯೂರು ತಾಲ್ಲೂಕು ಪಂಚಾಯತಿ ಸ್ಥಾಯಿಸಮಿತಿ ಸದಸ್ಯರ ಉದ್ಯೋಗದ ವಿವರಗಳು ಸಂದರ್ಶನ ಮಾಡಿದ ಸಂದರ್ಭದಲ್ಲಿ ಈ ಮುಂದಿನಂತೆ ಕಂಡುಬರುತ್ತದೆ. ಹಿರಿಯೂರು ತಾಲ್ಲೂಕು ಪಂಚಾಯತಿಯಲ್ಲಿ ಒಟ್ಟು 22 ಸ್ಥಾಯಿಸಮಿತಿಯ ಸದಸ್ಯರನ್ನು ಕಾಣುತ್ತೇವೆ. ಅವರಲ್ಲಿ ಕೂಲಿಯನ್ನು ತಮ್ಮ ಉದ್ಯೋಗವನ್ನಾಗಿ ಮಾಡಿಕೊಂಡಿರುವ 1(4.54%) ಪುರುಷ ಸದಸ್ಯನನ್ನು ಕಾಣಬಹುದು. ಹಾಗೆಯೇ ಕೃಷಿಯಲ್ಲಿ ತೊಡಗಿಕೊಂಡಿರುವ 17(77.27%) ಸದಸ್ಯರಲ್ಲಿ 12(54.54%) ಪುರುಷರು ಹಾಗೂ 5(22.72%) ಮಹಿಳಾ ಸದಸ್ಯರನ್ನು ಕಾಣಬಹುದು. ಅದೇ ರೀತಿಯಲ್ಲಿ ಮನೆಗೆಲಸದಲ್ಲಿ ತೊಡಗಿಕೊಂಡಿರುವ 3(13.63%) ಮಹಿಳಾ ಸದಸ್ಯರನ್ನು ಕಾಣಬಹುದು.[50] ಕೈಗಾರಿಕೆಯಲ್ಲಿ ಯಾವ ಸದಸ್ಯರು ಕಂಡುಬರುವುದಿಲ್ಲ. ಖಾಸಗಿ ಉದ್ಯೋಗವನ್ನು ಮಾಡಿಕೊಂಡಿರುವ 1(4.5%) ಮಹಿಳಾ ಸದಸ್ಯರನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಹಿರಿಯೂರು ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ಉದ್ಯೋಗವನ್ನು ಅವಲೋಕನ ಮಾಡಿದಾಗ ಅಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕೃಷಿಯನ್ನೆ ಹೆಚ್ಚಾಗಿ ಅವಲಂಬಿಸಿರುವುದನ್ನು ಕಾಣುತ್ತೇವೆ.

ಮೊಳಕಾಲ್ಮೂರು ತಾಲ್ಲೂಕು ಪಂಚಾಯತಿಯಲ್ಲಿ ಸ್ಥಾಯಿಸಮಿತಿ ಸದಸ್ಯರು ಒಟ್ಟು 12 ಸದಸ್ಯರನ್ನು ಕಾಣಬಹುದು. ಅವರಲ್ಲಿ 1(8.33%) ಮಹಿಳಾ ಸದಸ್ಯರು ಕೃಷಿಯಲ್ಲಿ ತೊಡಗಿಕೊಂಡಿರುವುದನ್ನು ಕಾಣಬಹುದು. ಅದೇರೀತಿಯಲ್ಲಿ 6(50%) ಸದಸ್ಯರಲ್ಲಿ 4(33.33%) ಪುರುಷರು ಹಾಗೂ 2(16.66%) ಮಹಿಳಾ ಸದಸ್ಯರು ಕೃಷಿಯನ್ನು ತಮ್ಮ ಮುಖ್ಯ ಉದ್ಯೋಗವನ್ನಾಗಿ ಮಾಡಿಕೊಂಡಿದ್ದಾರೆ. ಹಾಗೆಯೇ ಮನೆಗೆಲಸದಲ್ಲಿ ತೊಡಗಿಕೊಂಡಿರುವ 3(25%) ಮಹಿಳಾ ಸದಸ್ಯರನ್ನು ಕಾಣಬಹುದು. ಅದೇ ರೀತಿಯಲ್ಲಿ ಕೈಗಾರಿಕೆಯಲ್ಲಿ ಯಾವ ಸದಸ್ಯರು ಕಂಡುಬರುವುದಿಲ್ಲ. ಖಾಸಗಿ ಉದ್ಯೋಗದಲ್ಲಿ ತೊಡಗಿಸಿಕೊಂಡಿರುವ 2(16.66%) ಪುರುಷ ಸದಸ್ಯರನ್ನು ಕಾಣಬಹುದು.[51]

ಚಿತ್ರದುರ್ಗ ಜಿಲ್ಲಾ ಪಂಚಾಯತಿ ಸ್ಥಾಯಿಸಮಿತಿ ಸದಸ್ಯರ ಉದ್ಯೋಗದ ವಿವರವನ್ನು ಈ ಮುಂದಿನಂತೆ ಕಾಣಬಹುದಾಗಿದೆ. ಈ ಜಿಲ್ಲಾ ಪಂಚಾಯತಿಯಲ್ಲಿ ಒಟ್ಟು 3 ಸದಸ್ಯರನ್ನು ಕಾಣಬಹುದು. ಅವರಲ್ಲಿ ಕೂಲಿ ಕೆಲಸವನ್ನು ಮಾಡುವ ಯಾವ ಸದಸ್ಯರು ಇರುವುದಿಲ್ಲ. ಕೃಷಿಯನ್ನು ತಮ್ಮ ಉದ್ಯೋಗವನ್ನಾಗಿ ಮಾಡಿಕೊಂಡಿರುವ 17(50%) ಪುರುಷರು ಹಾಗೂ 2(5.9%) ಮಹಿಳಾ ಸದಸ್ಯರನ್ನು ಕಾಣಬಹುದು. ಹಾಗೆಯೇ ಮನೆಗೆಲಸದಲ್ಲಿ ತೊಡಗಿಕೊಂಡಿರುವ 11 ಸದಸ್ಯರಲ್ಲಿ 1(3.0%) ಪುರುಷ ಸದಸ್ಯ ಹಾಗೂ 10(29.4%) ಮಹಿಳಾ ಸದಸ್ಯರನ್ನು ಕಾಣಬಹುದು. ಅದೇ ರೀತಿಯಾಗಿ ಕೈಗಾರಿಕೆಯಲ್ಲಿ ತೊಡಗಿಸಿಗೊಂಡಿರುವ ಯಾವ ಸದಸ್ಯರು ಕಾಣಸಿಗುವುದಿಲ್ಲ. ಖಾಸಗಿ ಉದ್ಯೋಗವನ್ನು ಮಾಡುವ 3(8.9%)ಪುರುಷ ಸದಸ್ಯರು ಇರುವುದನ್ನು ನಾವು ಕಾಣಬಹುದು. ಸ್ವ-ಸದಸ್ಯರಾಗಿ ಆಯ್ಕೆ ಮಾಡಿಕೊಂಡಿರುವ 1(3%) ಪುರುಷ ಸದಸ್ಯನನ್ನು ಕಾಣಬಹುದು.[52]

ಒಟ್ಟಾರೆಯಾಗಿ ಚಿತ್ರದುರ್ಗ ಜಿಲ್ಲಾ ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ಉದ್ಯೋಗದ ವಿವರಗಳನ್ನು ಅವಲೋಕನ ಮಾಡಿದಾಗ ಕೃಷಿಯಲ್ಲಿಯೇ ತೊಡಗಿಕೊಂಡಿರುವ ಹೆಚ್ಚಿನ ಸದಸ್ಯರನ್ನು ನಾವು ಸಂದರ್ಶನ ನಡೆಸಿದ ಸಂದರ್ಭದಲ್ಲಿ ಕಂಡು ಬಂದಂತಹ ಮಾಹಿತಿಯಾಗಿರುತ್ತದೆ.

ಗ್ರಾಮ ಪಂಚಾಯತಿವಾರು ಸ್ಥಾಯಿಸಮಿತಿ ಸದಸ್ಯರ ವರಮಾನ ವಿವರವನ್ನು ಅವಲೋಕನ ಮಾಡಿದಾಗ ಬಬ್ಬೂರು ಗ್ರಾಮ ಪಂಚಾಯತಿ ಸ್ಥಾಯಿಸಮಿತಿಯಲ್ಲಿ ಒಟ್ಟು 15 ಸದಸ್ಯರಿದ್ದಾರೆ. 10 ಸಾವಿರ ಒಳಗೆ ವರಮಾನ ಹೊಂದಿರುವ 5(33.3%) ಸದಸ್ಯರಿದ್ದಾರೆ. ಅವರಲ್ಲಿ 2(13.3%)

ಪುರುಷ ಹಾಗೂ 3(20%) ಮಹಿಳಾ ಸದಸ್ಯರಿದ್ದಾರೆ. 10–15 ಸಾವಿರ ವರಮಾನ ಹೊಂದಿರುವ 2(13.3%) ಸದಸ್ಯರಿದ್ದಾರೆ ಅವರಲ್ಲಿ 1(6.6%) ಪುರುಷ ಹಾಗೂ 1(6.6%) ಮಹಿಳಾ ಸದಸ್ಯರಿದ್ದಾರೆ. 15–20 ಸಾವಿರ ವರಮಾನ ಹೊಂದಿರುವ ಯಾವ ಸದಸ್ಯರು ಇಲ್ಲ. 20–25 ಸಾವಿರ ವರಮಾನ ಹೊಂದಿರುವ 1(6.6%) ಪುರುಷ ಸದಸ್ಯರಿದ್ದಾರೆ. 25–30 ಸಾವಿರ ವರಮಾನ ಹೊಂದಿರುವ 3(20%) ಸದಸ್ಯರಿದ್ದಾರೆ. ಅವರಲ್ಲಿ 1(6.6%) ಪುರುಷ ಹಾಗೂ 2(13.3%) ಮಹಿಳಾ ಸದಸ್ಯರಿದ್ದಾರೆ. 35 ಸಾವಿರಕ್ಕೂ ಹೆಚ್ಚು ವರಮಾನ ಹೊಂದಿರುವ 4(26.7%) ಸದಸ್ಯರಿದ್ದಾರೆ. ಅವರಲ್ಲಿ 3(20%) ಪುರುಷ ಹಾಗೂ 1(6.6%) ಮಹಿಳಾ ಸದಸ್ಯರಿದ್ದಾರೆ.[53]

ಒಟ್ಟಾರೆ ಬಬ್ಬೂರು ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ವರಮಾನವನ್ನು ಅವಲೋಕನ ಮಾಡಿದಾಗ 15 ಸಾವಿರ ಒಳಗಡೆ ವರಮಾನ ಹೊಂದಿರುವ ಸದಸ್ಯರು ಹಾಗೂ 25 ಸಾವಿರಕ್ಕಿಂತ ಹೆಚ್ಚು ವರಮಾನ ಹೊಂದಿರುವ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ.

ಗೌಡನಹಳ್ಳಿ ಗ್ರಾಮ ಪಂಚಾಯತಿ ಸ್ಥಾಯಿಸಮಿತಿಯಲ್ಲಿ ಒಟ್ಟು 15 ಸದಸ್ಯರಿದ್ದಾರೆ. 10 ಸಾವಿರ ಒಳಗೆ ವರಮಾನ ಹೊಂದಿರುವ 3(20%) ಪುರುಷ ಸದಸ್ಯರಿದ್ದಾರೆ. 10–15 ಸಾವಿರ ವರಮಾನ ಹೊಂದಿರುವ ಯಾವ ಸದಸ್ಯರು ಇರುವುದಿಲ್ಲ. 15–20 ಸಾವಿರ ವರಮಾನ ಹೊಂದಿರುವ 5(33.4%) ಸದಸ್ಯರಿದ್ದಾರೆ ಅವರಲ್ಲಿ 3(13.3%) ಪುರುಷ ಹಾಗೂ 3(20%) ಮಹಿಳಾ ಸದಸ್ಯರಿದ್ದಾರೆ. 20–25 ಸಾವಿರ ವರಮಾನ ಹೊಂದಿರುವ 5(33.4%) ಸದಸ್ಯರಿದ್ದಾರೆ. ಅವರಲ್ಲಿ 2(13.3%) ಪುರುಷ ಹಾಗೂ 3(20%) ಮಹಿಳಾ ಸದಸ್ಯರಿದ್ದಾರೆ. 25–30 ಸಾವಿರ ವರಮಾನ ಹೊಂದಿರುವ 1(6.6%) ಪುರುಷ ಸದಸ್ಯರು ಮಾತ್ರ ಇದ್ದಾರೆ. 35 ಸಾವಿರಕ್ಕೂ ಅಧಿಕ ವರಮಾನ ಹೊಂದಿರುವ 1(6.6%) ಮಹಿಳಾ ಸದಸ್ಯರಿದ್ದಾರೆ.[54] ಒಟ್ಟಾರೆ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ 15–25 ಸಾವಿರ ವರಮಾನ ಹೊಂದಿರುವ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಉಳಿದಂತೆ ಕಡಿಮೆ ಹಾಗೂ 35 ಸಾವಿರಕ್ಕೂ ಹೆಚ್ಚು ವರಮಾನ ಹೊಂದಿದ ಸದಸ್ಯರಿದ್ದಾರೆ.

ಹಾನಗಲ್ ಗ್ರಾಮ ಪಂಚಾಯತಿ ಸ್ಥಾಯಿಸಮಿತಿಯಲ್ಲಿ ಒಟ್ಟು 16 ಸದಸ್ಯರಿದ್ದಾರೆ. 10 ಸಾವಿರ ವರಮಾನ ಹೊಂದಿರುವ 3(18.8%) ಸದಸ್ಯರಿದ್ದಾರೆ. ಅವರಲ್ಲಿ 2(12.5%) ಪುರುಷ ಹಾಗೂ 1(6.2%) ಮಹಿಳಾ ಸದಸ್ಯರಿದ್ದಾರೆ. 10–15 ಸಾವಿರ ವರಮಾನ ಹೊಂದಿರುವ 6(37.5%) ಸದಸ್ಯರಿದ್ದಾರೆ. ಅವರಲ್ಲಿ 2(12.5%) ಪುರುಷ ಹಾಗೂ 4(25%) ಮಹಿಳಾ ಸದಸ್ಯರಿದ್ದಾರೆ. 15–20 ಸಾವಿರ ವರಮಾನ ಹೊಂದಿರುವ 1(6.2%) ಪುರುಷ ಸದಸ್ಯರಿದ್ದಾರೆ. 20–25 ಸಾವಿರ ವರಮಾನ ಹೊಂದಿರುವ 3(18.8%) ಮಹಿಳಾ ಸದಸ್ಯರಿದ್ದಾರೆ. 25–30 ಸಾವಿರ ವರಮಾನ ಹೊಂದಿರುವ ಯಾವ ಸದಸ್ಯರು ಇಲ್ಲ. 35 ಸಾವಿರಕ್ಕೂ ಹೆಚ್ಚು ವರಮಾನ ಹೊಂದಿರುವ 2(12.5%) ಪುರುಷ ಸದಸ್ಯರಿದ್ದಾರೆ.[55]

ಒಟ್ಟಾರೆಯಾಗಿ ಹಾನಗಲ್ ಗ್ರಾಮ ಪಂಚಾಯತಿ ಸ್ಥಾಯಿಸಮಿತಿ ಸದಸ್ಯರ ವರಮಾನವನ್ನು ಅವಲೋಕನ ಮಾಡಿದಾಗ 10–25 ಸಾವಿರ ವರಮಾನ ಹೊಂದಿರುವ ಸದಸ್ಯರ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿ ಕಾಣಬಹುದು.

ರಾಯಪುರ ಗ್ರಾಮ ಪಂಚಾಯತಿ ಸ್ಥಾಯಿಸಮಿತಿಯಲ್ಲಿ ಒಟ್ಟು 16 ಸದಸ್ಯರಿದ್ದಾರೆ. 10 ಸಾವಿರ ವರಮಾನ ಹೊಂದಿರುವ 8(50%) ಸದಸ್ಯರಿದ್ದಾರೆ. ಅವರಲ್ಲಿ 4(25%) ಪುರುಷ ಹಾಗೂ 4(25%) ಮಹಿಳಾ ಸದಸ್ಯರಿದ್ದಾರೆ. 10–15 ಸಾವಿರ ವರಮಾನ ಹೊಂದಿರುವ 5(31.2%) ಸದಸ್ಯರಿದ್ದಾರೆ. ಅವರಲ್ಲಿ 4(25%) ಪುರುಷ ಹಾಗೂ 1(6.2%) ಮಹಿಳಾ ಸದಸ್ಯರಿದ್ದಾರೆ. 15–20 ಸಾವಿರ ವರಮಾನ ಹೊಂದಿರುವ 1(6.2%) ಪುರುಷ ಸದಸ್ಯ ಮಾತ್ರ ಇದ್ದಾರೆ. 20–25 ಸಾವಿರ ವರಮಾನ ಹೊಂದಿರುವ ಯಾವ ಸದಸ್ಯರು ಇಲ್ಲ. 25–30 ಸಾವಿರ ವರಮಾನ ಹೊಂದಿರುವ 1(6.2%) ಪುರುಷ ಸದಸ್ಯರಿದ್ದಾರೆ. 35 ಸಾವಿರಕ್ಕೂ ಹೆಚ್ಚು ವರಮಾನ ಹೊಂದಿರುವ 1(6.2%) ಪುರುಷ ಸದಸ್ಯರಿದ್ದಾರೆ.[56] ಒಟ್ಟಾರೆ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ 15 ಸಾವಿರ ಒಳಗಡೆ ವರಮಾನ ಹೊಂದಿರುವ ಸದಸ್ಯರ ಸಂಖ್ಯೆ ಹೆಚ್ಚಾಗಿರುವುದನ್ನು ಕಾಣಬಹುದು.

ಮದಕರಿಪುರ ಗ್ರಾಮ ಪಂಚಾಯತಿ ಸ್ಥಾಯಿಸಮಿತಿಯಲ್ಲಿ ಒಟ್ಟು 15 ಸದಸ್ಯರಿದ್ದಾರೆ. 10 ಸಾವಿರ ವರಮಾನ ಹೊಂದಿರುವ 3(20%) ಪುರುಷ ಸದಸ್ಯರಿದ್ದಾರೆ. 10–15 ಸಾವಿರ ವರಮಾನ ಹೊಂದಿರುವ 2(13.3%) ಸದಸ್ಯರಿದ್ದಾರೆ. ಅವರಲ್ಲಿ 1(6.6%) ಪುರುಷ ಹಾಗೂ 1(6.6%) ಮಹಿಳಾ ಸದಸ್ಯರಿದ್ದಾರೆ. 15–20 ಸಾವಿರ ವರಮಾನ ಹೊಂದಿರುವ 3(20%) ಸದಸ್ಯರಿದ್ದಾರೆ. ಅವರಲ್ಲಿ 1(6.6%) ಪುರುಷ ಹಾಗೂ 2(13.3%) ಮಹಿಳಾ ಸದಸ್ಯರಿದ್ದಾರೆ. 20–25 ಸಾವಿರ ವರಮಾನ ಹೊಂದಿರುವ 4(26.7%) ಸದಸ್ಯರಿದ್ದಾರೆ. ಅವರಲ್ಲಿ 2(13.3%) ಪುರುಷ ಹಾಗೂ 2(13.3%) ಮಹಿಳಾ ಸದಸ್ಯರಿದ್ದಾರೆ. 25–30 ಸಾವಿರ ವರಮಾನ ಹೊಂದಿರುವ ಯಾವ ಸದಸ್ಯರು ಇಲ್ಲ. 35 ಸಾವಿರಕ್ಕೂ ಹೆಚ್ಚು ವರಮಾನ ಹೊಂದಿರುವ 3(20%) ಸದಸ್ಯರಿದ್ದಾರೆ. ಅವರಲ್ಲಿ 1(6.6%) ಪುರುಷ ಹಾಗೂ 2(13.3%) ಮಹಿಳಾ ಸದಸ್ಯರಿದ್ದಾರೆ.[57] ಒಟ್ಟಾರೆ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಮದಕರಿಪುರ ಗ್ರಾಮ ಪಂಚಾಯತಿ ಸ್ಥಾಯಿಸಮಿತಿ ಸದಸ್ಯರು ಹೆಚ್ಚಿನ ಪ್ರಮಾಣದಲ್ಲಿ 15 ಸಾವಿರ ಒಳಗಡೆ ವರಮಾನ ಹೊಂದಿರುವ ಸದಸ್ಯರನ್ನು ಕಾಣಬಹುದು.

ಮಠದ ಕುರಬರಹಟ್ಟಿ ಗ್ರಾಮ ಪಂಚಾಯತಿ ಸ್ಥಾಯಿಸಮಿತಿಯಲ್ಲಿ ಒಟ್ಟು 20 ಸದಸ್ಯರಿದ್ದಾರೆ. 10 ಸಾವಿರ ವರಮಾನ ಹೊಂದಿರುವ 7(35%) ಸದಸ್ಯರಿದ್ದಾರೆ. ಅವರಲ್ಲಿ 3(15%) ಪುರುಷ ಹಾಗೂ 4(20%) ಮಹಿಳಾ ಸದಸ್ಯರಿದ್ದಾರೆ. 10–15 ಸಾವಿರ ವರಮಾನ ಹೊಂದಿರುವ 7(35%)

ಸದಸ್ಯರಿದ್ದಾರೆ. ಅವರಲ್ಲಿ 4(20%) ಪುರುಷ ಹಾಗೂ 3(15%) ಮಹಿಳಾ ಸದಸ್ಯರಿದ್ದಾರೆ. 15–20 ಸಾವಿರ ವರಮಾನ ಹೊಂದಿರುವ 4(20%) ಸದಸ್ಯರಿದ್ದಾರೆ, ಅವರಲ್ಲಿ 2(10%) ಪುರುಷ ಹಾಗೂ 2(10%) ಮಹಿಳಾ ಸದಸ್ಯರಿದ್ದಾರೆ. 20–25 ಸಾವಿರ ವರಮಾನ ಹೊಂದಿದ ಯಾವ ಸದಸ್ಯರೂ ಇಲ್ಲ. 25–30 ಸಾವಿರ ವರಮಾನ ಹೊಂದಿರುವ 2(20%) ಪುರುಷ ಸದಸ್ಯರಿದ್ದಾರೆ.[58] 35 ಸಾವಿರಕ್ಕೂ ಹೆಚ್ಚು ವರಮಾನ ಹೊಂದಿದ ಯಾವ ಸದಸ್ಯರು ಇಲ್ಲ. ಒಟ್ಟಾರೆಯಾಗಿ ಎಂ.ಕೆ.ಹಟ್ಟಿ ಗ್ರಾಮ ಪಂಚಾಯತಿ ಸ್ಥಾಯಿಸಮಿತಿ ಸದಸ್ಯರ ವರಮಾನವನ್ನು ಅವಲೋಕಿಸಿದಾಗ 15 ಸಾವಿರ ಒಳಗಡೆ ವರಮಾನ ಹೊಂದಿರುವ ಸದಸ್ಯರ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಚಿತ್ರದುರ್ಗ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ ಗ್ರಾಮ ಪಂಚಾಯತಿ ಸ್ಥಾಯಿಸಮಿತಿ ಸದಸ್ಯರ ವರಮಾನವನ್ನು ಅವಲೋಕನ ಮಾಡಿದಾಗ ಹೆಚ್ಚಿನ ಸಂಖ್ಯೆಯ ಸದಸ್ಯರು 15 ಸಾವಿರ ಒಳಗಡೆ ವರಮಾನ ಹೊಂದಿರುವ ಸದಸ್ಯರು ಹೆಚ್ಚಾಗಿದ್ದಾರೆ. ಉಳಿದಂತೆ 15 ಸಾವಿರಕ್ಕಿಂತ ಹೆಚ್ಚು ವರಮಾನ ಹೊಂದಿದ ಸದಸ್ಯರ ಸಂಖ್ಯೆ ಕಡಿಮೆ ಪ್ರಮಾಣದಲ್ಲಿರುವುದನ್ನು ಕಾಣಬಹುದು.

ತಾಲ್ಲೂಕು ಪಂಚಾಯತಿವಾರು ಸ್ಥಾಯಿಸಮಿತಿ ಸದಸ್ಯರನ್ನು ಸಂದರ್ಶನ ಮಾಡಿದಾಗ ಅವರ ವರಮಾನದ ವಿವರವನ್ನು ಈ ರೀತಿಯಲ್ಲಿ ನೀಡಿರುತ್ತಾರೆ. ಚಿತ್ರದುರ್ಗ ತಾಲ್ಲೂಕು ಪಂಚಾಯತಿಯಲ್ಲಿ ಒಟ್ಟು 27 ಸದಸ್ಯರನ್ನು ಸಂದರ್ಶಿಸಲಾಯಿತು. 12 ಸಾವಿರದ ಒಳಗಡೆ ವಾರ್ಷಿಕ ವರಮಾನವಿರುವ 4(14.8%) ಸದಸ್ಯರನ್ನು ಕಾಣಬಹುದು. ಅವರಲ್ಲಿ 2(7.4%) ಪುರುಷರು, 2(7.4%) ಮಹಿಳೆಯರು ಇದ್ದಾರೆ. ಹಾಗೆಯೇ 10 ಸಾವಿರದಿಂದ 15 ಸಾವಿರದ ವರೆಗೆ ವರಮಾನವಿರುವ ಸದಸ್ಯರು ಕೇವಲ ಒಬ್ಬರು ಮಾತ್ರ ಇರುತ್ತಾರೆ. ಅವರು ಪುರುಷ (3.7%) ಸದಸ್ಯರಾಗಿದ್ದಾರೆ. 15 ಸಾವಿರದಿಂದ 20 ಸಾವಿರ ವರಮಾನವಿರುವ 3(11.1%) ಸದಸ್ಯರನ್ನು ಕಾಣುತ್ತೇವೆ. ಅವರಲ್ಲಿ 2(7.4%) ಪುರುಷರು, 1(3.7%) ಮಹಿಳಾ ಸದಸ್ಯರಿರುತ್ತಾರೆ. 20–25 ಸಾವಿರ ವರಮಾನವಿರುವ 1(3.7%) ಮಹಿಳಾ ಸದಸ್ಯರು ಮಾತ್ರ ಇರುತ್ತಾರೆ.

25–30 ಸಾವಿರ ವರಮಾನವಿರುವ 1(3.7%) ಮಹಿಳಾ ಸದಸ್ಯರು ಮಾತ್ರ ಇದ್ದಾರೆ.[59] 35 ಸಾವಿರಕ್ಕೂ ಹೆಚ್ಚು ವರಮಾನವಿರುವ 1(3.7%) ಮಹಿಳಾ ಸದಸ್ಯರನ್ನು ಚಿತ್ರದುರ್ಗ ತಾಲ್ಲೂಕು ಪಂಚಾಯತಿಯಲ್ಲಿ ಕಾಣಬಹುದು.

ಒಟ್ಟಾರೆಯಾಗಿ ಚಿತ್ರದುರ್ಗ ತಾಲ್ಲೂಕು ಪಂಚಾಯತಿ ಸದಸ್ಯರ ವರಮಾನವನ್ನು ಅವಲೋಕಿಸಿದಾಗ 12 ಸಾವಿರದಿಂದ 20 ಸಾವಿರ ವರಮಾನವಿರುವ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು.

ಹಿರಿಯೂರು ತಾಲ್ಲೂಕು ಪಂಚಾಯತಿ ಸ್ಥಾಯಿಸಮಿತಿ ಸದಸ್ಯರು 22 ಸದಸ್ಯರಿರುತ್ತಾರೆ. ಅವರಲ್ಲಿ 12 ಸಾವಿರ ವರಮಾನ ಒಳಗಡೆ ಇರುವ ಯಾವ ಸದಸ್ಯರು ಈ ತಾಲ್ಲೂಕು ಪಂಚಾಯತಿಯಲ್ಲಿ ಇರುವುದಿಲ್ಲ. 10–15 ಸಾವಿರ ವರಮಾನ ಇರುವ 1(4.5%) ಪುರುಷ ಸದಸ್ಯರನ್ನು ಕಾಣಬಹುದು. 15–20 ಸಾವಿರ ವರಮಾನ ಇರುವ 5(22.7%) ಸದಸ್ಯರನ್ನು ಕಾಣಬಹುದು. ಅವರಲ್ಲಿ 3(13.6%) ಪುರುಷರು ಹಾಗೂ 2(9%) ಮಹಿಳಾ ಸದಸ್ಯರನ್ನು ಕಾಣುತ್ತೇವೆ. 20–25 ಸಾವಿರ ವರಮಾನ ಇರುವ 4 ಸದಸ್ಯರನ್ನು ಕಾಣಬಹುದು. ಅವರಲ್ಲಿ 3(13.6%) ಪುರುಷರು ಹಾಗೂ 1(4.5%) ಮಹಿಳಾ ಸದಸ್ಯರು ಇರುತ್ತಾರೆ. 25–30 ಸಾವಿರ ವರಮಾನ ಇರುವ 4(18.2%) ಸದಸ್ಯರನ್ನು ಕಾಣುತ್ತೇವೆ. ಅವರಲ್ಲಿ 3(13.6%) ಪುರುಷರು ಹಾಗೂ 1(4.5%) ಮಹಿಳಾ ಸದಸ್ಯರನ್ನು ಕಾಣಬಹುದು. ಹಾಗೆಯೇ 35 ಸಾವಿರಕ್ಕೂ ಹೆಚ್ಚು ತಲಾ ವರಮಾನ ಹೊಂದಿರುವ 2(9%) ಪುರುಷ ಸದಸ್ಯರನ್ನು ಕಾಣಬಹುದು.[60]

ಒಟ್ಟಾರೆಯಾಗಿ ಹಿರಿಯೂರು ತಾಲ್ಲೂಕು ಪಂಚಾಯತಿ ಸದಸ್ಯರ ತಲಾ ವರಮಾನವನ್ನು ಅವಲೋಕಿಸಿದಾಗ 20 ಸಾವಿರಕ್ಕಿಂತ ಕಡಿಮೆ ತಲಾವರಮಾನವಿರುವ ಸದಸ್ಯರ ಕಡಿಮೆ ಪ್ರಮಾಣದಲ್ಲಿರುವುದನ್ನು ಹಾಗೂ 20 ಸಾವಿರಕ್ಕಿಂತ ಹೆಚ್ಚು ತಲಾವರಮಾನವಿರುವ ಸದಸ್ಯರು ಹೆಚ್ಚು ಪ್ರಮಾಣದಲ್ಲಿರುವುದನ್ನು ಕಾಣಬಹುದು.

ಮೊಳಕಾಲ್ಮೂರು ತಾಲ್ಲೂಕು ಪಂಚಾಯತಿ ಸ್ಥಾಯಿಸಮಿತಿ ಸದಸ್ಯರು ಒಟ್ಟು 12 ಸದಸ್ಯರು ಇರುತ್ತಾರೆ. ಅವರಲ್ಲಿ 12 ಸಾವಿರ ಒಳಗಡೆ ವರಮಾನವಿರುವ 3(25%) ಸದಸ್ಯರನ್ನು ಕಾಣಬಹುದು. ಅವರಲ್ಲಿ 1(8.3%) ಪುರುಷ ಹಾಗೂ 2(16.7%) ಮಹಿಳಾ ಸದಸ್ಯರನ್ನು ಕಾಣುತ್ತೇವೆ. ಹಾಗೆಯೇ 10–15 ಸಾವಿರ ವರಮಾನ ಇರುವ 1(8.3%) ಪುರುಷ ಹಾಗೂ 1(8.3%) ಮಹಿಳಾ ಸದಸ್ಯರನ್ನು ಕಾಣುತ್ತೇವೆ. ಅದೇ ರೀತಿ 15–20 ಸಾವಿರ ವರಮಾನ ಇರುವ 1(8.3%) ಪುರುಷ ಸದಸ್ಯರಿರುತ್ತಾರೆ. ಹಾಗೆಯೇ 20–25 ಸಾವಿರ ವರಮಾನ ಇರುವ 2(16.7%) ಪುರುಷ ಹಾಗೂ 1(8.3%) ಮಹಿಳಾ ಸದಸ್ಯರು ಇರುವುದನ್ನು ಕಾಣುತ್ತೇವೆ. 35 ಸಾವಿರಕ್ಕೂ ಹೆಚ್ಚು ತಲಾ ವರಮಾನ ಇರುವ 1(8.3%) ಮಹಿಳಾ ಸದಸ್ಯರು ಇದ್ದಾರೆ.[61]

ಒಟ್ಟಾರೆಯಾಗಿ ಮೊಳಕಾಲ್ಮೂರು ತಾಲ್ಲೂಕು ಪಂಚಾಯತಿ ವ್ಯಾಪ್ತಿಯ ಸದಸ್ಯರ ವರಮಾನವನ್ನು ಅವಲೋಕಿಸಿದಾದ 25 ಸಾವಿರಕ್ಕಿಂತ ಕಡಿಮೆ ಇರುವ ಸದಸ್ಯರು ಹೆಚ್ಚಾಗಿರುವುದನ್ನು ಕಾಣಬಹುದು. 25 ಸಾವಿರಕ್ಕೂ ಹೆಚ್ಚು ವರಮಾನ ಇರುವ ಸದಸ್ಯರು ಕಡಿಮೆ ಪ್ರಮಾಣದಲ್ಲಿರುವುದನ್ನು ಕಾಣಬಹುದು.

ಚಿತ್ರದುರ್ಗ ಜಿಲ್ಲಾ ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ವರಮಾನದ ವಿವರವನ್ನು ವಿಶ್ಲೇಷಿಸಿದಾಗ ಚಿತ್ರದುರ್ಗ ಜಿಲ್ಲಾ ಪಂಚಾಯತಿಯಲ್ಲಿ ಒಟ್ಟು 34 ಸ್ಥಾಯಿಸಮಿತಿ ಸದಸ್ಯರು

ಇರುವುದನ್ನು ಕಾಣಬಹುದು. 12 ಸಾವಿರದವರೆಗೂ ವರಮಾನ ಇರುವ 1(2.9%) ಪುರುಷ ಸದಸ್ಯ ಇರುವುದನ್ನು ಕಾಣಬಹುದು. 12 ಸಾವಿರದವರೆಗೂ ವರಮಾನ ಇರುವ ಯಾವ ಮಹಿಳಾ ಸದಸ್ಯರು ಇಲ್ಲಿ ಇರುವುದಿಲ್ಲ. 13–15 ಸಾವಿರ ವರಮಾನ ಇರುವ 2(5.9%) ಸದಸ್ಯರು ಇರುವುದನ್ನು ಕಾಣಬಹುದು. ಅವರಲ್ಲಿ 1(2.9%) ಪುರುಷ ಸದಸ್ಯರು ಹಾಗೂ 1(2.9%) ಮಹಿಳಾ ಸದಸ್ಯರು ಇರುವುದನ್ನು ಕಾಣಬಹುದು. 15–20 ಸಾವಿರ ವರಮಾನ ಹೊಂದಿರುವ ಯಾವ ಸದಸ್ಯರು ಇಲ್ಲ. 21–25 ಸಾವಿರ ವರಮಾನ ಹೊಂದಿರುವ 2(5.9%) ಪುರುಷ ಸದಸ್ಯರು ಮಾತ್ರ ಇದ್ದಾರೆ. 21–25 ಸಾವಿರ ವರಮಾನ ಹೊಂದಿರುವ ಯಾವ ಮಹಿಳಾ ಸದಸ್ಯರು ಇರುವುದಿಲ್ಲ. 26–30 ಸಾವಿರ ವರಮಾನ ಹೊಂದಿರುವ 3(8.8%) ಸದಸ್ಯರಿದ್ದಾರೆ. ಅವರಲ್ಲಿ 2(5.9%) ಪುರುಷ ಸದಸ್ಯರು ಹಾಗೂ 1(2.9%) ಮಹಿಳಾ ಸದಸ್ಯರು ಇರುವುದನ್ನು ಗುರುತಿಸಲಾಗಿದೆ. ಹಾಗೆಯೇ 31 ಸಾವಿರಕ್ಕೂ ಹೆಚ್ಚು ವರಮಾನ ಹೊಂದಿರುವ 25(73.5%) ಸದಸ್ಯರಿದ್ದಾರೆ.[62] ಇವರಲ್ಲಿ 16(47%) ಪುರುಷ ಸದಸ್ಯರು ಹಾಗೂ 9(26.4%) ಮಹಿಳಾ ಸದಸ್ಯರಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಚಿತ್ರದುರ್ಗ ಜಿಲ್ಲಾ ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ವರಮಾನದ ವಿವರವನ್ನು ಅವಲೋಕಿಸಿದಾಗ 31 ಸಾವಿರಕ್ಕೂ ಹೆಚ್ಚು ವರಮಾನವಿರುವ ಸದಸ್ಯರ ಸಂಖ್ಯೆ ಅತೀ ಹೆಚ್ಚಾಗಿರುವುದನ್ನು ಕಾಣಬಹುದು. ಅಂದರೆ ಹೆಚ್ಚಿನ ಸಂಖ್ಯೆಯ ಸದಸ್ಯರು ಆರ್ಥಿಕವಾಗಿ ಸಬಲರಾಗಿರುವುದನ್ನು ಕಾಣಬಹುದಾಗಿದೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ ಗ್ರಾಮ ಪಂಚಾಯತಿವಾರು ಸ್ಥಾಯಿಸಮಿತಿ ಸದಸ್ಯರ ವೈವಾಹಿಕ ಸ್ಥಾನಮಾನದ ವಿವರವನ್ನು ವಿಶ್ಲೇಷಣೆ ಮಾಡಿದಾಗ ಬಬ್ಬೂರು ಗ್ರಾಮ ಪಂಚಾಯತಿಯಲ್ಲಿ ಒಟ್ಟು 15 ಸದಸ್ಯರಿದ್ದಾರೆ. ಅವರಲ್ಲಿ 8(53.3%) ಪುರುಷ ಸದಸ್ಯರು ಹಾಗೂ 7(46.7%) ಮಹಿಳಾ ಸದಸ್ಯರಿದ್ದಾರೆ. ಇವರೆಲ್ಲ ವಿವಾಹಿತರಾಗಿದ್ದಾರೆ. ಯಾವ ಸದಸ್ಯರು ಅವಿವಾಹಿತರಾಗಿ ಉಳಿದಿಲ್ಲ. ಹಾಗೆಯೇ ಯಾವ ಸದಸ್ಯರು ವಿಧುವೆ ಹಾಗೂ ವಿಧುರರಾಗಿಲ್ಲ. ಗೌಡನಹಳ್ಳಿ ಗ್ರಾಮ ಪಂಚಾಯತಿಯಲ್ಲಿ ಒಟ್ಟು 15 ಸದಸ್ಯರಿದ್ದಾರೆ. ಅವರಲ್ಲಿ 8(53.3%) ಪುರುಷ ಸದಸ್ಯರು ಹಾಗೂ 7(46.7%) ಮಹಿಳಾ ಸದಸ್ಯರಿದ್ದಾರೆ. ಇವರೆಲ್ಲ ವಿವಾಹಿತರಾಗಿದ್ದಾರೆ. ಯಾವ ಸದಸ್ಯರು ಅವಿವಾಹಿತರಾಗಿ ಉಳಿದಿಲ್ಲ. ಹಾಗೆಯೇ ಯಾವ ಸದಸ್ಯರು ವಿಧುವೆ ಹಾಗೂ ವಿಧುರರಾಗಿಲ್ಲ. ಹಾನಗಲ್ ಗ್ರಾಮ ಪಂಚಾಯತಿಯಲ್ಲಿ ಒಟ್ಟು 16 ಸದಸ್ಯರಿದ್ದಾರೆ. ಅವರಲ್ಲಿ 10(62.5%) ಪುರುಷ ಸದಸ್ಯರು ಹಾಗೂ 6(37.5%) ಮಹಿಳಾ ಸದಸ್ಯರಿದ್ದಾರೆ. ಇವರೆಲ್ಲ ವಿವಾಹಿತರಾಗಿದ್ದಾರೆ.

ರಾಯಪುರ ಗ್ರಾಮ ಪಂಚಾಯತಿಯಲ್ಲಿ ಒಟ್ಟು 16 ಸದಸ್ಯರಿದ್ದಾರೆ. ಅವರಲ್ಲಿ 10(62.5%) ಪುರುಷ ಸದಸ್ಯರು ಹಾಗೂ 6(37.5%) ಮಹಿಳಾ ಸದಸ್ಯರಿದ್ದಾರೆ. ಇವರೆಲ್ಲ ವಿವಾಹಿತರಾಗಿದ್ದಾರೆ. ಅವಿವಾಹಿತ ಸದಸ್ಯರು ಯಾರು ಇಲ್ಲ. ಹಾಗೆಯೇ ವಿಧುವೆ ಹಾಗೂ ವಿಧುರ ಸದಸ್ಯರು ಯಾರು ಇಲ್ಲ. ಮದಕರಿಪುರ ಗ್ರಾಮ ಪಂಚಾಯತಿಯಲ್ಲಿ ಒಟ್ಟು 15 ಸದಸ್ಯರಿದ್ದಾರೆ. ಅವರಲ್ಲಿ 8(53.3%) ಪುರುಷ ಸದಸ್ಯರು ಹಾಗೂ 7(46.7%) ಮಹಿಳಾ ಸದಸ್ಯರಿದ್ದಾರೆ. ಇವರೆಲ್ಲ ವಿವಾಹಿತರಾಗಿದ್ದಾರೆ. ಅವಿವಾಹಿತ ವಿಧುವೆ ಹಾಗೂ ವಿಧುರರಾದ ಯಾವ ಸದಸ್ಯರು ಈ ಪಂಚಾಯತಿಯಲ್ಲಿ ಕಾಣುವುದಿಲ್ಲ. ಎಂ.ಕೆ.ಹಟ್ಟಿ ಗ್ರಾಮ ಪಂಚಾಯತಿಯಲ್ಲಿ ಒಟ್ಟು 20 ಸದಸ್ಯರಿದ್ದಾರೆ. ಅವರಲ್ಲಿ 11(55%) ಪುರುಷ ಸದಸ್ಯರು ಹಾಗೂ 9(45%) ಮಹಿಳಾ ಸದಸ್ಯರಿದ್ದಾರೆ. ಇವರೆಲ್ಲ ವಿವಾಹಿತ ಸದಸ್ಯರಾಗಿದ್ದಾರೆ. ಅವಿವಾಹಿತ ವಿಧುವೆ ಹಾಗೂ ವಿಧುರರಾದ ಯಾವ ಸದಸ್ಯರು ಇಲ್ಲ. [63]

ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಸಂದರ್ಶನ ಮಾಡಿದ ಎಲ್ಲಾ ಗ್ರಾಮ ಪಂಚಾಯತಿ ಸ್ಥಾಯಿಸಮಿತಿ ಸದಸ್ಯರ ವೈವಾಹಿಕ ಸ್ಥಾನಮಾನವನ್ನು ವಿಶ್ಲೇಷಿಸಿದಾಗ ಎಲ್ಲಾ ಸದಸ್ಯರು ವಿವಾಹಿತರಾಗಿರುವುದನ್ನು ಕಾಣಬಹುದು. ಅವಿವಾಹಿತ, ವಿಧುರ ಹಾಗೂ ವಿಧುವೆಯಾದ ಯಾವ ಸದಸ್ಯರು ಸಂದರ್ಶನ ಮಾಡಿದ ಯಾವ ಗ್ರಾಮ ಪಂಚಾಯತಿಯಲ್ಲಿಯೂ ಕಂಡುಬರುವುದಿಲ್ಲ.

ಚಿತ್ರದುರ್ಗ ಜಿಲ್ಲೆಯ ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ವೈವಾಹಿಕ ಸ್ಥಾನಮಾನದ ವಿವರಗಳನ್ನು ಮುಂದಿನಂತೆ ವಿಶ್ಲೇಷಣೆ ಮಾಡಬಹುದಾಗಿದೆ. ಚಿತ್ರದುರ್ಗ ತಾಲ್ಲೂಕು ಪಂಚಾಯತಿಯ ಒಟ್ಟು 27 ಸ್ಥಾಯಿಸಮಿತಿಯ ಸದಸ್ಯರೆಲ್ಲರೂ ವಿವಾಹಿತರಾಗಿದ್ದಾರೆ. ಅವರಲ್ಲಿ 16(59.3%) ಪುರುಷ ಸದಸ್ಯರು ಹಾಗೂ 11(40.71%) ಮಹಿಳಾ ಸದಸ್ಯರು ಇರುವುದನ್ನು ಕಾಣಬಹುದಾಗಿದೆ. ಹಾಗೆಯೇ ಹಿರಿಯೂರು ತಾಲ್ಲೂಕು ಪಂಚಾಯತಿಯ ಒಟ್ಟು 22 ಸ್ಥಾಯಿಸಮಿತಿ ಸದಸ್ಯರೆಲ್ಲರೂ ವಿವಾಹಿತರಾಗಿದ್ದಾರೆ ಅವರಲ್ಲಿ 14(59.1%) ಪುರುಷ ಸದಸ್ಯರು ಹಾಗೂ 8(40.9) ಮಹಿಳಾ ಸದಸ್ಯರು ಇರುತ್ತಾರೆ. ಅದೇ ರೀತಿಯಾಗಿ ಮೊಳಕಾಲ್ಮೂರು ತಾಲ್ಲೂಕು ಪಂಚಾಯತಿಯ ಒಟ್ಟು 12 ಸದಸ್ಯರಲ್ಲಿ 6(50%) ಪುರುಷ ಸದಸ್ಯರು ಹಾಗೂ 6(50%) ಮಹಿಳಾ ಸದಸ್ಯರು ವಿವಾಹಿತರಾಗಿದ್ದಾರೆ.[64]

ಒಟ್ಟಾರೆಯಾಗಿ ಚಿತ್ರದುರ್ಗ ಜಿಲ್ಲೆಯಲ್ಲಿ ಸಂದರ್ಶಿಸಿದ ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರೆಲ್ಲರೂ ವಿವಾಹಿತರಾಗಿದ್ದಾರೆಂದು ನಾವು ತಿಳಿಯಬಹುದಾಗಿದೆ. ಅವಿವಾಹಿತ ಯಾವ ಸದಸ್ಯರು ಈ ತಾಲ್ಲೂಕು ಪಂಚಾಯತಿಯ ಸ್ಥಾಯಿ ಸಮಿತಿ ಸದಸ್ಯರಾಗಿ ಇರುವುದಿಲ್ಲ ಎಂದು ತಿಳಿಯಬಹುದಾಗಿದೆ.

ಚಿತ್ರದುರ್ಗ ಜಿಲ್ಲಾ ಪಂಚಾಯತಿ ಸ್ಥಾಯಿಸಮಿತಿ ಸದಸ್ಯರ ವೈವಾಹಿಕ ಸ್ಥಾನಮಾನದ ವಿವರವನ್ನು ಮುಂದಿನಂತೆ ವಿಶ್ಲೇಷಿಸಬಹುದಾಗಿದೆ. ಜಿಲ್ಲಾ ಪಂಚಾಯತಿಯಲ್ಲಿ ಒಟ್ಟು 34 ಸ್ಥಾಯಿಸಮಿತಿ ಸದಸ್ಯರು ಇದ್ದಾರೆ. ಅವರಲ್ಲಿ 22(64.7%) ಪುರುಷ ಸದಸ್ಯರು ಹಾಗೂ 12(35.3%) ಮಹಿಳಾ ಸದಸ್ಯರು ಇರುವುದನ್ನು ಕಾಣಬಹುದಾಗಿದೆ.[65] ಚಿತ್ರದುರ್ಗ ಜಿಲ್ಲಾ ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರೆಲ್ಲರೂ ವಿವಾಹಿತರಾಗಿದ್ದಾರೆ. ಅವಿವಾಹಿತ, ವಿಧುವೆ, ಹಾಗೂ ವಿಧುರ ಸದಸ್ಯರು ಯಾರು ಈ ಜಿಲ್ಲಾ ಪಂಚಾಯತಿಯಲ್ಲಿ ಕಂಡುಬರುವುದಿಲ್ಲ.

ಪ್ರಸ್ತುತ ಅಧ್ಯಾಯದಲ್ಲಿ ಗ್ರಾಮ ಪಂಚಾಯತಿ, ತಾಲ್ಲೂಕು ಪಂಚಾಯಿತಿ ಮತ್ತು ಜಿಲ್ಲಾ ಪಂಚಾಯತಿಗಳ ಶಿಕ್ಷಣ, ವಯೋಮಾನ, ವೈವಾಹಿಕ ಸ್ಥಿತಿಗತಿ, ಉದ್ಯೋಗ, ವರಮಾನ ಮತ್ತು ಭೂಮಿಯ ವಿವರಗಳನ್ನು ಗಮನಿಸಿದಾಗ ಇವರ ವ್ಯಯಕ್ತಿಕ ವಿವರಗಳು ಕೇವಲ ತಾಲೂಕು ಪಂಚಾಯಿತಿ ಮತ್ತು ಜಿಲ್ಲಾ ಪಂಚಾಯತಿಗಳ ಮಟ್ಟಗಳಲ್ಲಿ ಪರಿಣಾಮ ಬೀರಿದೆ. ಆದರೆ ತಳ ಸ್ತರವಾದ ಗ್ರಾಮ ಪಂಚಾಯತಿಗಳಲ್ಲಿ ಯಾವುದೇ ಪರಿಣಾಮ ಬೀರಿಲ್ಲ ಎಂಬುದು ಸ್ಪಷ್ಟವಾಗಿ ಕಂಡು ಬಂದಿದೆ. ಸ್ಥಾಯಿ ಸಮಿತಿಗಳು ನಿರ್ವಹಿಸುವ ಮುಖ್ಯ ಕಾರ್ಯಗಳನ್ನು ಕೂಲಂಕುಷವಾಗಿ ಪರೀಕ್ಷಿಸಿದಾಗ, ನೀರು ಪೂರೈಕೆ, ಗ್ರಾಮೀಣ ನೈರ್ಮಲೀಕರಣ, ವಸತಿ, ಉದ್ಯೋಗ ಭರವಸೆ, ಯೋಜನೆ, ಸಾಮಾಜಿಕ ನ್ಯಾಯದಂತಹ ವಿಷಯಗಳು ಮತ್ತು ಶಿಕ್ಷಣ ಗ್ರಾಮ ಪಂಚಾಯತಿ ಸ್ಥಾಯಿಸಮಿತಿಗಳು ನಿರ್ವಹಿಸುವ ಕಾರ್ಯಗಳಲ್ಲಿ ವಿಫಲವಾಗಿವೆ. ಕೇವಲ ಗ್ರಾಮ ಪಂಚಾಯತಿ ಸ್ಥಾಯಿ ಸಮಿತಿಗಳು ದಾಖಲೆಗಳಲ್ಲಿ ಮಾತ್ರ ಇದ್ದು, ವಾಸ್ತವ ರೂಪದಲ್ಲಿ ಕಾರ್ಯ ನಿರ್ವವಹಿಸಿಲ್ಲ. ಅದಕ್ಕೆ ಮುಖ್ಯ ಕಾರಣಗಳು ಗ್ರಾಮ ಪಂಚಾಯತಿ ಸ್ಥಾಯಿಸಮಿತಿಗಳ ಬಗ್ಗೆ ತಿಳಿವಳಿಕೆ, ಜ್ಞಾನ ಇಲ್ಲದಿರುವುದು ಬಹುತೇಕ ಚುನಾಯಿತ ಸದಸ್ಯರಲ್ಲಿ ಕಂಡು ಬಂದಿದೆ. ಈ ಕಾರ್ಯಕ್ರಮಗಳನ್ನು ವಿಶ್ಲೇಷಿಸುವ ಮೂಲಕ ಪಂಚಾಯತಿಯ ಕಾರ್ಯಕ್ಷಮತೆಯನ್ನು ಅಳೆಯುವ ಪ್ರಯತ್ನ ಮಾಡಲಾಗಿದೆ. ಈ ಮೂಲಭೂತ ಸೌಲಭ್ಯಗಳ ಪೂರೈಕೆ ಇಂದು ಸ್ಥಾಯಿಸಮಿತಿಗಳ ಮೂಲಕ ಪೂರೈಕೆಯಾಗಿಲ್ಲ ಎಂಬುದನ್ನು ಸ್ಥಾಯಿಸಮಿತಿ ಸದಸ್ಯರಿಂದ, ಗ್ರಾಮದ ಜನತೆಯನ್ನು ಸಂದರ್ಶಿಸುವುದರ ಮೂಲಕ ಪ್ರಸ್ತುತ ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಅಧ್ಯಾಯದಲ್ಲಿ ಮುಖ್ಯಭಾಗವು ಮೂಲಭೂತ ಸವಲತ್ತುಗಳನ್ನು ಗ್ರಾಮ ಪಂಚಾಯತಿಯು ತಳಮಟ್ಟದಲ್ಲಿ ಸ್ಥಾಯಿಸಮಿತಿಗಳ ಕಾರ್ಯಕ್ಷಮತೆಯಲ್ಲಿ ಪೂರಕ ಅಂಶಗಳು ಕಂಡು ಬಂದಿಲ್ಲ. ಸ್ಥಾಯಿಸಮಿತಿಗಳ ಸದಸ್ಯರ ಸಾಮಾಜಿಕ, ಆರ್ಥಿಕ, ರಾಜಕೀಯ ಹಿನ್ನಲೆ, ಕಾರ್ಯಕ್ಷಮತೆ ಜಿಲ್ಲಾ ಪಂಚಾಯತ್, ತಾಲ್ಲೂಕು ಪಂಚಾಯತ್, ಗ್ರಾಮ ಪಂಚಾಯತ್‌ಗಳಲ್ಲಿ ಕಡಿಮೆ ಇರುವುದು ಕಂಡುಬಂದಿದೆ. ಪಂಚಾಯತ್‌ರಾಜ್ ಅಧಿನಿಯಮವು ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿರಬೇಕಾದ ವಿವಿಧ ಸ್ಥಾಯಿಸಮಿತಿಗಳು ಅಧಿಕಾರ ಮತ್ತು ಪ್ರಕಾರಗಳ ಬಗೆಗೆ ವಿಸ್ತೃತವಾದ ವಿವರಣೆಯನ್ನೊದಗಿಸಿರುತ್ತವೆ. ಈ

ಅಧಿನಿಯಮದನ್ವಯ ವಿವಿಧ ಹಂತಗಳ ಸ್ಥಾಯಿಸಮಿತಿಗಳು ಕಾರ್ಯರೂಪಕ್ಕೆ ಬಂದು ಅವುಗಳ ನಿರೀಕ್ಷಿತ ಗುರಿಯನ್ನು ಸಾಧಿಸಬೇಕಿದೆ. ಅವುಗಳ ರಚನೆ, ಕಾರ್ಯರಚನೆ, ಸಾಧನೆ, ವೈಫಲ್ಯ ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಲು ಬೇಕಾದ ವಾತಾವರಣ ಮತ್ತು ಅಗತ್ಯತೆ ಪರಿಹಾರೋಪಾಯಗಳಿಗೆ ಮೂರು ಹಂತದ ಜನಪ್ರತಿನಿಧಿಗಳು, ಅಧಿಕಾರಿಗಳು, ವಿವಿಧ ಸ್ಥಾಯಿಸಮಿತಿಗಳ ಅಧ್ಯಕ್ಷರು ಮತ್ತು ಸದಸ್ಯರು ಮತ್ತು ಜನಸಾಮಾನ್ಯರ ಜತೆ ಮುಕ್ತ ಪ್ರಶ್ನಾವಳಿಯ ನೆರವಿನಿಂದ ಕ್ಷೇತ್ರಕಾರ್ಯ ನಡೆಸಿ ಮಾಹಿತಿಯನ್ನು ಕಲೆ ಹಾಕಲಾಗಿದೆ. ಅಧಿಕೃತ ದಾಖಲೆ ಅಥವಾ ಸರಕಾರಿ ಕಡತಗಳ ಮಾಹಿತಿಯ ಜೊತೆಗೆ ಅಧಿಕಾರಿಗಳು ಮತ್ತು ಜನಪ್ರತಿನಿಧಿಗಳೊಂದಿಗೆ ಚರ್ಚೆಯ ಮೂಲಕ ನಿರ್ದಿಷ್ಟವಾದ ಮಾಹಿತಿಯನ್ನು ಪಡೆಯಲಾಗಿದೆ. ಈ ಮಾಹಿತಿಯ ಪ್ರಕಾರ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ ಪ್ರಕರಣ 61, 61ಎ, 148 ಮತ್ತು 186ರಲ್ಲಿ ಜಿಲ್ಲಾ ಪಂಚಾಯತಿ ಮತ್ತು ತಾಲ್ಲೂಕು ಪಂಚಾಯತಿಯಗಳಲ್ಲಿ ಸ್ಥಾಯಿಸಮಿತಿಗಳ ರಚನೆಗೆ ಅವಕಾಶ ಕಲ್ಪಿಸಿರುವುದರ ಜೊತೆಯಲ್ಲಿ ಈ ಸಮಿತಿಗಳು ಕೆಲವೊಂದು ನಿರ್ಣಯಗಳನ್ನು ತೆಗೆದುಕೊಂಡು ಕಾರ್ಯನಿರ್ವಹಿಸಲು ಅವಕಾಶ ನೀಡಿದ್ದರೂ ಸಹಾ ಇದೇ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 270ರ ಪ್ರಕರಣವು ಮತ್ತೊಂದು ಕಡೆಯಿಂದ ಸ್ಥಾಯಿಸಮಿತಿಗಳ ಕಾರ್ಯಗಳ ಮೇಲೆ ನಿರ್ಬಂಧ ಹೇರಿರುವುದು ಕಂಡು ಬಂದಿದೆ. ಅಂದರೆ 270ರರ ಪ್ರಕರಣದ ಅನ್ವಯ ಸ್ಥಾಯಿಸಮಿತಿಗಳು ತೆಗೆದುಕೊಂಡ ನಿರ್ಣಯಗಳನ್ನು ಜಿಲ್ಲಾ ಪಂಚಾಯತಿ ಮತ್ತು ತಾಲ್ಲೂಕು ಪಂಚಾಯತಿಗಳ ಸಾಮಾನ್ಯ ಸಭೆಗಳಲ್ಲಿ ಸ್ಥಾಯಿಸಮಿತಿಗಳ ತೀರ್ಮಾನಗಳನ್ನು ಪರಿಗಣಿಸಬಹುದು ಅಥವಾ ತಿರಸ್ಕರಿಸಬಹುದಾಗಿರುವುದರಿಂದ 270ನೇ ಪ್ರಕರಣಗಳನ್ನು ಆಧಾರವಾಗಿಟ್ಟುಕೊಂಡು ಬಹುತೇಕ ಸ್ಥಾಯಿಸಮಿತಿಗಳ ನಿರ್ಣಯಗಳನ್ನು ಪರಿಗಣಿಸದೇ ಇರುವುದು ತೌಲನಿಕ ಅಧ್ಯಯನದಲ್ಲಿ ಕಂಡುಬಂದಿದೆ.

ಪಂಚಾಯತ್‌ರಾಜ್ ಕಾಯ್ದೆಯಲ್ಲಿಯೇ ಸ್ಥಾಯಿಸಮಿತಿಗಳನ್ನು ದುರ್ಬಲಗೊಳಿಸುವ ಅಂಶಗಳು ಕಂಡುಬಂದಿದೆ. ಗ್ರಾಮ ಪಂಚಾಯತಿ ಮಟ್ಟದಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡ ಸಂದರ್ಭದಲ್ಲಿ ಕಂಡುಬಂದಂತಹ ಮಹತ್ತರ ಅಂಶವೆಂದರೆ, ಬಹುತೇಕ ಗ್ರಾಮ ಪಂಚಾಯತಿಗಳಲ್ಲಿ ಸ್ಥಾಯಿಸಮಿತಿಗಳ ರಚನೆಯಾಗಿಲ್ಲದಿರುವುದು ಕಂಡು ಬಂದಿದೆ. ಇದಕ್ಕೆ ಸಂಬಂಧಿಸಿದಂತೆ ಕಾರಣಗಳನ್ನು ನೋಡುತ್ತಾ ಹೋದಲ್ಲಿ ಸಮಿತಿಗಳ ರಚನೆ ಅಧಿಕಾರ ಮತ್ತು ಕಾರ್ಯಗಳ ಬಗ್ಗೆ ಹಾಗೂ ಸ್ಥಾಯಿಸಮಿತಿಗಳು ಮತ್ತು ಗ್ರಾಮ ಪಂಚಾಯತಿಗಳ ನಡುವೆ ಇರುವ ಸಂಬಂಧದ ಬಗ್ಗೆ ಗ್ರಾಮ ಪಂಚಾಯತಿ ಸದಸ್ಯರಲ್ಲಿ ಸೂಕ್ತ ಅರಿವಿನ ಕೊರತೆ ಇರುವುದು ಕಂಡು ಬಂದಿದೆ. ಗ್ರಾಮ ಪಂಚಾಯತಿ ಸ್ಥಾಯಿಸಮಿತಿಗಳು ರಚನೆಯಾಗದೆ ಇರುವುದಕ್ಕೆ ಕಾರಣಗಳನ್ನು ಹುಡುಕುತ್ತಾ ಹೋದಲ್ಲಿ ಗ್ರಾಮ ಪಂಚಾಯತಿಯಲ್ಲಿನ ಅಭಿವೃದ್ಧಿ ಅಧಿಕಾರಿಗಳು ಮತ್ತು ಕಾರ್ಯದರ್ಶಿಗಳ

ನೇತೃತ್ವದಲ್ಲಿ ಸಮಿತಿಗಳ ರಚನೆಗೆ ಚಾಲನೆ ನೀಡಬೇಕಾಗಿದೆ. ಆದರೆ ಈ ನೌಕರಶಾಹಿ ವರ್ಗದವರ ನಿರ್ಲಕ್ಷ್ಯ ಮತ್ತು ಬೇಜವಾಬ್ದಾರಿತನದಿಂದ ಈ ಸಮಿತಿಗಳು ರಚಿಸಲ್ಪಟ್ಟಿಲ್ಲದೇ ಇರುವುದು ಕಂಡುಬಂದಿದೆ. ಗ್ರಾಮ ಪಂಚಾಯತಿಗಳಲ್ಲಿ ಸ್ಥಾಯಿಸಮಿತಿಗಳ ಅಧಿಕಾರ ಮತ್ತು ಕಾರ್ಯಗಳನ್ನು ಗಮನಿಸುತ್ತ ಹೋದಲ್ಲಿ ಗ್ರಾಮ ಪಂಚಾಯತಿ ಸ್ಥಾಯಿಸಮಿತಿಗಳಲ್ಲಿ ಒಂದಾದ ಸಾಮಾಜಿಕ ನ್ಯಾಯಸಮಿತಿಯು ದಲಿತ ಮತ್ತು ಹಿಂದುಳಿದ ವರ್ಗಗಳಿಗೆ ರಕ್ಷಣೆ ನೀಡುವ ಮಹತ್ತರವಾದ ಜವಾಬ್ದಾರಿಯನ್ನು ಈ ಸಮಿತಿ ಹೊಂದಿದೆ. ಅಂದರೆ ಹಳ್ಳಿಗಳಲ್ಲಿ ದಲಿತರ ಮೇಲಿನ ದೌರ್ಜನ್ಯ ಪ್ರಕರಣಗಳು ಮಹಿಳೆಯರ ಮೇಲಿನ ಶೋಷಣೆ ಮುಂತಾದ ಘಟನೆಗಳು ಹಳ್ಳಿಗಳಲ್ಲಿ ಜರುಗಿದಾಗ ಅಂತಹ ಪ್ರಕರರಣಗಳನ್ನು ಮೊದಲು ಗ್ರಾಮ ಪಂಚಾಯತಿಯ ಸಾಮಾಜಿಕ ನ್ಯಾಯ ಸಮಿತಿಯ ಮುಂದೆ ತರಬೇಕು. ಆ ಮುಖಾಂತರ ಸಾಮಾಜಿಕ ನ್ಯಾಯ ಸಮಿತಿಯ ಮಹಿಳೆಯರು, ಮಕ್ಕಳು, ದಲಿತರು ಮತ್ತು ಹಿಂದುಳಿದ ವರ್ಗಗಳ ಹಿತರಕ್ಷಣೆ ಮಾಡುವ ಕಾರ್ಯಗಳನ್ನು ಮಾಡಬೇಕು. ಆ ಮುಖಾಂತರ ಸಾಮಾಜಿಕ ನ್ಯಾಯವನ್ನು ಸ್ಥಾಪಿಸುವಂತಹ ಕಾರ್ಯವನ್ನು ಈ ಸಾಮಾಜಿಕ ನ್ಯಾಯ ಸಮಿತಿ ನಿರ್ವಹಿಸಬೇಕು. ಆದರೆ ಇಂತಹ ದೌರ್ಜನ್ಯ ಪ್ರಕರಣಗಳು ಗ್ರಾಮಗಳಲ್ಲಿ ಜರುಗಿದಾಗ ಅಲ್ಲಿನ ಜನತೆ ಮತ್ತು ಪಂಚಾಯತಿ ಸದಸ್ಯರಿಗೆ ಈ ಸಮಿತಿಗಳ ಕಾರ್ಯಗಳ ಬಗ್ಗೆ ಅರಿವಿಲ್ಲದ ಕಾರಣ ನೇರವಾಗಿ ಪೋಲೀಸ್ ಠಾಣೆ ಅಥವಾ ನ್ಯಾಯಾಲಯದ ಮೊರೆ ಹೋಗುತ್ತಿರುವುದು ಕಂಡು ಬಂದಿದೆ. ಆದ್ದರಿಂದ ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರಿಗೆ ಸ್ಥಾಯಿಸಮಿತಿಗಳ ಕುರಿತಂತೆ ಸೂಕ್ತ ಶಿಕ್ಷಣ, ಜ್ಞಾನ, ತರಬೇತಿಯ ಅವಶ್ಯಕತೆ ಇರುವುದು ಕಂಡುಬಂದಿದೆ.

**ಕೊನೆ ಟಿಪ್ಪಣಿಗಳು**

1. **ಜಿಲ್ಲಾ ಪಂಚಾಯತಿಗಳ ದಾಖಲೆಗಳು,** ಜಿಲ್ಲಾ ಪಂಚಾಯತಿ ಕಾರ್ಯಾಲಯ, ಚಿತ್ರದುರ್ಗ,2010–11.
2. **ಪ್ರಾಥಮಿಕ ಅಂಕಿಅಂಶಗಳು ಹಾಗೂ ಆಯಾ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿಗಳ ಕಾರ್ಯಾಲಯಗಳು, 2010–11.
3. **ಪ್ರಾಥಮಿಕ ಅಂಕಿಅಂಶಗಳು ಹಾಗೂ ಆಯಾ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯಗಳು, 2010–11.
4. **ಪ್ರಾಥಮಿಕ ಅಂಕಿಅಂಶಗಳು ಹಾಗೂ ಆಯಾ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯಗಳು, 2010–11.
5. **ಪ್ರಾಥಮಿಕ ಅಂಕಿಅಂಶಗಳು ಹಾಗೂ ಆಯಾ ತಾಲ್ಲೂಕು ಪಂಚಾಯತಿಗಳ ದಾಖಲೆಗಳು,** ತಾಲ್ಲೂಕು ಪಂಚಾಯತಿ ಕಾರ್ಯಾಲಯಗಳು, 2010–11.

6. **ಪ್ರಾಥಮಿಕ ಅಂಕಿಅಂಶಗಳು ಹಾಗೂ ಜಿಲ್ಲಾ ಪಂಚಾಯತಿಗಳ ದಾಖಲೆಗಳು,** ಜಿಲ್ಲಾ ಪಂಚಾಯತಿ ಕಾರ್ಯಾಲಯಗಳು, 2010–11.
7. **ಪ್ರಾಥಮಿಕ ಅಂಕಿಅಂಶಗಳು ಹಾಗೂ ಆಯಾ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯಿತಿ ಕಾರ್ಯಾಲಯಗಳು, 2010–11.
8. **ಪ್ರಾಥಮಿಕ ಅಂಕಿಅಂಶಗಳು ಹಾಗೂ ಬಬ್ಬೂರು ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯಿತಿ ಕಾರ್ಯಾಲಯ, ಬಬ್ಬೂರು, 2010–11.
9. **ಪ್ರಾಥಮಿಕ ಅಂಕಿಅಂಶಗಳು ಹಾಗೂ ಗೌಡನಹಳ್ಳಿ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯಿತಿ ಕಾರ್ಯಾಲಯ ಗೌಡನಹಳ್ಳಿ, 2010–11.
10. **ಪ್ರಾಥಮಿಕ ಅಂಕಿಅಂಶಗಳು, ಹಾನಗಲ್ ಗ್ರಾಮಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಹಾನಗಲ್, 2010–11.
11. **ಪ್ರಾಥಮಿಕ ಅಂಕಿಅಂಶಗಳು ರಾಯಪುರ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ರಾಯಪುರ, 2010–11.
12. **ಪ್ರಾಥಮಿಕ ಅಂಕಿಅಂಶಗಳು, ಮದಕರಿಪುರ ಗ್ರಾಮಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯಿತಿ ಕಾರ್ಯಾಲಯ, ಮದಕರಿಪುರ, 2010–11.
13. **ಪ್ರಾಥಮಿಕ ಅಂಕಿಅಂಶಗಳು, ಮಠದ ಕುರುಬರಹಟ್ಟಿ ಗ್ರಾಮಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯಿತಿ ಕಾರ್ಯಾಲಯ, ಮಠದ ಕುರುಬರಹಟ್ಟಿ, 2010–11.
14. **ಪ್ರಾಥಮಿಕ ಅಂಕಿಅಂಶಗಳು ಹಾಗೂ ಬಬ್ಬೂರು ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಬಬ್ಬೂರು, 2010–11.
15. **ಪ್ರಾಥಮಿಕ ಅಂಕಿಅಂಶಗಳು ಹಾಗೂ ಗೌಡನಹಳ್ಳಿ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಗೌಡನಹಳ್ಳಿ, 2010–11.
16. **ಪ್ರಾಥಮಿಕ ಅಂಕಿಅಂಶಗಳು, ಹಾನಗಲ್ ಗ್ರಾಮಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಹಾನಗಲ್, 2010–11.
17. **ಪ್ರಾಥಮಿಕ ಅಂಕಿಅಂಶಗಳು ರಾಯಪುರ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯಿತಿ ಕಾರ್ಯಾಲಯ, ರಾಯಪುರ, 2010–11.
18. **ಪ್ರಾಥಮಿಕ ಅಂಕಿಅಂಶಗಳು, ಮದಕರಿಪುರ ಗ್ರಾಮಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಮದಕರಿಪುರ, 2010–11.

19. **ಪ್ರಾಥಮಿಕ ಅಂಕಿಅಂಶಗಳು, ಮಠದಕುರುಬರ ಹಟ್ಟಿ ಗ್ರಾಮಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಮಠದ ಕುರುಬರಹಟ್ಟಿ, 2010–11.

20. **ತಾಲ್ಲೂಕು ಪಂಚಾಯತಿಗಳ ದಾಖಲೆಗಳು,** *ತಾಲ್ಲೂಕು* ಪಂಚಾಯತಿ ಕಾರ್ಯಾಲಯ, ಚಿತ್ರದುರ್ಗ, 2010–11.

21. **ತಾಲ್ಲೂಕು ಪಂಚಾಯತಿಗಳ ದಾಖಲೆಗಳು,** ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಹಿರಿಯೂರು, 2010–11.

22. **ತಾಲ್ಲೂಕು ಪಂಚಾಯತಿಗಳ ದಾಖಲೆಗಳು,** ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಮೊಳಕಾಲ್ಮೂರು, 2010–11.

23. **ಜಿಲ್ಲಾ ಪಂಚಾಯತಿಗಳ ದಾಖಲೆಗಳು,** ಜಿಲ್ಲಾ ಪಂಚಾಯತಿ ಕಾರ್ಯಾಲಯ, ಚಿತ್ರದುರ್ಗ, 2010–11.

24. ಪೂರ್ವೋಕ್ತ, ಬಬ್ಬೂರು, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

25. ಪೂರ್ವೋಕ್ತ, ಗೌಡನಹಳ್ಳಿ, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

26. ಪೂರ್ವೋಕ್ತ, ಹಾನಗಲ್, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

27. ಪೂರ್ವೋಕ್ತ, ರಾಯಪುರ, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

28. ಪೂರ್ವೋಕ್ತ, ಮದಕರಿಪುರ, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

29. ಪೂರ್ವೋಕ್ತ, ಮಠದ ಕುರುಬರಹಟ್ಟಿ, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

30. ಪೂರ್ವೋಕ್ತ, ಬಬ್ಬೂರು, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

31. ಪೂರ್ವೋಕ್ತ, ಗೌಡನಹಳ್ಳಿ, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

32. ಪೂರ್ವೋಕ್ತ, ಹಾನಗಲ್, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

33. ಪೂರ್ವೋಕ್ತ, ರಾಯಪುರ, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

34. ಪೂರ್ವೋಕ್ತ, ಮದಕರಿಪುರ, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

35. ಪೂರ್ವೋಕ್ತ, ಮಠದ ಕುರುಬರಹಟ್ಟಿ, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

36. ಪೂರ್ವೋಕ್ತ, ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಚಿತ್ರದುರ್ಗ, 2010–11.

37. ಪೂರ್ವೋಕ್ತ, ತಾಲ್ಲೂಕು ಪಂಚಾಯತಿ ಕಾರ್ಯಾಲಯ–ಹಿರಿಯೂರು, 2010–11.

38. ಪೂರ್ವೋಕ್ತ, ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಮೊಳಕಾಲ್ಮೂರು, 2010–11.

39. ಪೂರ್ವೋಕ್ತ, ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಚಿತ್ರದುರ್ಗ, 2010–11.

40. ಪೂರ್ವೋಕ್ತ, ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಹಿರಿಯೂರು, 2010–11.

41. ಪೂರ್ವೋಕ್ತ, ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಮೊಳಕಾಲ್ಮೂರು, 2010–11.

42. ಪೂರ್ವೋಕ್ತ, ಜಿಲ್ಲಾ ಪಂಚಾಯತಿ ಕಾರ್ಯಾಲಯ,ಚಿತ್ರದುರ್ಗ, 2010–11.

43. ಪೂರ್ವೋಕ್ತ, ಬಬ್ಬೂರು, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

44. ಪೂರ್ವೋಕ್ತ, ಗೌಡನಹಳ್ಳಿ, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

45. ಪೂರ್ವೋಕ್ತ, ಹಾನಗಲ್, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

46. ಪೂರ್ವೋಕ್ತ, ರಾಯಪುರ, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

47. ಪೂರ್ವೋಕ್ತ, ಮದಕರಿಪುರ ಗ್ರಾಮಪಂಚಾಯತಿ ಕಾರ್ಯಾಲಯ, 2010–11.

48. ಪೂರ್ವೋಕ್ತ, ಮಠದ ಕುರುಬರಹಟ್ಟಿ, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

49. ಪೂರ್ವೋಕ್ತ, ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಚಿತ್ರದುರ್ಗ,2010–11.

50. ಪೂರ್ವೋಕ್ತ, ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಹಿರಿಯೂರು, 2010–11.

51. ಪೂರ್ವೋಕ್ತ, ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಮೊಳಕಾಲ್ಮೂರು, 2010–11.

52. .ಪೂರ್ವೋಕ್ತ, ಜಿಲ್ಲಾ ಪಂಚಾಯಿತಿ ಕಾರ್ಯಾಲಯ, ಚಿತ್ರದುರ್ಗ, 2010–11.

53. ಪೂರ್ವೋಕ್ತ, ಬಬ್ಬೂರು, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

54. ಪೂರ್ವೋಕ್ತ, ಗೌಡನಹಳ್ಳಿ, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

55. ಪೂರ್ವೋಕ್ತ, ಹಾನಗಲ್, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

56. ಪೂರ್ವೋಕ್ತ, ರಾಯಪುರ, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

57. ಪೂರ್ವೋಕ್ತ, ಮದಕರಿಪುರ, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

58. ಪೂರ್ವೋಕ್ತ, ಮಠದ ಕುರುಬರಹಟ್ಟಿ, ಗ್ರಾಮಪಂಚಾಯತಿ ಕಾರ್ಯಾಲಯ, 2010–11.

59. ಪೂರ್ವೋಕ್ತ, ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಚಿತ್ರದುರ್ಗ, 2010–11.

60. ಪೂರ್ವೋಕ್ತ, ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಹಿರಿಯೂರು, 2010–11.

61. ಪೂರ್ವೋಕ್ತ, ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಮೊಳಕಾಲ್ಮೂರು, 2010–11.

62. ಪೂರ್ವೋಕ್ತ, ಜಿಲ್ಲಾ ಪಂಚಾಯತಿ ಕಾರ್ಯಾಲಯ, ಚಿತ್ರದುರ್ಗ, 2010–11.

63. ಪೂರ್ವೋಕ್ತ, ಆಯಾ ಗ್ರಾಮಪಂಚಾಯತಿ ಕಾರ್ಯಾಲಯಗಳು, 2010–11.

64. ಪೂರ್ವೋಕ್ತ, ಆಯಾ ತಾಲ್ಲೂಕು ಪಂಚಾಯತಿ ಕಾರ್ಯಾಲಯಗಳು, 2010–11.

65. ಪೂರ್ವೋಕ್ತ, ಜಿಲ್ಲಾ ಪಂಚಾಯತಿ ಕಾರ್ಯಾಲಯ, ಚಿತ್ರದುರ್ಗ, 2010–11.

**ಕೋಷ್ಟಕ–4.1**

**ಜಿಲ್ಲಾ ಪಂಚಾಯತಿ ಮತ್ತು ತಾಲ್ಲೂಕು ಸ್ಥಾಯಿಸಮಿತಿಯ ಸದಸ್ಯರ ಜಾತಿವಾರು ವಿವರ.**

| ಕ್ರಸಂ. | ತಾಲ್ಲೂಕು | ಪ.ಜಾತಿ | | | ಪ.ಪಂ | | | ಹಿ.ವರ್ಗ | | | ಸಾ.ವರ್ಗ | | | ಒಟ್ಟು | | |
|---|---|---|---|---|---|---|---|---|---|---|---|---|---|---|---|---|
| | ಪಂಚಾಯಿತಿ ಹೆಸರು | ಪು | ಮ | ಒ | ಪು | ಮ | ಒ | ಪು | ಮ | ಒ | ಪು | ಮ | ಒ | ಪು | ಮ | ಒ |
| 01 | ಚಿತ್ರದುರ್ಗ ಜಿಲ್ಲಾ ಪಂಚಾಯಿತಿ | 5<br>15.1 | 3<br>9.0 | 8<br>24.0 | 5<br>15.1 | 2<br>6.06 | 7<br>21.00 | 7<br>21.2 | 5<br>15.1 | 12<br>36.3 | 4<br>12.1 | 2<br>6.0 | 6<br>18.1 | 22<br>66.00 | 11<br>33.3 | 33<br>100 |
| 02 | ಚಿತ್ರದುರ್ಗ | 4<br>14.8 | 3<br>11.1 | 7<br>25.9 | 3<br>11.1 | 2<br>7.4 | 5<br>18.5 | 6<br>22.2 | 3<br>11.1 | 6<br>22.2 | 4<br>14.8 | 2<br>7.4 | 6<br>22.0 | 17<br>62.0 | 10<br>37.1 | 27<br>100 |
| 03 | ಹಿರಿಯೂರು | 4<br>18.2 | 2<br>9.1 | 6<br>27.3 | 1<br>4.5 | 2<br>9.1 | 3<br>13.7 | 7<br>31.8 | 5<br>22.7 | 12<br>54.5 | 1<br>4.5 | 0 | 1<br>4.5 | 13<br>59.1 | 9<br>40.1 | 22<br>100 |
| 04 | ಮೊಳಕಾಲ್ಮೂರು | 1<br>8.3 | 1<br>8.3 | 2<br>16.6 | 3<br>25.0 | 3<br>25.0 | 6<br>50.0 | 2<br>16.6 | 2<br>16.6 | 4<br>33.3 | – | – | – | 6<br>50.0 | 6<br>50.0 | 12<br>100 |
| 05 | ಒಟ್ಟು | 9<br>14.8 | 6<br>9.8 | 15<br>24.6 | 7<br>11.5 | 7<br>11.5 | 14<br>22.9 | 15<br>24.6 | 10<br>16.4 | 22<br>36.1 | 5<br>8.2 | 2<br>3.3 | 7<br>11.5 | 36<br>59.1 | 25<br>40.9 | 61<br>100 |

ಮೂಲ: ತಾಲೂಕು ಮತ್ತು ಜಿಲ್ಲಾ ಪಂಚಾಯಿತಿಗಳ ದಾಖಲೆಗಳು, ಜಿಲ್ಲಾ ಪಂಚಾಯಿತಿ ಕಾರ್ಯಾಲಯ, ಚಿತ್ರದುರ್ಗ: 2010–11

## ಕೋಷ್ಟಕ–4.2
## ಗ್ರಾಮ ಪಂಚಾಯಿತಿವಾರು ಸದಸ್ಯರುಗಳ ಜಾತಿವಾರು ವಿವರ

| ಕ್ರ.ಸಂ. | ಗ್ರಾಮಪಂಚಾಯಿತಿ ಹೆಸರು | ಪ.ಜಾತಿ | | | ಪ.ಪಂ | | | ಹಿ.ವರ್ಗ | | | ಸಾ.ವರ್ಗ | | | ಒಟ್ಟು | | |
|---|---|---|---|---|---|---|---|---|---|---|---|---|---|---|---|---|
| | | ಪು | ಮ | ಒ | ಪು | ಮ | ಒ | ಪು | ಮ | ಒ | ಪು | ಮ | ಒ | ಪು | ಮ | ಒ |
| 01 | ಬಬ್ಬೂರು | 3<br>20.0 | 2<br>13.3 | 5<br>33.3 | 0 | 1<br>6.7 | 1<br>6.7 | 3<br>20.0 | 4<br>26.7 | 7<br>46.7 | 2<br>13.3 | 0 | 2<br>13.3 | 8<br>53.3 | 6<br>46.7 | 15<br>100 |
| 02 | ಗೌಡನಹಳ್ಳಿ | 3<br>20.0 | 3<br>20.0 | 06<br>40.0 | 2<br>13.3 | 2<br>13.3 | 04<br>26.7 | 2<br>13.3 | 1<br>6.7 | 03<br>20.0 | 1<br>6.7 | 1<br>6.7 | 02<br>13.3 | 08<br>53.3 | 07<br>46.7 | 15<br>100 |
| 03 | ಹಾನಗಲ್ | 1<br>6.6 | 1<br>6.6 | 02<br>12.5 | 06<br>37.5 | 3<br>18.8 | 09<br>56.3 | 1<br>6.6 | 1<br>6.6 | 02<br>12.5 | 2<br>12.5 | 1<br>6.6 | 03<br>18.8 | 10<br>62.5 | 06<br>37.5 | 16<br>100 |
| 04 | ರಾಯಪುರ | 2<br>12.5 | 2<br>12.5 | 04<br>25.0 | 06<br>37.5 | 3<br>18.8 | 09<br>56.3 | 0 | 1<br>6.6 | 01<br>6.6 | 2<br>12.5 | 0 | 02<br>12.5 | 10<br>62.5 | 06<br>37.5 | 16<br>100 |
| 05 | ಮದಕರಿಪುರ | 2<br>13.3 | 3<br>20.0 | 5<br>33.3 | 1<br>6.7 | 1<br>6.7 | 2<br>13.3 | 3<br>20.0 | 2<br>13.3 | 5<br>33.3 | 2<br>13.3 | 1<br>6.7 | 3<br>20.0 | 8<br>53.3 | 7<br>46.7 | 15<br>100 |
| 06 | ಎಂ.ಕೆ.ಹಟ್ಟಿ | 2<br>10.0 | 2<br>10.0 | 4<br>20.0 | 1<br>5.0 | 2<br>10.0 | 3<br>15.0 | 4<br>20.0 | 3<br>15.0 | 7<br>35.0 | 4<br>20.0 | 2<br>10.0 | 6<br>30.0 | 11<br>55.0 | 9<br>45.0 | 20<br>100 |
| | | 13<br>13.4 | 13<br>13.4 | 26<br>26.8 | 16<br>16.5 | 12<br>12.4 | 28<br>28.9 | 13<br>13.4 | 12<br>12.4 | 25<br>25.8 | 13<br>13.4 | 5<br>5.2 | 18<br>18.6 | 55<br>56.7 | 42<br>43.3 | 97<br>100 |

ಮೂಲ: ಪ್ರಾಥಮಿಕ ಅಂಕಿಅಂಶಗಳು ಹಾಗೂ ಆಯಾ ಗ್ರಾಮಪಂಚಾಯಿತಿಗಳ ದಾಖಲೆಗಳು, ಜಿಲ್ಲಾ ಪಂಚಾಯಿತಿ ಕಾರ್ಯಾಲಯ, ಚಿತ್ರದುರ್ಗ: 2010–11

**ಕೋಷ್ಟಕ–4.3**

**ಗ್ರಾಮ ಪಂಚಾಯತಿವಾರು ಸಂದರ್ಶಿಸಿದ ಗ್ರಾಮಸ್ಥರ ಜಾತಿವಾರು ವಿವರ**

| ಕ್ರ.ಸಂ. | ಗ್ರಾಮಪಂಚಾಯಿತಿ | ಪ.ಜಾತಿ | | | ಪ.ಪಂ | | | ಹಿ.ವರ್ಗ | | | ಸಾ.ವರ್ಗ | | | ಒಟ್ಟು | | |
|---|---|---|---|---|---|---|---|---|---|---|---|---|---|---|---|---|
| | ಹೆಸರು | ಪು | ಮ | ಒ | ಪು | ಮ | ಒ | ಪು | ಮ | ಒ | ಪು | ಮ | ಒ | ಪು | ಮ | ಒ |
| 01 | ಬಬ್ಬೂರು | 4<br>08.00 | 8<br>16.00 | 12<br>24.00 | 8<br>16.00 | 6<br>12.00 | 14<br>28.00 | 9<br>18.00 | 7<br>14.00 | 16<br>32.00 | 5<br>10.00 | 3<br>06.00 | 8<br>16.00 | 26<br>52.00 | 24<br>48.00 | 50<br>100 |
| 02 | ಗೌಡನಹಳ್ಳಿ | 10<br>20.00 | 10<br>20.00 | 20<br>40.00 | 8<br>16.00 | 6<br>12.00 | 14<br>28.00 | 6<br>12.00 | 6<br>12.00 | 12<br>24.00 | 3<br>06.00 | 1<br>02.00 | 4<br>08.00 | 27<br>54.00 | 23<br>46.00 | 50<br>100 |
| 03 | ಹಾನಗಲ್ | 7<br>14.00 | 3<br>06.00 | 10<br>20.00 | 14<br>28.00 | 10<br>20.00 | 24<br>48.00 | 7<br>14.00 | 5<br>10.00 | 12<br>24.00 | 3<br>06.00 | 1<br>02.00 | 4<br>08.00 | 31<br>62.00 | 19<br>38.00 | 50<br>100 |
| 04 | ರಾಯಪುರ | 4<br>08.00 | 6<br>12.00 | 10<br>20.00 | 11<br>22.00 | 7<br>14.ಒ00 | 18<br>36.00 | 7<br>4.00 | 5<br>10.00 | 12<br>24.00 | 5<br>10.00 | 3<br>06.00 | 8<br>16.00 | 29<br>58.00 | 21<br>42.00 | 50<br>100 |
| 05 | ಮದಕರಿಪುರ | 12<br>24.00 | 8<br>16.00 | 20<br>40.00 | 4<br>08.00 | 2<br>04.00 | 6<br>12.00 | 15<br>30.00 | 9<br>18.00 | 24<br>48.00 | 0<br>00.00 | 0<br>00.00 | 0<br>00.00 | 31<br>62.00 | 19<br>38.00 | 50<br>100 |
| 06 | ಎಂ.ಕೆ.ಹಟ್ಟಿ | 13<br>26.00 | 9<br>18.00 | 22<br>44.00 | 4<br>08.00 | 6<br>12.00 | 10<br>20.00 | 5<br>10.00 | 3<br>06.00 | 8<br>16.00 | 6<br>12.00 | 4<br>08.00 | 10<br>20.00 | 28<br>56.00 | 22<br>44.00 | 50<br>100 |
| | | 50<br>16.66 | 44<br>14.66 | 94<br>31.33 | 49<br>16.33 | 37<br>12.33 | 86<br>28.66 | 49<br>16.33 | 35<br>11.66 | 84<br>28.00 | 22<br>07.33 | 12<br>04.00 | 34<br>11.33 | 232<br>77.33 | 128<br>42.66 | 300<br>100 |

ಮೂಲ: ಪ್ರಾಥಮಿಕ ಅಂಕಿಅಂಶಗಳು ಹಾಗೂ ಆಯಾ ಗ್ರಾಮಪಂಚಾಯಿತಿಗಳ ದಾಖಲೆಗಳು, ಜಿಲ್ಲಾ ಪಂಚಾಯಿತಿ ಕಾರ್ಯಾಲಯ, ಚಿತ್ರದುರ್ಗ: 2010–11

**ಕೋಷ್ಟಕ–4.4**

**ಗ್ರಾಮ ಪಂಚಾಯತಿವಾರು ಸ್ಥಾಯಿ ಸಮಿತಿ ಸದಸ್ಯರ ಶೈಕ್ಷಣಿಕ ವಿವರ**

| ಕ್ರ.ಸಂ. | ಗ್ರಾಮಪಂಚಾಯಿತಿ | ಅನಕ್ಷರಸ್ಥರು | | | ಪ್ರಾಥಮಿಕ ಶಿಕ್ಷಣ | | | ಪ್ರೌಢಶಿಕ್ಷಣ | | | ಪದವಿಪೂರ್ವ | | | ಪದವಿ | | | |
|---|---|---|---|---|---|---|---|---|---|---|---|---|---|---|---|---|---|
| | ಹೆಸರು | ಪು | ಮ | ಒ | ಪು | ಮ | ಒ | ಪು | ಮ | ಒ | ಪು | ಮ | ಒ | ಪು | ಮ | ಒ | ಒಟ್ಟು |
| 01 | ಬಬ್ಬೂರು | 0<br>00.00 | 3<br>20.00 | 3<br>20.00 | 1<br>06.66 | 4<br>26.66 | 5<br>33.33 | 4<br>26.60 | 0<br>00.00 | 4<br>26.66 | 1<br>06.60 | 0<br>00.00 | 1<br>06.60 | 2<br>13.30 | 0<br>00.00 | 2<br>13.30 | 15<br>100 |
| 02 | ಗೌಡನಹಳ್ಳಿ | 0<br>00.00 | 0<br>00.00 | 0<br>00.00 | 3<br>20.00 | 5<br>33.33 | 8<br>53,30 | 4<br>26.60 | 2<br>13.30 | 6<br>40.00 | 1<br>06.60 | 0<br>00.00 | 1<br>06.60 | 0<br>00.00 | 0<br>00.00 | 0<br>00.00 | 15<br>100 |
| 03 | ಹಾನಗಲ್ | 0<br>00.00 | 4<br>25.00 | 4<br>25.00 | 0<br>00.00 | 1<br>06.20 | 1<br>06.20 | 6<br>37.50 | 0<br>00.00 | 6<br>37.50 | 2<br>12.50 | 0<br>00.00 | 2<br>12.50 | 2<br>12.50 | 1<br>06.20 | 3<br>18.75 | 16<br>100 |
| 04 | ರಾಯಪುರ | 1<br>06.20 | 5<br>31.25 | 6<br>37.50 | 4<br>25.00 | 1<br>06.20 | 5<br>31.25 | 3<br>18.75 | 0<br>00.00 | 3<br>18.75 | 1<br>06.20 | 0<br>00.00 | 1<br>06.20 | 1<br>06.20 | 0<br>00.00 | 1<br>06.20 | 16<br>100 |
| 05 | ಮದಕರಿಪುರ | 0<br>00.00 | 1<br>06.60 | 1<br>06.60 | 6<br>40.00 | 3<br>20.00 | 9<br>60.00 | 0<br>00.00 | 0<br>00.00 | 0<br>00.00 | 2<br>13.30 | 2<br>13.30 | 4<br>26.66 | 1<br>06.60 | 0<br>00.00 | 1<br>06.60 | 15<br>100 |
| 06 | ಎಂ.ಕೆ.ಹಟ್ಟಿ | 1<br>05.00 | 4<br>20.00 | 5<br>25.00 | 6<br>30.00 | 4<br>20.00 | 10<br>50.00 | 2<br>10.00 | 1<br>05.00 | 3<br>15.00 | 2<br>10.00 | 0<br>00.00 | 2<br>10.00 | 0<br>00.00 | 0<br>00.00 | 0<br>00.00 | 20<br>100 |

ಮೂಲ: ಪ್ರಾಥಮಿಕ ಅಂಕಿಅಂಶಗಳು ಹಾಗೂ ಆಯಾ ಗ್ರಾಮಪಂಚಾಯಿತಿಗಳ ದಾಖಲೆಗಳು, ಜಿಲ್ಲಾ ಪಂಚಾಯಿತಿ ಕಾರ್ಯಾಲಯ, ಚಿತ್ರದುರ್ಗ: 2010–11

## ಕೋಷ್ಟಕ–4.5
## ಗ್ರಾಮ ಪಂಚಾಯತಿವಾರು ಸ್ಥಾಯಿ ಸಮಿತಿ ಸದಸ್ಯರ ಶೈಕ್ಷಣಿಕ ವಿವರ

| ಕ್ರ.ಸಂ. | ತಾಲ್ಲೂಕು ಪಂಚಾ ಯಿತಿಗಳಹೆಸರು | ಅನಕ್ಷರಸ್ಥರು | | | ಪ್ರಾ.ಶಿ | | | ಪ್ರೌ.ಶಿ | | | ಪಪೂ | | | ಪದವಿ | | | ಸಾ.ಪ | | | ಇತರೆ | | |
|---|---|---|---|---|---|---|---|---|---|---|---|---|---|---|---|---|---|---|---|---|---|---|
| | | ಪು | ಮ | ಒ | ಪು | ಮ | ಒ | ಪು | ಮ | ಒ | ಪು | ಮ | ಒ | ಪು | ಮ | ಒ | ಪು | ಮ | ಒ | ಪ | ಮ | ಒ |
| 01 | ಚಿತ್ರದುರ್ಗ ಜಿಲ್ಲಾ ಪಂಚಾಯಿತಿ | 0<br>– | 2<br>05.88 | 2<br>05.88 | 0<br>– | 0<br>– | 0<br>– | 5<br>14.70 | 5<br>14.70 | 10<br>29.41 | 4<br>11.76 | 4<br>11.76 | 8<br>23.52 | 11<br>32.35 | 2<br>05.88 | 13<br>38.33 | 1<br>02.94 | 0<br>– | 1<br>02.94 | 21<br>61.76 | 13<br>38.33 | 34<br>10.00 |
| 02 | ಚಿತ್ರದುರ್ಗ | 1<br>3.70 | 2<br>7.40 | 3<br>11.11 | 3<br>11.11 | 5<br>18.51 | 8<br>29.62 | 3<br>11.11 | 0 | 3<br>11.11 | 6<br>22.22 | 1<br>3.70 | 7<br>25.92 | 4<br>14.81 | 2<br>7.40 | 6<br>22.22 | 0<br>– | 0<br>– | 0<br>– | 17<br>62.96 | 10<br>37.03 | 27<br>10.00 |
| 03 | ಹಿರಿಯೂರು | 0 | 0 | 0 | 2<br>9.52 | 3<br>14.28 | 5<br>23.8 | 2<br>9.52 | 3<br>14.3 | 5<br>23.8 | 2<br>9.52 | 2<br>9.52 | 4<br>19.5 | 6<br>28.5 | 0 | 6<br>28.5 | 1<br>4.8 | 1<br>4.8 | 2<br>9.6 | 13<br>61.9 | 09<br>42.85 | 19<br>10.0 |
| 04 | ಮೊಳಕಾಲ್ಮೂರು | 0 | 3<br>25.0 | 3<br>25.0 | 1<br>8.33 | 2<br>16.7 | 3<br>25.0 | 4<br>33.3 | 1<br>8.33 | 5<br>41.7 | 0 | 0 | 0 | 1<br>8.33 | 0 | 1<br>8.33 | 0 | 0 | 0 | 06<br>41.7 | 07<br>58.3 | 12<br>10.00 |

ಮೂಲ: ಪ್ರಾಥಮಿಕ ಅಂಕಿಅಂಶಗಳು ಹಾಗೂ ಆಯಾ ಗ್ರಾಮಪಂಚಾಯಿತಿಗಳ ದಾಖಲೆಗಳು, ಜಿಲ್ಲಾ ಪಂಚಾಯಿತಿ ಕಾರ್ಯಾಲಯ, ಚಿತ್ರದುರ್ಗ: 2010–11

ಅಧ್ಯಾಯ ಐದು

# ಜಿಲ್ಲಾ, ತಾಲ್ಲೂಕು ಹಾಗೂ ಗ್ರಾಮ ಪಂಚಾಯತಿ ಸ್ಥಾಯಿಸಮಿತಿಗಳ ತೌಲನಿಕ ವಿವರಣೆ

ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿಗಳ ಕಾರ್ಯಕ್ಷಮತೆಯನ್ನು ಅಳೆಯುವ ಮೂಲಕ ಜಿಲ್ಲಾ ಪಂಚಾಯತಿ ಮತ್ತು ತಾಲ್ಲೂಕು ಪಂಚಾಯತಿಗಳನ್ನು ತುಲನಾತ್ಮಕವಾಗಿ ಅಧ್ಯಯನದ ತಳಮಟ್ಟದಲ್ಲಿ ಸ್ಥಾಯಿ ಸಮಿತಿಗಳನ್ನು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುವಲ್ಲಿ ಪೂರಕವಾದ ಅಂಶಗಳನ್ನು ಒದಗಿಸುವಲ್ಲಿ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಗ್ರಾಮ ಪಂಚಾಯತಿ ಸ್ಥಾಯಿ ಸಮಿತಿಗಳು ನಿರ್ವಹಿಸುವ ಮುಖ್ಯ ಕಾರ್ಯಗಳನ್ನು ಕೂಲಂಕುಷವಾಗಿ ಪರೀಕ್ಷಿಸಬೇಕಾಗಿದೆ. ನೀರು ಪೂರೈಕೆ, ಗ್ರಾಮೀಣ ನೈರ್ಮಲೀಕರಣ, ವಸತಿ, ಉದ್ಯೋಗ ಭರವಸೆ, ಯೋಜನೆ, ಸಾಮಾಜಿಕ ನ್ಯಾಯ ಮತ್ತು ಶಿಕ್ಷಣ – ಗ್ರಾಮ ಪಂಚಾಯತಿ ಸ್ಥಾಯಿ ಸಮಿತಿಗಳು ನಿರ್ವಹಿಸುವ ಮುಖ್ಯ ಕಾರ್ಯಗಳಾಗಿವೆ. ಈ ಕಾರ್ಯಕ್ರಮಗಳನ್ನು ವಿಶ್ಲೇಷಿಸುವ ಮೂಲಕ ಪಂಚಾಯತಿಯ ಕಾರ್ಯಕ್ಷಮತೆಯನ್ನು ಅಳೆಯುವ ಪ್ರಯತ್ನ ಮಾಡಲಾಗಿದೆ. ಈ ಮೂಲಭೂತ ಸೌಲಭ್ಯಗಳ ಪೂರೈಕೆ ಇಂದು ಸ್ಥಾಯಿ ಸಮಿತಿಗಳ ಮೂಲಕ ಹೇಗೆ ನಡೆಯುತ್ತದೆ ಎಂಬುದನ್ನು ಸ್ಥಾಯಿ ಸಮಿತಿ ಸದಸ್ಯರು ಗ್ರಾಮದ ಜನತೆಯನ್ನು ಸಂದರ್ಶಿಸುವುದರ ಮೂಲಕ ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಈ ಅಧ್ಯಾಯದಲ್ಲಿ ಜಿಲ್ಲಾಪಂಚಾಯತ್, ತಾಲ್ಲೂಕು ಪಂಚಾಯತ್, ಗ್ರಾಮ ಪಂಚಾಯತ್‌ಗಳ ಸ್ಥಾಯಿ ಸಮಿತಿಗಳು ಎಷ್ಟರಮಟ್ಟಿಗೆ ಗ್ರಾಮದ ಸಮಸ್ಯೆಗಳನ್ನು ನಿವಾರಿಸುವಲ್ಲಿ, ಅನುದಾನಗಳಿಗೆ ಅನುಮೋದನೆ ಕೊಡುವಲ್ಲಿ, ಸ್ಥಾಯಿ ಸಮಿತಿಗಳ ಸಭೆಗಳಲ್ಲಿ ಏನೆಲ್ಲ ಚರ್ಚಿತ ವಿಷಯಗಳನ್ನು ಒಳಗೊಂಡಿದೆ, ನಡಾವಳಿಗಳನ್ನು ಪಾಸುಮಾಡಿದೆ. ಅವು ಯಾವ ರೀತಿ ಅನುಷ್ಠಾನ ಗೊಂಡಿವೆ ಎಂಬುದನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಈ ಮೂರು ಸ್ತರಗಳಲ್ಲಿ ಹೇಗೆ ಸ್ಥಾಯಿ ಸಮಿತಿಗಳು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಿವೆ ಎಂಬುದನ್ನು ತುಲನಾತ್ಮಕವಾಗಿ ಚರ್ಚಿಸಲಾಗಿದೆ.

ಅಧ್ಯಾಯದ ಮುಖ್ಯಭಾಗ ಮೂಲಭೂತ ಸವಲತ್ತುಗಳನ್ನು ಗ್ರಾಮ ಪಂಚಾಯತಿಯು ತಳಮಟ್ಟದಲ್ಲಿ ಸ್ಥಾಯಿಸಮಿತಿಗಳ ಮೂಲಕ ಹೇಗೆ ಪೂರೈಸಿದೆ ಎನ್ನುವುದರ ಸುತ್ತಮುತ್ತ ಇದೆ. ಈ ಅಧ್ಯಾಯದಲ್ಲಿ ಸ್ಥಾಯಿಸಮಿತಿಗಳ ಸದಸ್ಯರ ಸಾಮಾಜಿಕ, ಆರ್ಥಿಕ, ರಾಜಕೀಯ ಹಿನ್ನಲೆಯಲ್ಲಿ ಸ್ಥಾಯಿಸಮಿತಿಗಳ ಕಾರ್ಯಕ್ಷಮತೆ ಮತ್ತು ಸ್ಥಾಯಿಸಮಿತಿಗಳ ಕಾರ್ಯಕ್ಷಮತೆಯನ್ನು ಜಿಲ್ಲಾಪಂಚಾಯತ್, ತಾಲ್ಲೂಕು ಪಂಚಾಯತ್, ಗ್ರಾಮಪಂಚಾಯತ್‌ಗಳಲ್ಲಿ ಹೇಗೆ ಕಾರ್ಯ ನಿರ್ವಹಿಸಿವೆ ಎಂಬುದನ್ನು ತೌಲನಿಕವಾಗಿ ಚರ್ಚಿಸಲಾಗಿದೆ. ವಿಶೇಷವಾಗಿ ಗ್ರಾಮ ಪಂಚಾಯತಿಗಳ ಸ್ಥಾಯಿ ಸಮಿತಿಗಳು ಯಾವ ರೀತಿ ಕೈಗೊಂಡಿವೆ ಎಂಬುದನ್ನು ಅಂಕಿ ಅಂಶಗಳ ಮೂಲಕ ವಿಶ್ಲೇಷಣೆ ಮಾಡಲಾಗಿದೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಆಯ್ಕೆ ಮಾಡಿದ ಗ್ರಾಮ ಪಂಚಾಯತಿವಾರು ಸ್ಥಾಯಿ ಸಮಿತಿ ಸದಸ್ಯರ ಅನುಭವದ ವಿವರವನ್ನು ವಿಶ್ಲೇಷಣೆ ಮಾಡಿದಾಗ ಬಬ್ಬೂರು ಗ್ರಾಮ ಪಂಚಾಯತಿಯಲ್ಲಿ ಒಟ್ಟು 15 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. ಇವರಲ್ಲಿ 15(100%) ಸದಸ್ಯರು ಮೊದಲನೇ ಬಾರಿ ಆಯ್ಕೆಯಾದ ಸದಸ್ಯರಿದ್ದಾರೆ. ಅವರಲ್ಲಿ 8(53.3%) ಪುರುಷರು ಹಾಗೂ 7(46.7%) ಮಹಿಳಾ ಸದಸ್ಯರಿದ್ದಾರೆ.[1] ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಬಬ್ಬೂರು ಗ್ರಾಮ ಪಂಚಾಯತಿಯಲ್ಲಿ ಆಯ್ಕೆಯಾಗಿರುವ ಎಲ್ಲಾ ಸದಸ್ಯರು ಮೊದಲಬಾರಿ ಆಯ್ಕೆಯಾದ ಸದಸ್ಯರಾಗಿದ್ದಾರೆ. ರಾಜಕೀಯದ ಅನುಭವ ಇಲ್ಲದವರು ಆಯ್ಕೆಯಾಗಿದ್ದು ಈ ಪಂಚಾಯತಿಯ ಜನರು ಹೊಸ ಆಡಳಿತವನ್ನು ನಿರೀಕ್ಷಣೆ ಮಾಡಿದ್ದಾರೆ.

ಗೌಡನಹಳ್ಳಿ ಗ್ರಾಮ ಪಂಚಾಯತಿಯಲ್ಲಿ ಒಟ್ಟು 15 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. ಇವರಲ್ಲಿ 15(100%) ಸದಸ್ಯರು ಮೊದಲನೇ ಬಾರಿ ಆಯ್ಕೆಯಾದ ಸದಸ್ಯರಾಗಿದ್ದಾರೆ. ಅವರಲ್ಲಿ 8 (53.3%) ಪುರುಷರು ಹಾಗೂ 7(46.7%) ಮಹಿಳಾ ಸದಸ್ಯರಿದ್ದಾರೆ.[2] ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಗೌಡನಹಳ್ಳಿ ಗ್ರಾಮ ಪಂಚಾಯತಿಯಲ್ಲಿ ಆಯ್ಕೆಯಾಗಿರುವ ಎಲ್ಲಾ ಸದಸ್ಯರು ಮೊದಲಬಾರಿಗೆ ಆಯ್ಕೆಯಾದ ಸದಸ್ಯರಾಗಿದ್ದಾರೆ.

ಹಾನಗಲ್ ಗ್ರಾಮ ಪಂಚಾಯತಿಯಲ್ಲಿ ಒಟ್ಟು 16 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. ಇವರಲ್ಲಿ 16(100%) ಸದಸ್ಯರು ಮೊದಲನೇ ಬಾರಿ ಆಯ್ಕೆಯಾದ ಸದಸ್ಯರಾಗಿದ್ದಾರೆ. ಅವರಲ್ಲಿ 10(62.5%) ಪುರುಷರು ಹಾಗೂ 6(37.5%) ಮಹಿಳಾ ಸದಸ್ಯರಿದ್ದಾರೆ.[3] ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಹಾನಗಲ್ ಗ್ರಾಮ ಪಂಚಾಯತಿಯಲ್ಲಿ ಆಯ್ಕೆಯಾಗಿರುವ ಎಲ್ಲಾ ಸದಸ್ಯರು ಮೊದಲಬಾರಿಗೆ ಆಯ್ಕೆಯಾದ ಸದಸ್ಯರಾಗಿದ್ದಾರೆ.

ರಾಯಪುರ ಗ್ರಾಮ ಪಂಚಾಯತಿಯಲ್ಲಿ ಒಟ್ಟು 16 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. ಇವರಲ್ಲಿ 15(93.8%) ಸದಸ್ಯರು ಮೊದಲ ಬಾರಿ ಆಯ್ಕೆಯಾದ ಸದಸ್ಯರಾಗಿದ್ದಾರೆ. ಅವರಲ್ಲಿ 9(56.3%) ಪುರುಷರು ಹಾಗೂ 6(37.5%) ಮಹಿಳಾ ಸದಸ್ಯರಿದ್ದಾರೆ. ಹಾಗೆಯೇ 2 ನೇ ಬಾರಿ ಆಯ್ಕೆಯಾದ 1(6.3%) ಪುರುಷ ಸದಸ್ಯರಿದ್ದಾರೆ.[4] ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ರಾಯಪುರ ಗ್ರಾಮ ಪಂಚಾಯತಿಯಲ್ಲಿ ಆಯ್ಕೆಯಾಗಿರುವ ಸದಸ್ಯರಲ್ಲಿ ಒಬ್ಬ ಸದಸ್ಯರನ್ನು ಬಿಟ್ಟು ಉಳಿದ ಎಲ್ಲಾ ಸದಸ್ಯರು ಮೊದಲಬಾರಿ ಆಯ್ಕೆಯಾದ ಸದಸ್ಯರಾಗಿದ್ದಾರೆ.

ಮದಕರಿಪುರ ಗ್ರಾಮ ಪಂಚಾಯತಿಯಲ್ಲಿ ಒಟ್ಟು 15 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. ಇವರಲ್ಲಿ 10(66.7%) ಸದಸ್ಯರು ಮೊದಲ ಬಾರಿ ಆಯ್ಕೆಯಾದ ಸದಸ್ಯರಾಗಿದ್ದಾರೆ. ಅವರಲ್ಲಿ 6(40%) ಪುರುಷರು ಹಾಗೂ 4(26.7%) ಮಹಿಳಾ ಸದಸ್ಯರಿದ್ದಾರೆ. ಹಾಗೆಯೇ 2 ನೇ ಬಾರಿ ಆಯ್ಕೆಯಾಗಿರುವ 5(33.3%) ಸದಸ್ಯರಿದ್ದಾರೆ. ಅವರಲ್ಲಿ 2(13.3%) ಪುರುಷ ಹಾಗೂ 3(20%) ಮಹಿಳಾ ಸದಸ್ಯರಿದ್ದಾರೆ.[5] ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಮದಕರಿಪುರ ಗ್ರಾಮ ಪಂಚಾಯತಿಯಲ್ಲಿ ಆಯ್ಕೆಯಾಗಿರುವ ಬಹುತೇಕ ಸದಸ್ಯರು ಮೊದಲಬಾರಿ ಆಯ್ಕೆಯಾಗಿದ್ದಾರೆ.

ಮಠದಕುರುಬರಹಟ್ಟಿ ಗ್ರಾಮ ಪಂಚಾಯತಿಯಲ್ಲಿ ಒಟ್ಟು 20 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. ಇವರಲ್ಲಿ 14(80%) ಸದಸ್ಯರು ಮೊದಲ ಬಾರಿ ಆಯ್ಕೆಯಾಗಿರುವ ಸದಸ್ಯರಾಗಿದ್ದಾರೆ. ಅವರಲ್ಲಿ 6(30%) ಪುರುಷರು ಹಾಗೂ 8(40%) ಮಹಿಳಾ ಸದಸ್ಯರಿದ್ದಾರೆ. ಹಾಗೆಯೇ 6(30%) ಸದಸ್ಯರು 2 ನೇ ಬಾರಿ ಆಯ್ಕೆಯಾದ ಸದಸ್ಯರಾಗಿದ್ದಾರೆ. ಅವರಲ್ಲಿ 5(25%) ಪುರುಷರು ಹಾಗೂ 1(5%) ಮಹಿಳಾ ಸದಸ್ಯರಿದ್ದಾರೆ.[6] ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಎಂ.ಕೆ.ಹಟ್ಟಿ ಗ್ರಾಮ ಪಂಚಾಯತಿಯಲ್ಲಿ ಆಯ್ಕೆಯಾಗಿರುವ ಬಹುತೇಕ ಸದಸ್ಯರು ಮೊದಲಬಾರಿ ಆಯ್ಕೆಯಾದ ಸದಸ್ಯರೆ ಹೆಚ್ಚಾಗಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಚಿತ್ರದುರ್ಗ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ ಗ್ರಾಮ ಪಂಚಾಯತಿವಾರು ಸ್ಥಾಯಿಸಮಿತಿ ಸದಸ್ಯರ ಅನುಭವದ ವಿವರವನ್ನು ವಿಶ್ಲೇಷಣೆ ಮಾಡಿದಾಗ ಹೆಚ್ಚಿನ ಸಂಖ್ಯೆಯ ಸದಸ್ಯರು ಮೊದಲಬಾರಿ ಆಯ್ಕೆಯಾದ ಸದಸ್ಯರೆ ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು.

ಚಿತ್ರದುರ್ಗ ಜಿಲ್ಲೆಯ ತಾಲ್ಲೂಕು ಪಂಚಾಯತಿವಾರು ಸ್ಥಾಯಿಸಮಿತಿ ಸದಸ್ಯರ ಅನುಭವದ ವಿವರಗಳನ್ನು ನೋಡಿದಾಗ. ಚಿತ್ರದುರ್ಗ ತಾಲ್ಲೂಕು ಪಂಚಾಯತಿಯ ಒಟ್ಟು 27 ಸದಸ್ಯರಲ್ಲಿ 1 ಬಾರಿ ಆಯ್ಕೆಯಾದ 26 (96.3%) ಸದಸ್ಯರು ಇರುವುದನ್ನು ಕಾಣಬಹುದು. ಅವರಲ್ಲಿ 15(55.6%)

ಪುರುಷ ಸದಸ್ಯರು ಹಾಗೂ 11(40.7%) ಮಹಿಳಾ ಸದಸ್ಯರು ಇರುವುದನ್ನು ಕಾಣಬಹುದು. ಹಾಗೆಯೇ 2 ನೇ ಬಾರಿ ಆಯ್ಕೆಯಾದ 1(3.7) ಪುರುಷ ಸದಸ್ಯರನ್ನು ಕಾಣಬಹುದು. 3ನೇ ಬಾರಿ ಹಾಗೂ ಅದಕ್ಕಿಂತ ಹೆಚ್ಚು ಬಾರಿ ಆಯ್ಕೆಯಾದ ಯಾವ ಸದಸ್ಯರು ಚಿತ್ರದುರ್ಗ ತಾಲ್ಲೂಕು ಪಂಚಾಯತಿಯ ಸ್ಥಾಯಿ ಸಮಿತಿ ಸದಸ್ಯರಲ್ಲಿ ಕಂಡುಬರುವುದಿಲ್ಲ.[7] ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ 1 ಬಾರಿ ಆಯ್ಕೆಯಾದ ಹೆಚ್ಚು ಸದಸ್ಯರನ್ನು ನಾವು ಕಾಣಬಹುದು.

ಹಿರಿಯೂರು ತಾಲ್ಲೂಕು ಪಂಚಾಯತಿಯ ಸ್ಥಾಯಿ ಸಮಿತಿ ಸದಸ್ಯರ ಅನುಭವದ ವಿವರಗಳನ್ನು ಅವಲೋಕಿಸಿದಾಗ. ಈ ಪಂಚಾಯತಿಯಲ್ಲಿ ಒಟ್ಟು 22 ಸದಸ್ಯರನ್ನು ಕಾಣಬಹುದು. ಅವರಲ್ಲಿ 1 ಬಾರಿ ಆಯ್ಕೆಯಾದ ಅಭ್ಯರ್ಥಿಗಳೇ 22(100%) ಸದಸ್ಯರು ಇರುವುದನ್ನು ಕಾಣಬಹುದು. ಅವರಲ್ಲಿ 13(59.1%) ಪುರುಷ ಸದಸ್ಯರು ಹಾಗೂ 9(40.9%) ಮಹಿಳಾ ಸದಸ್ಯರು ಇರುವುದನ್ನು ಕಾಣಬಹುದು.[8] ಹಾಗೆಯೇ 2 ನೇ ಬಾರಿ ಹಾಗೂ ಅದಕ್ಕಿಂತ ಹೆಚ್ಚು ಬಾರಿ ಆಯ್ಕೆಯಾದ ಯಾವ ಸದಸ್ಯರು ಹಿರಿಯೂರು ತಾಲ್ಲೂಕು ಪಂಚಾಯತಿಯಲ್ಲಿ ಕಂಡುಬರುವುದಿಲ್ಲ.

ಮೊಳಕಾಲ್ಮೂರು ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ಅನುಭವದ ವಿವರಗಳನ್ನು ಅವಲೋಕಿಸಿದಾಗ. ಈ ಪಂಚಾಯತಿಯ ಒಟ್ಟು 12 ಸದಸ್ಯರನ್ನು ಕಾಣಬಹುದು. ಅವರಲ್ಲಿ 1 ಬಾರಿ ಆಯ್ಕೆಯಾದ ಅಭ್ಯರ್ಥಿಗಳೇ 12(100%) ಸದಸ್ಯರು ಇರುವುದನ್ನು ಕಾಣಬಹುದು. ಅವರಲ್ಲಿ 6(50%) ಪುರುಷ ಸದಸ್ಯರು ಹಾಗೂ 6(50%) ಮಹಿಳಾ ಸದಸ್ಯರು ಇರುವುದನ್ನು ಕಾಣಬಹುದು.[9] ಹಾಗೆಯೇ 2ನೇ ಬಾರಿ ಹಾಗೂ ಅದಕ್ಕಿಂತ ಹೆಚ್ಚು ಬಾರಿ ಆಯ್ಕೆಯಾದ ಯಾವ ಸದಸ್ಯರು ಮೊಳಕಾಲ್ಮೂರು ತಾಲ್ಲೂಕು ಪಂಚಾಯತಿಯಲ್ಲಿ ಕಂಡುಬರುವುದಿಲ್ಲ.

ಈ ಎಲ್ಲಾ ಅಂಕಿ ಅಂಶಗಳನ್ನು ನೋಡಿದಾಗ ಚಿತ್ರದುರ್ಗ ಜಿಲ್ಲೆಯ ತಾಲ್ಲೂಕು ಪಂಚಾಯತಿಯ ಸ್ಥಾಯಿ ಸಮಿತಿ ಸದಸ್ಯರ ಅನುಭವದ ವಿವರಗಳನ್ನು ಅವಲೋಕನ ಮಾಡಿದಾಗ ಹೆಚ್ಚಿನ ಪ್ರಮಾಣದಲ್ಲಿ 1 ಬಾರಿ ಆಯ್ಕೆಯಾದ ಸದಸ್ಯರೆ ಹೆಚ್ಚಾಗಿರುವುದನ್ನು ಕಾಣಬಹುದು. 2ನೇ ಬಾರಿ ಹಾಗೂ ಅದಕ್ಕಿಂತ ಹೆಚ್ಚು ಆಯ್ಕೆಯಾದ ಸದಸ್ಯರು ಅತಿ ಕಡಿಮೆ ಪ್ರಮಾಣದಲ್ಲಿರುವುದನ್ನು ಕಂಡುಕೊಳ್ಳಬಹುದಾಗಿದೆ.

ಚಿತ್ರದುರ್ಗ ಜಿಲ್ಲಾ ಪಂಚಾಯತಿಯ ಸ್ಥಾಯಿ ಸಮಿತಿ ಸದಸ್ಯರ ಅನುಭವದ ವಿವರವನ್ನು ವಿಶ್ಲೇಷಣೆ ಮಾಡಿದಾಗ ಚಿತ್ರದುರ್ಗ ಜಿಲ್ಲಾ ಪಂಚಾಯತಿಯಲ್ಲಿ ಒಟ್ಟು 34 ಸ್ಥಾಯಿ ಸಮಿತಿ ಸದಸ್ಯರು ಇರುವುದನ್ನು ಕಾಣಬಹುದು. ಇವರಲ್ಲಿ 1 ಬಾರಿ ಆಯ್ಕೆಯಾದ 26(76.5) ಸದಸ್ಯರಿದ್ದಾರೆ. ಅವರಲ್ಲಿ 14(41.2%) ಪುರುಷ ಸದಸ್ಯರು ಹಾಗೂ 12(35.3%) ಮಹಿಳಾ ಸದಸ್ಯರು ಇರುವುದನ್ನು ಕಾಣಬಹುದು. 2ನೇ ಬಾರಿ ಆಯ್ಕೆಯಾದ 5(14.7%) ಪುರುಷ ಸದಸ್ಯರು ಮಾತ್ರ ಇರುವುದನ್ನು

ಕಾಣಬಹುದು. 2 ನೇಬಾರಿ ಆಯ್ಕೆಯಾದ ಯಾವ ಮಹಿಳಾ ಸದಸ್ಯರು ಕಂಡು ಬರುವುದಿಲ್ಲ. 3ನೇ ಬಾರಿ ಆಯ್ಕೆಯಾದ ಮಹಿಳಾ 3(8.8%) ಪುರುಷ ಸದಸ್ಯರು ಮಾತ್ರ ಇರುವುದನ್ನು ಕಾಣಬಹುದು.[10] ಅದೇ ರೀತಿಯಲ್ಲಿ 3ನೇ ಬಾರಿ ಆಯ್ಕೆಯಾದ ಯಾವ ಮಹಿಳಾ ಸದಸ್ಯರು ಕಂಡುಬರುವುದಿಲ್ಲ. 4ನೇ ಬಾರಿ ಆಯ್ಕೆಯಾದ ಯಾವ ಸದಸ್ಯರು ಈ ಜಿಲ್ಲಾ ಪಂಚಾಯತಿಯಲ್ಲಿ ಕಂಡು ಬರುವುದಿಲ್ಲ.

ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕನ ಮಾಡಿದಾಗ 1 ಬಾರಿ ಆಯ್ಕೆಯಾದ ಸದಸ್ಯರ ಸಂಖ್ಯೆ ಅತಿ ಹೆಚ್ಚಾಗಿರುವುದನ್ನು ಕಾಣಬಹುದು. ಅದೇ ರೀತಿಯಾಗಿ ಒಂದು ಬಾರಿಗಿಂತ ಹೆಚ್ಚಾಗಿ ಆಯ್ಕೆಯಾದ ಯಾವ ಮಹಿಳಾ ಸದಸ್ಯರು ಈ ಜಿಲ್ಲಾ ಪಂಚಾಯತಿಯಲ್ಲಿ ಕಂಡುಬರುವುದಿಲ್ಲ. 1ಕ್ಕಿಂತ ಹೆಚ್ಚು ಬಾರಿ ಆಯ್ಕೆಯಾದ ಎಲ್ಲಾ ಸದಸ್ಯರು ಪುರುಷಸದಸ್ಯರಾಗಿರುವುದನ್ನು ಕಾಣಬಹುದು.

ಚಿತ್ರದುರ್ಗ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ ಗ್ರಾಮ ಪಂಚಾಯತಿವಾರು ಸ್ಥಾಯಿ ಸಮಿತಿ ಸದಸ್ಯರ ರಾಜಕೀಯ ಪಕ್ಷಗಳ ವಿವರವನ್ನು ವಿಶ್ಲೇಷಣೆ ಮಾಡಿದಾಗ ಬಬ್ಬೂರು ಗ್ರಾಮ ಪಂಚಾಯತಿಯಲ್ಲಿ ಒಟ್ಟು 15 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. ಇವರಲ್ಲಿ 1(6.6%) ಪುರುಷ ಸದಸ್ಯರು ಕಾಂಗ್ರೆಸ್ ಪಕ್ಷದಿಂದ ಆಯ್ಕೆಯಾಗಿದ್ದಾರೆ. ಹಾಗೆಯೇ ಬಿಜೆಪಿ ಪಕ್ಷದಿಂದ ಯಾವ ಸದಸ್ಯರು ಆಯ್ಕೆಯಾಗಿಲ್ಲ. ಜನತಾದಳ ಪಕ್ಷದಿಂದ 12(80%) ಸದಸ್ಯರು ಆಯ್ಕೆಯಾಗಿದ್ದಾರೆ. ಅವರಲ್ಲಿ 8(53.3%) ಪುರುಷರು ಹಾಗೂ 4(26.7%) ಮಹಿಳಾ ಸದಸ್ಯರಿದ್ದಾರೆ. ಪಕ್ಷೇತರ ಸದಸ್ಯರು ಯಾರು ಇರುವುದಿಲ್ಲ. ಹಾಗೆಯೇ ಇತರೆ ಪಕ್ಷದಿಂದ 1(6.6%) ಪುರುಷ ಸದಸ್ಯ ಆಯ್ಕೆಯಾಗಿದ್ದಾರೆ.[11] ಒಟ್ಟಾರೆಯಾಗಿ ಬಬ್ಬೂರು ಗ್ರಾಮ ಪಂಚಾಯತಿ ಸ್ಥಾಯಿ ಸಮಿತಿ ಸದಸ್ಯರಲ್ಲಿ ಬಹುತೇಕ ಸದಸ್ಯರು ಜನತಾದಳ ಪಕ್ಷದಿಂದ ಆಯ್ಕೆಯಾದ ಸದಸ್ಯರಾಗಿದ್ದಾರೆ.

ಗೌಡನಹಳ್ಳಿ ಗ್ರಾಮ ಪಂಚಾಯತಿಯಲ್ಲಿ ಒಟ್ಟು 15 ಸ್ಥಾಯಿಸಮಿತಿ ಸದಸ್ಯರಿದ್ದಾರೆ. ಇವರಲ್ಲಿ 10(66.7%) ಸದಸ್ಯರು ಕಾಂಗ್ರೆಸ್ ಪಕ್ಷದಿಂದ ಆಯ್ಕೆಯಾಗಿದ್ದಾರೆ. ಅವರಲ್ಲಿ 5(33.3%) ಪುರುಷರು ಹಾಗೂ 5(33.3%) ಮಹಿಳಾ ಸದಸ್ಯರಿದ್ದಾರೆ. ಹಾಗೆಯೇ ಬಿಜೆಪಿಯಿಂದ ಆಯ್ಕೆಯಾದ ಯಾವ ಸದಸ್ಯರು ಇಲ್ಲ. ಜನತಾದಳ ಪಕ್ಷದಿಂದ 5(33.3%) ಸದಸ್ಯರು ಆಯ್ಕೆಯಾಗಿದ್ದಾರೆ. 3(20%) ಪುರುಷರು ಹಾಗೂ 2(13.3%) ಮಹಿಳಾ ಸದಸ್ಯರಿದ್ದಾರೆ.[12] ಉಳಿದಂತೆ ಯಾವ ಪಕ್ಷದಿಂದಲೂ ಸಹ ಯಾವ ಸದಸ್ಯರು ಆಯ್ಕೆಯಾಗಿಲ್ಲ. ಒಟ್ಟಾರೆಯಾಗಿ ಗೌಡನಹಳ್ಳಿ ಗ್ರಾಮ ಪಂಚಾಯತಿ ಸ್ಥಾಯಿಸಮಿತಿ ಸದಸ್ಯರಲ್ಲಿ ಬಹುತೇಕ ಸದಸ್ಯರು ಕಾಂಗ್ರೆಸ್ ಪಕ್ಷದಿಂದ ಆಯ್ಕೆಯಾದ ಸದಸ್ಯರಾಗಿದ್ದಾರೆ.

ಹಾನಗಲ್ ಗ್ರಾಮ ಪಂಚಾಯತಿಯಲ್ಲಿ ಒಟ್ಟು 16 ಸ್ಥಾಯಿಸಮಿತಿ ಸದಸ್ಯರಿದ್ದಾರೆ. ಇವರಲ್ಲಿ 12(75%) ಸದಸ್ಯರು ಕಾಂಗ್ರೆಸ್ ಪಕ್ಷದಿಂದ ಆಯ್ಕೆಯಾಗಿದ್ದಾರೆ. ಅವರಲ್ಲಿ 7(43.8%) ಪುರುಷರು ಹಾಗೂ 5(31.3%) ಮಹಿಳಾ ಸದಸ್ಯರಿದ್ದಾರೆ. ಹಾಗೆಯೇ ಬಿಜೆಪಿ ಪಕ್ಷದಿಂದ 4(25%) ಸದಸ್ಯರು ಆಯ್ಕೆಯಾಗಿದ್ದಾರೆ. ಇವರಲ್ಲಿ 3(18.8%) ಪುರುಷರು ಹಾಗೂ 1(6.3%) ಮಹಿಳಾ ಸದಸ್ಯರಿದ್ದಾರೆ. ಉಳಿದಂತೆ ಯಾವ ಪಕ್ಷದಿಂದಲೂ ಯಾವ ಸದಸ್ಯರೂ ಆಯ್ಕೆಯಾಗಿಲ್ಲ.[13] ಒಟ್ಟಾರೆಯಾಗಿ ಹಾನಗಲ್ ಗ್ರಾಮ ಪಂಚಾಯತಿ ಸ್ಥಾಯಿಸಮಿತಿ ಸದಸ್ಯರಲ್ಲಿ ಬಹುತೇಕ ಸದಸ್ಯರು ಕಾಂಗ್ರೆಸ್ ಪಕ್ಷದಿಂದ ಆಯ್ಕೆಯಾದ ಸದಸ್ಯರಾಗಿದ್ದಾರೆ.

ರಾಯಪುರ ಗ್ರಾಮ ಪಂಚಾಯತಿಯಲ್ಲಿ ಒಟ್ಟು 16 ಸ್ಥಾಯಿಸಮಿತಿ ಸದಸ್ಯರಿದ್ದಾರೆ. ಇವರಲ್ಲಿ 14(87.5%) ಸದಸ್ಯರು ಕಾಂಗ್ರೆಸ್ ಪಕ್ಷದಿಂದ ಆಯ್ಕೆಯಾಗಿದ್ದಾರೆ. ಅವರಲ್ಲಿ 10 (62.5%) ಪುರುಷರು ಹಾಗೂ 4(25%) ಮಹಿಳಾ ಸದಸ್ಯರಿದ್ದಾರೆ. ಇತರೆ ಪಕ್ಷದಿಂದ 2(12.5%) ಮಹಿಳಾ ಸದಸ್ಯರು ಆಯ್ಕೆಯಾಗಿದ್ದಾರೆ.[14] ಉಳಿದಂತೆ ಬಿಜೆಪಿ, ಜನತಾದಳ ಹಾಗೂ ಪಕ್ಷೇತರು ಯಾವ ಸದಸ್ಯರೂ ಆಯ್ಕೆಯಾಗಿಲ್ಲ. ಒಟ್ಟಾರೆಯಾಗಿ ರಾಯಪುರ ಗ್ರಾಮ ಪಂಚಾಯತಿ ಸ್ಥಾಯಿಸಮಿತಿ ಸದಸ್ಯರಲ್ಲಿ ಬಹುತೇಕ ಸದಸ್ಯರು ಕಾಂಗ್ರೆಸ್ ಪಕ್ಷದಿಂದ ಆಯ್ಕೆಯಾದ ಸದಸ್ಯರಾಗಿದ್ದಾರೆ.

ಮದಕರಿಪುರ ಗ್ರಾಮ ಪಂಚಾಯತಿಯಲ್ಲಿ ಒಟ್ಟು 15 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. ಇವರಲ್ಲಿ 12(80%) ಸದಸ್ಯರು ಜನತಾದಳ ಪಕ್ಷದಿಂದ ಆಯ್ಕೆಯಾಗಿದ್ದಾರೆ. ಅವರಲ್ಲಿ 7(46.7%) ಪುರುಷರು ಹಾಗೂ 5(33.3%) ಮಹಿಳಾ ಸದಸ್ಯರಿದ್ದಾರೆ. ಇತರೆ ಪಕ್ಷದಿಂದ 3(20%) ಸದಸ್ಯರು ಆಯ್ಕೆಯಾಗಿದ್ದಾರೆ. ಅವರಲ್ಲಿ 1(6.6%) ಪುರುಷ ಹಾಗೂ 2(13.3%) ಮಹಿಳಾ ಸದಸ್ಯರಿದ್ದಾರೆ.[15] ಉಳಿದಂತೆ ಕಾಂಗ್ರೆಸ್, ಬಿಜೆಪಿ, ಹಾಗೂ ಪಕ್ಷೇತರ ಪಕ್ಷಗಳಿಂದ ಆಯ್ಕೆಯಾದ ಯಾವ ಸದಸ್ಯರೂ ಇಲ್ಲ. ಒಟ್ಟಾರೆಯಾಗಿ ಮದಕರಿಪುರ ಗ್ರಾಮ ಪಂಚಾಯತಿ ಸ್ಥಾಯಿ ಸಮಿತಿ ಸದಸ್ಯರಲ್ಲಿ ಬಹುತೇಕ ಸದಸ್ಯರು ಜನತಾದಳ ಪಕ್ಷದಿಂದ ಆಯ್ಕೆಯಾದ ಸದಸ್ಯರಾಗಿದ್ದಾರೆ.

ಮಠದ ಕುರುಬರಹಟ್ಟಿ ಗ್ರಾಮ ಪಂಚಾಯತಿಯಲ್ಲಿ ಒಟ್ಟು 20 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. ಇವರಲ್ಲಿ 4(20%) ಸದಸ್ಯರು ಕಾಂಗ್ರೆಸ್ ಪಕ್ಷದಿಂದ ಆಯ್ಕೆಯಾಗಿದ್ದಾರೆ. ಅವರಲ್ಲಿ 1(5%) ಪುರುಷರು ಹಾಗೂ 3 (15%) ಮಹಿಳಾ ಸದಸ್ಯರಿದ್ದಾರೆ. ಹಾಗೆಯೇ ಬಿಜೆಪಿ ಪಕ್ಷದಿಂದ 6(30%) ಸದಸ್ಯರು ಆಯ್ಕೆಯಾಗಿದ್ದಾರೆ. ಅವರಲ್ಲಿ 5(25%) ಪುರುಷರು ಹಾಗೂ 1(5%) ಮಹಿಳಾ ಸದಸ್ಯರು ಆಯ್ಕೆಯಾಗಿದ್ದಾರೆ. ಪಕ್ಷೇತರ ಸದಸ್ಯರು ಯಾರೂ ಇರುವುದಿಲ್ಲ. ಹಾಗೂ ಇತರೆ ಪಕ್ಷದಿಂದ 6(30%) ಮಹಿಳಾ ಸದಸ್ಯರು ಆಯ್ಕೆಯಾಗಿದ್ದಾರೆ.[16] ಒಟ್ಟಾರೆಯಾಗಿ ಎಂ.ಕೆ.ಹಟ್ಟಿ

ಗ್ರಾಮ ಪಂಚಾಯತಿ ಸ್ಥಾಯಿಸಮಿತಿ ಸದಸ್ಯರಲ್ಲಿ ಎಲ್ಲಾ ಪಕ್ಷದಿಂದ ಸಮಾನವಾಗಿ ಆಯ್ಕೆಯಾಗಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಚಿತ್ರದುರ್ಗ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ ಗ್ರಾಮ ಪಂಚಾಯತಿವಾರು ಸ್ಥಾಯಿಸಮಿತಿ ಸದಸ್ಯರುಗಳ ರಾಜಕೀಯ ಪಕ್ಷಗಳ ವಿವರಗಳನ್ನು ವಿಶ್ಲೇಷಿಸಿದಾಗ ಹೆಚ್ಚಿನ ಗ್ರಾಮ ಪಂಚಾಯತಿಗಳಲ್ಲಿ ಕಾಂಗ್ರೆಸ್ ಹಾಗೂ ಜನತಾದಳ ಸದಸ್ಯರು ಆಯ್ಕೆಯಾಗಿರುವುದನ್ನು ಕಾಣಬಹುದು. ಉಳಿದಂತೆ ಬಿಜೆಪಿ ಹಾಗೂ ಪಕ್ಷೇತರದಿಂದ ಆಯ್ಕೆಯಾದ ಸದಸ್ಯರು ಕಡಿಮೆ ಪ್ರಮಾಣದಲ್ಲಿರುವುದನ್ನು ಕಾಣಬಹುದು.

ಚಿತ್ರದುರ್ಗ ಜಿಲ್ಲೆಯ ತಾಲ್ಲೂಕು ಪಂಚಾಯತಿವಾರು ಸ್ಥಾಯಿಸಮಿತಿ ಸದಸ್ಯರ ರಾಜಕೀಯ ಪಕ್ಷಗಳ ವಿವರಗಳನ್ನು ಈ ಮುಂದಿನಂತೆ ವಿಶ್ಲೇಷಣೆ ಮಾಡಬಹುದಾಗಿದೆ. ಚಿತ್ರದುರ್ಗ ತಾಲ್ಲೂಕು ಪಂಚಾಯತಿಯ ಸ್ಥಾಯಿ ಸಮಿತಿಯ ಒಟ್ಟು 27 ಸದಸ್ಯರಲ್ಲಿ ಕಾಂಗ್ರೆಸ್ ಪಕ್ಷದಿಂದ ಆಯ್ಕೆಯಾದ 7(25.9%) ಸದಸ್ಯರಿದ್ದಾರೆ. ಅವರಲ್ಲಿ ಪುರುಷ 7(25.9%) ಸದಸ್ಯರಿದ್ದಾರೆ. ಕಾಂಗ್ರೆಸ್ ಪಕ್ಷದಿಂದ ಆಯ್ಕೆಯಾದ ಯಾವ ಮಹಿಳಾ ಸದಸ್ಯರು ಇರುವುದಿಲ್ಲ. ಬಿಜೆಪಿ ಪಕ್ಷದಿಂದ 5(18.5%) ಸದಸ್ಯರು ಆಯ್ಕೆಯಾಗಿದ್ದಾರೆ. ಅವರಲ್ಲಿ 3(11.1%) ಪುರುಷ ಹಾಗೂ 2(7.4%) ಮಹಿಳಾ ಸದಸ್ಯರನ್ನು ಕಾಣುತ್ತೇವೆ. ಅದೇ ರೀತಿಯಾಗಿ ಜಾತ್ಯತೀತ ಜನತಾದಳ ಪಕ್ಷದಿಂದ 12(44.4%) ಸದಸ್ಯರು ಆಯ್ಕೆಯಾಗಿದ್ದಾರೆ. ಅವರಲ್ಲಿ 5(18.5%) ಪುರುಷ ಹಾಗೂ 7(25.9%) ಮಹಿಳಾ ಸದಸ್ಯರಿದ್ದಾರೆ. ಪಕ್ಷೇತರ ಸದಸ್ಯರು 2(7.4%) ಇದ್ದಾರೆ. ಆ ಇಬ್ಬರು ಪುರುಷ ಸದಸ್ಯರಾಗಿದ್ದಾರೆ. ಪಕ್ಷೇತರ ಸದಸ್ಯರಲ್ಲಿ ಯಾರೂ ಮಹಿಳಾ ಸದಸ್ಯರು ಕಾಣಸಿಗುವುದಿಲ್ಲ. ಇತರೆ ಪಕ್ಷದಿಂದ 1(3.7%) ಸದಸ್ಯರು ಆಯ್ಕೆಯಾಗಿದ್ದಾರೆ.[17] ಇವರು ಮಹಿಳಾ ಸದಸ್ಯರಾಗಿರುವುದನ್ನು ಕಾಣಬಹುದು.

ಈ ಎಲ್ಲಾ ಆಂಕಿ ಅಂಶಗಳನ್ನು ಅವಲೋಕನ ಮಾಡಿದಾಗ ಕಾಂಗ್ರೆಸ್ ಹಾಗೂ ಬಿಜೆಪಿ ಪಕ್ಷದ ಸದಸ್ಯರಿಗಿಂತ ಜಾತ್ಯಾತೀತ ಜನತಾದಳ ಪಕ್ಷದ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ನಾವು ಕಾಣಬಹುದು.

ಹಿರಿಯೂರು ತಾಲ್ಲೂಕು ಪಂಚಾಯತಿವಾರು ಸ್ಥಾಯಿ ಸಮಿತಿ 22 ಸದಸ್ಯರಲ್ಲಿ ಕಾಂಗ್ರೆಸ್ ಪಕ್ಷದಿಂದ ಆಯ್ಕೆಯಾದ 5(22.7%) ಸದಸ್ಯರಿದ್ದಾರೆ. ಅವರಲ್ಲಿ ಪುರುಷ ಸದಸ್ಯರೇ 5(22.7%) ಸದಸ್ಯರಿದ್ದಾರೆ. ಕಾಂಗ್ರೆಸ್ ಪಕ್ಷದಿಂದ ಆಯ್ಕೆಯಾದ ಯಾವ ಮಹಿಳಾ ಸದಸ್ಯರು ಇರುವುದಿಲ್ಲ. ಬಿಜೆಪಿ ಪಕ್ಷದಿಂದ ಯಾವ ಸದಸ್ಯರೂ ಆಯ್ಕೆಯಾಗಿಲ್ಲ. ಹಾಗೆಯೇ ಜಾತ್ಯತೀತ ಜನತಾದಳ ಪಕ್ಷದಿಂದ 16(72.7%) ಸದಸ್ಯರು ಆಯ್ಕೆಯಾಗಿದ್ದಾರೆ. ಅವರಲ್ಲಿ 7(31.8%) ಪುರುಷ ಹಾಗೂ 9(40.9%) ಮಹಿಳಾ ಸದಸ್ಯರಿದ್ದಾರೆ. ಪಕ್ಷೇತರ ಸದಸ್ಯರಾಗಿ 1(4.5%) ಪುರುಷ ಸದಸ್ಯರು

ಆಯ್ಕೆಯಾಗಿದ್ದಾರೆ.[18] ಅದೇ ರೀತಿಯಲ್ಲಿ ಇತರೆ ಯಾವುದೇ ಪಕ್ಷದಿಂದ ಯಾವ ಸದಸ್ಯರೂ ಆಯ್ಕೆಯಾಗಿರುವುದಿಲ್ಲ.

ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕನ ಮಾಡಿದಾಗ ಜಾತ್ಯತೀತ ಜನತಾದಳ ಪಕ್ಷದ ವತಿಯಿಂದ ಹೆಚ್ಚಿನ ಸದಸ್ಯರು ಆಯ್ಕೆಯಾಗಿದ್ದಾರೆ. ಕಾಂಗ್ರೆಸ್ ಪಕ್ಷದ ಕೆಲವೇ ಸದಸ್ಯರು ಇದ್ದಾರೆ. ಆದರೆ ಬಿಜೆಪಿಯ ಯಾವ ಸದಸ್ಯರೂ ಈ ತಾಲ್ಲೂಕು ಸ್ಥಾಯಿಸಮಿತಿ ಸದಸ್ಯರಲ್ಲಿ ಕಾಣಸಿಗುವುದಿಲ್ಲ.

ಮೊಳಕಾಲ್ಮೂರು ತಾಲ್ಲೂಕು ಪಂಚಾಯತಿವಾರು ಸ್ಥಾಯಿ ಸಮಿತಿಯ ಒಟ್ಟು 12 ಸದಸ್ಯರು ಇರುತ್ತಾರೆ. ಇವರಲ್ಲಿ ಕಾಂಗ್ರೆಸ್ ಪಕ್ಷದಿಂದ 6(50%) ಸದಸ್ಯರಿದ್ದಾರೆ. ಅವರಲ್ಲಿ 3(25%) ಪುರುಷ ಸದಸ್ಯರು ಹಾಗೂ 3(25%) ಮಹಿಳಾ ಸದಸ್ಯರಿದ್ದಾರೆ. ಬಿಜೆಪಿ ಪಕ್ಷದಿಂದ ಆಯ್ಕೆಯಾದ 2(16.6%) ಸದಸ್ಯರಿದ್ದಾರೆ ಅವರಲ್ಲಿ 1(8.3%) ಪುರುಷ ಹಾಗೂ 1(8.3%) ಮಹಿಳಾ ಸದಸ್ಯರನ್ನು ಕಾಣಬಹುದು. ಜಾತ್ಯತೀತ ಜನತಾದಳ ಪಕ್ಷದಿಂದ 4(33.3%) ಸದಸ್ಯರಿದ್ದಾರೆ. ಅವರಲ್ಲಿ 2(16.6%) ಪುರುಷ ಹಾಗೂ 2(16.6%) ಮಹಿಳಾ ಸದಸ್ಯರಿದ್ದಾರೆ.[19] ಪಕ್ಷೇತರ ಹಾಗೂ ಇತರೆ ಯಾವುದೇ ಪಕ್ಷದಿಂದ ಯಾವ ಸದಸ್ಯರೂ ಈ ಸ್ಥಾಯಿ ಸಮಿತಿಯಲ್ಲಿ ಕಾಣಸಿಗುವುದಿಲ್ಲ.

ಒಟ್ಟಾರೆ ಈ ಎಲ್ಲಾ ಅಂಕಿ ಆಂಶಗಳನ್ನು ಅವಲೋಕಿಸಿದಾಗ ಕಾಂಗ್ರೆಸ್ ಪಕ್ಷದ ಸದಸ್ಯರು ಹೆಚ್ಚಿನ ಸಂಖ್ಯೆಯ ಸದಸ್ಯರಿದ್ದಾರೆ. ಬಿಜೆಪಿ ಹಾಗೂ ಜಾತ್ಯತೀತ ಜನತಾದಳ ಪಕ್ಷದ ಸದಸ್ಯರು ಕಡಿಮೆ ಸಂಖ್ಯೆಯಲ್ಲಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಚಿತ್ರದುರ್ಗ ಜಿಲ್ಲೆಯ ಎಲ್ಲಾ ತಾಲ್ಲೂಕು ಪಂಚಾಯತಿವಾರು ಸ್ಥಾಯಿಸಮಿತಿ ಸದಸ್ಯರ ರಾಜಕೀಯ ಪಕ್ಷಗಳ ವಿವರಗಳನ್ನು ಅವಲೋಕಿಸಿದಾಗ ಜಾತ್ಯತೀತ ಜನತಾದಳ ಪಕ್ಷದಿಂದ ಆಯ್ಕೆಯಾದ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು. ಕಾಂಗ್ರೆಸ್ ಹಾಗೂ ಬಿಜೆಪಿ ಪಕ್ಷದ ಸದಸ್ಯರು ಕಡಿಮೆ ಸಂಖ್ಯೆಯ ಸದಸ್ಯರು ಇರುವುದನ್ನು ಕಾಣಬಹುದು.

ಚಿತ್ರದುರ್ಗ ಜಿಲ್ಲಾ ಪಂಚಾಯತಿವಾರು ಸ್ಥಾಯಿಸಮಿತಿ ಸದಸ್ಯರ ರಾಜಕೀಯ ಪಕ್ಷಗಳ ವಿವರವನ್ನು ವಿಶ್ಲೇಷಣೆ ಮಾಡಿದಾಗ ಈ ಮುಂದಿನ ಅಂಕಿ ಅಂಶಗಳನ್ನು ಕಂಡುಕೊಳ್ಳಲಾಯಿತು. ಚಿತ್ರದುರ್ಗ ಜಿಲ್ಲಾ ಪಂಚಾಯತಿಯ ಸ್ಥಾಯಿ ಸಮಿತಿಯಲ್ಲಿ ಒಟ್ಟು 34 ಸದಸ್ಯರನ್ನು ಕಾಣಬಹುದು. ಅವರಲ್ಲಿ ಕಾಂಗ್ರೆಸ್ ಪಕ್ಷದಿಂದ 14(41.2%) ಆಯ್ಕೆಯಾಗಿದ್ದಾರೆ. ಅವರಲ್ಲಿ 6(17.6%) ಪುರುಷ ಸದಸ್ಯರು ಮತ್ತು 8(23.5%) ಮಹಿಳಾ ಸದಸ್ಯರಿದ್ದಾರೆ. ಬಿಜೆಪಿ ಪಕ್ಷದಿಂದ 6(17.6%) ಸದಸ್ಯರಿದ್ದಾರೆ. ಅವರದಲ್ಲಿ 6(17.6%) ಪುರುಷ ಸದಸ್ಯರಿದ್ದಾರೆ. ಬಿಜೆಪಿ ಪಕ್ಷದಿಂದ ಯಾವ ಮಹಿಳಾ ಸದಸ್ಯರು ಇರುವುದಿಲ್ಲ. ಜಾತ್ಯಾತೀತ ಜನತಾದಳ ಪಕ್ಷದಿಂದ 12(25.3%) ಸದಸ್ಯರು ಅಯ್ಕೆಯಾಗಿದ್ದಾರೆ.

ಅವರಲ್ಲಿ 8(23.5%) ಪುರುಷ ಸದಸ್ಯರು ಹಾಗೂ 4(11.8%) ಮಹಿಳಾ ಸದಸ್ಯರು ಇದ್ದಾರೆ. ಹಾಗೆಯೇ ಪಕ್ಷೇತರ ಸದಸ್ಯರು ಯಾರು ಇಲ್ಲ. ಇತರೆ ಪಕ್ಷದಿಂದ 2(5.9%) ಸದಸ್ಯರಿದ್ದಾರೆ. ಅವರಲ್ಲಿ 2(5.9%) ಪುರುಷ ಸದಸ್ಯರಿದ್ದಾರೆ.[20] ಇತರೆ ಪಕ್ಷದಿಂದ ಯಾವ ಮಹಿಳಾ ಸದಸ್ಯರು ಆಯ್ಕೆಯಾಗಿರುವುದಿಲ್ಲ.

ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕನ ಮಾಡಿದಾಗ ಚಿತ್ರದುರ್ಗ ಜಿಲ್ಲಾ ಪಂಚಾಯತಿ ಸ್ಥಾಯಿಸಮಿತಿ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿ ಕಾಂಗ್ರೆಸ್ ಹಾಗೂ ಜಾತ್ಯಾತೀತ ಜನತಾದಳ ಪಕ್ಷಗಳಿಂದ ಆಯ್ಕೆಯಾಗಿರುವುದನ್ನು ಕಾಣುತ್ತೇವೆ. ಆಡಳಿತರೂಢ ಬಿಜೆಪಿ ಪಕ್ಷದಿಂದ ಆಯ್ಕೆಯಾಗಿರುವ ಸದಸ್ಯರ ಸಂಖ್ಯೆ ಅತ್ಯಂತ ಕಡಿಮೆ ಪ್ರಮಾಣದಲ್ಲಿರುವುದನ್ನು ಕಾಣಬಹುದು.

ಚಿತ್ರದುರ್ಗ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ ಗ್ರಾಮ ಪಂಚಾಯತಿವಾರು ಸ್ಥಾಯಿಸಮಿತಿ ಸದಸ್ಯರ ಆಯ್ಕೆಯ ವಿಧಾನದ ವಿವರಗಳನ್ನು ವಿಶ್ಲೇಷಿಸಲಾಗಿದೆ. ಬಬ್ಬೂರು ಗ್ರಾಮ ಪಂಚಾಯತಿ ಸ್ಥಾಯಿಸಮಿತಿ ಸದಸ್ಯರ ಆಯ್ಕೆಯ ವಿಧಾನವನ್ನು ಗಮನಿಸಿದಾಗ ಒಟ್ಟು 15 ಸದಸ್ಯರಲ್ಲಿ 12(80%) ಸದಸ್ಯರು ಚುನಾವಣೆ ಮೂಲಕ ಆಯ್ಕೆಯಾಗಿದ್ದಾರೆ. ಅವರಲ್ಲಿ 7(46.7%) ಪುರುಷರು ಹಾಗೂ 5(33.3%) ಮಹಿಳಾ ಸದಸ್ಯರಿದ್ದಾರೆ. ಅವರಲ್ಲಿ 1(6.7%) ಪುರುಷ ಹಾಗೂ 2(13.3%) ಮಹಿಳಾ ಸದಸ್ಯರು ಆಯ್ಕೆಯಾಗಿದ್ದಾರೆ.[21] ಒಟ್ಟಾರೆ ಬಬ್ಬೂರು ಗ್ರಾಮ ಪಂಚಾಯತಿಯನ್ನು ಅವಲೋಕಿಸಿದಾಗ ಚುನಾವಣೆ ಮೂಲಕ ಆಯ್ಕೆಯಾಗಿರುವ ಹೆಚ್ಚು ಸದಸ್ಯರನ್ನು ಕಾಣುತ್ತೇವೆ.

ಗೌಡನಹಳ್ಳಿ ಗ್ರಾಮ ಪಂಚಾಯತಿ ಸ್ಥಾಯಿಸಮಿತಿ ಸದಸ್ಯರ ಆಯ್ಕೆಯ ವಿಧಾನವನ್ನು ವಿಶ್ಲೇಷಿಸಿದಾಗ ಒಟ್ಟು 15 ಸದಸ್ಯರಲ್ಲಿ 7(46.7%) ಸದಸ್ಯರು ಚುನಾವಣೆ ಮೂಲಕ ಆಯ್ಕೆಯಾಗಿದ್ದಾರೆ. ಅವರಲ್ಲಿ 4(26.7%) ಪುರುಷರು ಹಾಗೂ 3(20%) ಮಹಿಳಾ ಸದಸ್ಯರು ಆಯ್ಕೆಯಾಗಿದ್ದಾರೆ. ಅವಿರೋಧವಾಗಿ 8(53.3%) ಸದಸ್ಯರು ಆಯ್ಕೆಯಾಗಿದ್ದಾರೆ. ಅವರಲ್ಲಿ 4(26.7%) ಪುರುಷರು 4(26.7%)ಮಹಿಳಾ ಸದಸ್ಯರು ಆಯ್ಕೆಯಾಗಿದ್ದಾರೆ.[22] ಒಟ್ಟಾರೆಯಾಗಿ ಗೌಡನಹಳ್ಳಿ ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ಆಯ್ಕೆವಿಧಾನವನ್ನು ಅವಲೋಕಿಸಿದಾಗ ಚುನಾವಣೆ ಮೂಲಕ ಆಯ್ಕೆಯಾದ ಸದಸ್ಯರು ಕಡಿಮೆ ಸಂಖ್ಯೆಯಲ್ಲಿದ್ದು ಅವಿರೋಧವಾಗಿ ಆಯ್ಕೆಯಾದ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು.

ಹಾನಗಲ್ ಗ್ರಾಮ ಪಂಚಾಯತಿ ಸ್ಥಾಯಿಸಮಿತಿ ಸದಸ್ಯರ ಆಯ್ಕೆಯ ವಿಧಾನವನ್ನು ವಿಶ್ಲೇಷಣೆಗೆ ಒಳಪಡಿಸಿದಾಗ 16 ಸದಸ್ಯರಲ್ಲಿ 14(87.6%) ಸದಸ್ಯರು ಚುನಾವಣೆ ಮೂಲಕ ಆಯ್ಕೆಯಾಗಿದ್ದಾರೆ. ಅವರಲ್ಲಿ 9(56.3%) ಪುರುಷರು ಹಾಗೂ 5(31.3%) ಮಹಿಳಾ ಸದಸ್ಯರು ಆಯ್ಕೆಯಾಗಿದ್ದಾರೆ. ವಿರೋಧವಾಗಿ 2(12.5%) ಸದಸ್ಯರು ಆಯ್ಕೆಯಾಗಿದ್ದಾರೆ. ಅವರಲ್ಲಿ 1(6.6%)

ಪುರುಷ ಹಾಗೂ 1(6.6%) ಮಹಿಳಾ ಸದಸ್ಯರು ಆಯ್ಕೆಯಾಗಿದ್ದಾರೆ.[23] ಒಟ್ಟಾರೆ ಹಾನಗಲ್ ಗ್ರಾಮ ಪಂಚಾಯತಿಯ ಸ್ಥಾಯಿ ಸಮಿತಿ ಸದಸ್ಯರ ಆಯ್ಕೆಯ ವಿಧಾನವನ್ನು ಅವಲೋಕಿಸಿದಾಗ ಚುನಾವಣೆ ಮೂಲಕ ಆಯ್ಕೆಯಾದ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು.

ರಾಯಪುರ ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ಆಯ್ಕೆಯ ವಿಧಾನವನ್ನು ವಿಶ್ಲೇಷಿಸಿದಾಗ ಈ ಪಂಚಾಯತಿಯಲ್ಲಿ ಒಟ್ಟು 16 ಸದಸ್ಯರನ್ನು ಕಾಣಬಹುದು. ಇವರಲ್ಲಿ 12(75%) ಸದಸ್ಯರು ಚುನಾವಣೆಯ ಮೂಲಕ ಆಯ್ಕೆಯಾಗಿದ್ದಾರೆ. ಅವರಲ್ಲಿ 9(56.3%) ಪುರುಷ ಸದಸ್ಯರು ಹಾಗೂ 3(18.5%) ಮಹಿಳಾ ಸದಸ್ಯರು ಆಯ್ಕೆಯಾಗಿರುವುದನ್ನು ಕಾಣಬಹುದು. ಅವಿರೋಧವಾಗಿ ಆಯ್ಕೆಯಾಗಿರುವ 4(25%) ಸದಸ್ಯರು ಈ ಪಂಚಾಯತಿಯಲ್ಲಿದ್ದಾರೆ. ಅವರಲ್ಲಿ 1(6.3%) ಪುರುಷ ಹಾಗೂ 3(18.8%) ಮಹಿಳಾ ಸದಸ್ಯರು ಅವಿರೋಧವಾಗಿ ಆಯ್ಕೆಯಾಗಿದ್ದಾರೆ.[24] ಒಟ್ಟಾರೆ ರಾಯಪುರ ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ಆಯ್ಕೆಯ ವಿಧಾನವನ್ನು ಅವಲೋಕನ ಮಾಡಿದಾಗ ಚುನಾವಣೆ ಮೂಲಕ ಆಯ್ಕೆಯಾದ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ.

ಮದಕರಿಪುರ ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ಆಯ್ಕೆಯ ವಿಧಾನವನ್ನು ಅವಲೋಕಿಸಿದಾಗ ಈ ಪಂಚಾಯತಿಯಲ್ಲಿ ಒಟ್ಟು 15 ಸದಸ್ಯರು ಇರುವುದನ್ನು ಕಾಣುತ್ತೇವೆ. ಇವರಲ್ಲಿ ಎಲ್ಲಾ 15(100%) ಸದಸ್ಯರು ಚುನಾವಣೆಯ ಮೂಲಕ ಆಯ್ಕೆಯಾಗಿದ್ದಾರೆ. ಅವರಲ್ಲಿ 8(53.3%) ಪುರುಷ ಸದಸ್ಯರು ಹಾಗೂ 7(46.7%) ಮಹಿಳಾ ಸದಸ್ಯರು ಆಯ್ಕೆಯಾಗಿದ್ದಾರೆ.[25] ಈ ಗ್ರಾಮ ಪಂಚಾಯತಿಯಲ್ಲಿ ಅವಿರೋಧವಾಗಿ ಆಯ್ಕೆಯಾದ ಯಾವ ಸದಸ್ಯರು ಇಲ್ಲ. ಒಟ್ಟಾರೆಯಾಗಿ ಮದಕರಿಪುರ ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ಆಯ್ಕೆಯ ವಿಧಾನವನ್ನು ವಿಶ್ಲೇಷಿಸಿದಾಗ ಚುನಾವಣೆ ಮೂಲಕ ಆಯ್ಕೆಯಾದ ಸದಸ್ಯರೆ ಇಲ್ಲಿ ಇರುವುದನ್ನು ಕಾಣಬಹುದು. ಅವಿರೋಧವಾಗಿ ಆಯ್ಕೆಯಾದ ಯಾವ ಸದಸ್ಯರೂ ಇಲ್ಲಿ ಕಾಣಸಿಗುವುದಿಲ್ಲ.

ಎಂ.ಕೆ. ಹಟ್ಟಿ ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ಆಯ್ಕೆಯ ವಿಧಾನವನ್ನು ವಿಶ್ಲೇಷಣೆ ಮಾಡಿದಾಗ ಈ ಪಂಚಾಯತಿಯಲ್ಲಿ ಒಟ್ಟು 20 ಸದಸ್ಯರು ಇದ್ದಾರೆ. ಇವರಲ್ಲಿ 17(85%) ಸದಸ್ಯರು ಚುನಾವಣೆಯ ಮೂಲಕ ಆಯ್ಕೆಯಾಗಿದ್ದಾರೆ. ಅವರಲ್ಲಿ 9(45%) ಪುರುಷ ಸದಸ್ಯರು ಹಾಗೂ 8(40%) ಮಹಿಳಾ ಸದಸ್ಯರು ಆಯ್ಕೆಯಾಗಿದ್ದಾರೆ. ಅವಿರೋಧವಾಗಿ ಆಯ್ಕೆಯಾದ 3(15%) ಸದಸ್ಯರನ್ನು ಈ ಪಂಚಾಯತಿಯಲ್ಲಿ ಕಾಣಬಹುದು. ಇವರಲ್ಲಿ 1(5%) ಪುರುಷ ಸದಸ್ಯ ಹಾಗೂ 2(10%) ಮಹಿಳಾ ಸದಸ್ಯರು ಅವಿರೋಧವಾಗಿ ಆಯ್ಕೆಯಾಗಿದ್ದಾರೆ.[26] ಒಟ್ಟಾರೆ ಎಂ.ಕೆ.

ಹಟ್ಟಿ ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ಆಯ್ಕೆಯ ವಿಧಾನವನ್ನು ಅವಲೋಕಿಸಿದಾಗ ಚುನಾವಣೆ ಮೂಲಕ ಆಯ್ಕೆಯಾದ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಅವಿರೋಧವಾಗಿ ಆಯ್ಕೆಯಾದ ಸದಸ್ಯರು ಕಡಿಮೆ ಸಂಖ್ಯೆಯಲ್ಲಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಚಿತ್ರದುರ್ಗ ಜಿಲ್ಲೆಯಲ್ಲಿ ಸಂದರ್ಶಿಸಿದ ಎಲ್ಲಾ ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ಆಯ್ಕೆಯ ವಿಧಾನವನ್ನು ಅವಲೋಕನ ಮಾಡಿದಾಗ ಹೆಚ್ಚಿನ ಪ್ರಮಾಣದಲ್ಲಿ ಚುನಾವಣೆ ಮೂಲಕ ಆಯ್ಕೆಯಾದ ಸದಸ್ಯರೆ ಹೆಚ್ಚಾಗಿರುವುದನ್ನು ಕಾಣುತ್ತೇವೆ. ಅವಿರೋಧವಾಗಿ ಆಯ್ಕೆಯಾದ ಸದಸ್ಯರು ಇದ್ದರೂ ಅವರೂ ಕೇವಲ ಕೆಲವೇ ಸಂಖ್ಯೆಯಲ್ಲಿರುವುದನ್ನು ಕಾಣಬಹುದು.

ಚಿತ್ರದುರ್ಗ ಜಿಲ್ಲೆಯ ತಾಲ್ಲೂಕು ಪಂಚಾಯತಿವಾರು ಸ್ಥಾಯಿಸಮಿತಿ ಸದಸ್ಯರ ಆಯ್ಕೆಯ ವಿಧಾನದ ವಿವರವನ್ನು ವಿಶ್ಲೇಷಣೆ ಮಾಡಿದಾಗ ಚಿತ್ರದುರ್ಗ ತಾಲ್ಲೂಕು ಪಂಚಾಯತಿಯ ಸ್ಥಾಯಿ ಸಮಿತಿ ಸದಸ್ಯರು ಒಟ್ಟು 27 ಸದಸ್ಯರನ್ನು ಕಾಣಬಹುದು. ಅವರಲ್ಲಿ 26(96.3%) ಸದಸ್ಯರು ಚುನಾವಣೆ ಮೂಲಕ ಆಯ್ಕೆಯಾಗಿದ್ದಾರೆ. ಅವರಲ್ಲಿ 16(59.3%) ಪುರುಷ ಸದಸ್ಯರು ಹಾಗೂ 10(37.1%) ಮಹಿಳಾ ಸದಸ್ಯರು ಇರುವುದನ್ನು ಕಾಣಬಹುದು. ಅದೇರೀತಿಯಾಗಿ ಅವಿರೋಧವಾಗಿ ಆಯ್ಕೆಯಾದ 1(3.7%) ಪುರುಷ ಸದಸ್ಯರಿದ್ದಾರೆ.[27] ಅವಿರೋಧವಾಗಿ ಆಯ್ಕೆಯಾದ ಯಾವ ಮಹಿಳಾ ಸದಸ್ಯರು ಇಲ್ಲ. ಒಟ್ಟಾರೆಯಾಗಿ ಚಿತ್ರದುರ್ಗ ತಾಲ್ಲೂಕು ಪಂಚಾಯತಿ ಸ್ಥಾಯಿ ಸಮಿತಿ ಸದಸ್ಯರ ಆಯ್ಕೆಯ ವಿಧಾನವನ್ನು ಅವಲೋಕನ ಮಾಡಿದಾಗ ಹೆಚ್ಚಾಗಿ ಚುನಾವಣೆ ಮೂಲಕ ಆಯ್ಕೆಯಾದ ಸದಸ್ಯರೆ ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು.

ಹಿರಿಯೂರು ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ಆಯ್ಕೆಯ ವಿಧಾನವನ್ನು ಅವಲೋಕಿಸಿದಾಗ ಈ ಪಂಚಾಯತಿಯಲ್ಲಿ ಒಟ್ಟು 22 ಸದಸ್ಯರನ್ನು ಕಾಣಬಹುದು. ಈ ಎಲ್ಲಾ 22(100%)ಸದಸ್ಯರು ಚುನಾವಣೆ ಮೂಲಕ ಆಯ್ಕೆಯಾಗಿದ್ದಾರೆ. ಇವರಲ್ಲಿ 13(59.1%) ಪುರುಷ ಸದಸ್ಯರು ಹಾಗೂ 09(40.9%) ಮಹಿಳಾ ಸದಸ್ಯರು ಆಯ್ಕೆಯಾಗಿರುವುದನ್ನು ಕಾಣಬಹುದು. ಒಟ್ಟಾರೆಯಾಗಿ ಹಿರಿಯೂರು ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ಆಯ್ಕೆಯನ್ನು ವಿಶ್ಲೇಷಿಸಿದಾಗ ಎಲ್ಲಾ ಸದಸ್ಯರು ಚುನಾವಣೆ ಮೂಲಕ ಆಯ್ಕೆಯಾಗಿರುವುದನ್ನು ಕಾಣುತ್ತೇವೆ.[28]

ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಚಿತ್ರದುರ್ಗ ಜಿಲ್ಲೆಯ ಸಂದರ್ಶನ ಮಾಡಿದ ಎಲ್ಲಾ ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರು ಚುನಾವಣೆ ಮೂಲಕ ಆಯ್ಕೆಯಾಗಿರುವುದನ್ನು ನಾವು ಕಾಣುತ್ತೇವೆ.

ಮೊಳಕಾಲ್ಮೂರು ತಾಲ್ಲೂಕು ಪಂಚಾಯತಿಯ ಸ್ಥಾಯಿ ಸಮಿತಿ ಸದಸ್ಯರ ಆಯ್ಕೆಯ ವಿಧಾನವನ್ನು ಅವಲೋಕಿಸಿದಾಗ ಈ ಪಂಚಾಯತಿಯಲ್ಲಿ ಒಟ್ಟು 12 ಸದಸ್ಯರನ್ನು ಕಾಣಬಹುದು.

ಈ ಎಲ್ಲಾ 12(100%)ಸದಸ್ಯರು ಚುನಾವಣೆ ಮೂಲಕ ಆಯ್ಕೆಯಾಗಿದ್ದಾರೆ. ಇವರಲ್ಲಿ 6(50%) ಪುರುಷ ಸದಸ್ಯರು ಹಾಗೂ 06(50%) ಮಹಿಳಾ ಸದಸ್ಯರು ಆಯ್ಕೆಯಾಗಿರುವುದನ್ನು ಕಾಣಬಹುದು. ಒಟ್ಟಾರೆಯಾಗಿ ಮೊಳಕಾಲ್ಮೂರು ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ಆಯ್ಕೆಯನ್ನು ವಿಶ್ಲೇಷಿಸಿದಾಗ ಎಲ್ಲಾ ಸದಸ್ಯರು ಚುನಾವಣೆ ಮೂಲಕ ಆಯ್ಕೆಯಾಗಿರುವುದನ್ನು ಕಾಣುತ್ತೇವೆ.[29]

ಚಿತ್ರದುರ್ಗ ಜಿಲ್ಲಾ ಪಂಚಾಯತಿ ಸ್ಥಾಯಿಸಮಿತಿ ಸದಸ್ಯರ ಆಯ್ಕೆಯ ವಿಧಾನದ ವಿವರವನ್ನು ಈ ಮುಂದಿನಂತೆ ವಿಶ್ಲೇಷಣೆ ಮಾಡಲಾಗಿದೆ. ಚಿತ್ರದುರ್ಗ ಜಿಲ್ಲಾ ಪಂಚಾಯತಿ ಸ್ಥಾಯಿ ಸಮಿತಿಯ ಒಟ್ಟು 34 ಸದಸ್ಯರಲ್ಲಿ ಎಲ್ಲಾ ಸದಸ್ಯರು ಚುನಾವಣೆ ಮೂಲಕ ಆಯ್ಕೆಯಾಗಿದ್ದಾರೆ. ಅವರಲ್ಲಿ 22(64.7%) ಪುರುಷ ಸದಸ್ಯರು ಹಾಗೂ 12(35.3%) ಮಹಿಳಾ ಸದಸ್ಯರಿದ್ದಾರೆ.[30] ಅವಿರೋಧವಾಗಿ ಆಯ್ಕೆಯಾದ ಯಾವ ಸದಸ್ಯರು ಇಲ್ಲ.

ಒಟ್ಟಾರೆಯಾಗಿ ಚಿತ್ರದುರ್ಗ ಜಿಲ್ಲಾ ಪಂಚಾಯತಿಯ ಸ್ಥಾಯಿಸಮಿತಿ ಸದಸ್ಯರ ಆಯ್ಕೆಯು ಬಹುತೇಕವಾಗಿ ಚುನಾವಣೆ ಮೂಲಕ ಆಯ್ಕೆಯಾಗಿದ್ದಾರೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ ಗ್ರಾಮ ಪಂಚಾಯತಿವಾರು ಸ್ಥಾಯಿ ಸಮಿತಿ ಸದಸ್ಯರ ಆದಾಯದ ವಿವರವನ್ನು ವಿಶ್ಲೇಷಣೆ ಮಾಡಿದಾಗ ಬಬ್ಬೂರು ಗ್ರಾಮ ಪಂಚಾಯತಿಯಲ್ಲಿ ಒಟ್ಟು 15 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. 10–25 ಸಾವಿರ ಆದಾಯ ಹೊಂದಿದ 6(40%) ಸದಸ್ಯರಿದ್ದಾರೆ. ಅವರಲ್ಲಿ 1 (6.6%) ಪುರುಷ ಸದಸ್ಯ ಹಾಗೂ 5(33.3%) ಮಹಿಳಾ ಸದಸ್ಯರಿದ್ದಾರೆ. 26–50 ಸಾವಿರ ಆದಾಯ ಹೊಂದಿರುವ 6 (40%) ಸದಸ್ಯರಿದ್ದಾರೆ. ಅವರಲ್ಲಿ 5(33.3%) ಪುರುಷ ಸದಸ್ಯರು ಹಾಗೂ 1(6.6%) ಮಹಿಳಾ ಸದಸ್ಯರಿದ್ದಾರೆ. 50–75 ಸಾವಿರದವರೆಗೆ ಆದಾಯ ಹೊಂದಿದ 2(13.3%) ಪುರುಷ ಸದಸ್ಯರಿದ್ದಾರೆ. 50–75 ಸಾವಿರ ಆದಾಯ ಹೊಂದಿದ ಯಾವ ಮಹಿಳಾ ಸದಸ್ಯರು ಇಲ್ಲ. 75 ಸಾವಿರದಿಂದ 1 ಲಕ್ಷ ಆದಾಯ ಹೊಂದಿರುವ 1 (6.6%) ಪುರುಷ ಸದಸ್ಯರಿದ್ದಾರೆ. 75 ಸಾವಿರದಿಂದ 1 ಲಕ್ಷ ಆದಾಯ ಹೊಂದಿರುವ ಯಾವ ಮಹಿಳಾ ಸದಸ್ಯರು ಇಲ್ಲ. 1 ಲಕ್ಷಕ್ಕೂ ಹೆಚ್ಚು ಆದಾಯ ಹೊಂದಿದ ಯಾವ ಸದಸ್ಯರು ಬಬ್ಬೂರು ಗ್ರಾಮ ಪಂಚಾಯತಿಯಲ್ಲಿ ಇಲ್ಲ.[31] ಒಟ್ಟಾರೆ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಎಲ್ಲಾ ಸದಸ್ಯರು 1 ಲಕ್ಷಕ್ಕಿಂತ ಕಡಿಮೆ ತಮ್ಮ ಆದಾಯ ಹೊಂದಿದ್ದಾರೆ.

ಗೌಡನಹಳ್ಳಿ ಗ್ರಾಮ ಪಂಚಾಯತಿಯಲ್ಲಿ ಒಟ್ಟು 15 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. 10–25 ಸಾವಿರ ಆದಾಯ ಹೊಂದಿದ 12 (80%) ಸದಸ್ಯರಿದ್ದಾರೆ. ಅವರಲ್ಲಿ 7 (46.7%) ಪುರುಷ ಸದಸ್ಯರು ಹಾಗೂ 5 (33.3%) ಮಹಿಳಾ ಸದಸ್ಯರಿದ್ದಾರೆ. 26–50 ಸಾವಿರ ಆದಾಯ ಹೊಂದಿರುವ

3 (20%) ಸದಸ್ಯರಿದ್ದಾರೆ. ಅವರಲ್ಲಿ 1 (6.6%) ಪುರುಷ ಸದಸ್ಯ ಹಾಗೂ 2 (13.3%) ಮಹಿಳಾ ಸದಸ್ಯರಿದ್ದಾರೆ. 50 ಸಾವಿರಕ್ಕಿಂತ ಮೇಲ್ಪಟ್ಟ ಆದಾಯ ಹೊಂದಿರುವ ಯಾವ ಸದಸ್ಯರೂ ಗೌಡನಹಳ್ಳಿ ಗ್ರಾಮ ಪಂಚಾಯತಿಯಲ್ಲಿ ಕಂಡುಬರುವುದಿಲ್ಲ.[32] ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕನ ಮಾಡಿದಾಗ ಗೌಡನಹಳ್ಳಿ ಗ್ರಾಮ ಪಂಚಾಯತಿಯ ಸ್ಥಾಯಿ ಸಮಿತಿ ಸದಸ್ಯರ ಆದಾಯ 50 ಸಾವಿರದ ಒಳಗಡೆ ಇರುವುದನ್ನು ಗುರುತಿಸಬಹುದಾಗಿದೆ.

ಹಾನಗಲ್ ಗ್ರಾಮ ಪಂಚಾಯತಿಯಲ್ಲಿ ಒಟ್ಟು 16 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. 10–25 ಸಾವಿರ ಆದಾಯ ಹೊಂದಿದ 10 (62.5%) ಸದಸ್ಯರಿದ್ದಾರೆ. ಅವರಲ್ಲಿ 7 (43.8%) ಪುರುಷ ಸದಸ್ಯರು ಹಾಗೂ 3 (18.8%) ಮಹಿಳಾ ಸದಸ್ಯರಿದ್ದಾರೆ. 26–50 ಸಾವಿರ ಆದಾಯ ಹೊಂದಿದ 6 (37.5%) ಸದಸ್ಯರಿದ್ದಾರೆ. ಅವರಲ್ಲಿ 2 (12.5%) ಪುರುಷ ಹಾಗೂ 4 (25%) ಮಹಿಳಾ ಸದಸ್ಯರಿದ್ದಾರೆ. ಉಳಿದಂತೆ 50 ಸಾವಿರಕ್ಕಿಂತ ಹೆಚ್ಚು ಆದಾಯ ಹೊಂದಿದ ಯಾವ ಸದಸ್ಯರು ಇಲ್ಲ. ಒಟ್ಟಾರೆ ಹಾನಗಲ್ ಗ್ರಾಮ ಪಂಚಾಯತಿಯಲ್ಲಿ 50 ಸಾವಿರದ ಒಳಗಡೆ ಆದಾಯ ಹೊಂದಿರುವುದನ್ನು ಕಾಣಬಹುದು. 50 ಸಾವಿರಕ್ಕಿಂತ ಮೇಲ್ಪಟ್ಟ ಆದಾಯ ಹೊಂದಿರುವ ಯಾವ ಸದಸ್ಯರು ಇಲ್ಲ.[33]

ರಾಯಪುರ ಗ್ರಾಮ ಪಂಚಾಯತಿಯಲ್ಲಿ ಒಟ್ಟು 16 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. 10–25 ಸಾವಿರ ಆದಾಯ ಹೊಂದಿರುವ 7(43.8%) ಸದಸ್ಯರಿದ್ದಾರೆ. ಅವರಲ್ಲಿ 5 (31.3%) ಪುರುಷ ಸದಸ್ಯರು ಹಾಗೂ 2(12.5%) ಮಹಿಳಾ ಸದಸ್ಯರಿದ್ದಾರೆ. 26–50 ಸಾವಿರ ಆದಾಯ ಹೊಂದಿದ 8 (50%) ಸದಸ್ಯರಿದ್ದಾರೆ. ಅವರಲ್ಲಿ 4 (25%) ಪುರುಷ ಸದಸ್ಯರು ಹಾಗೂ 4 (25%) ಮಹಿಳಾ ಸದಸ್ಯರಿದ್ದಾರೆ. 50–75 ಸಾವಿರ ಆದಾಯ ಹೊಂದಿದ 1 (6.3%) ಪುರುಷ ಸದಸ್ಯರಿದ್ದಾರೆ. 75 ಸಾವಿರಕ್ಕಿಂತ ಹೆಚ್ಚು ಆದಾಯ ಹೊಂದಿರುವ ಯಾವ ಸದಸ್ಯರು ರಾಯಪುರ ಗ್ರಾಮ ಪಂಚಾಯತಿಯಲ್ಲಿ ಕಂಡು ಬರುವುದಿಲ್ಲ. ಒಟ್ಟಾರೆ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ 50 ಸಾವಿರಕ್ಕಿಂತ ಕಡಿಮೆ ಆದಾಯ ಹೊಂದಿದ ಸದಸ್ಯರೆ ಅತಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. 50 ಸಾವಿರಕ್ಕಿಂತ ಮೇಲ್ಪಟ್ಟ ಆದಾಯ ಹೊಂದಿದ ಯಾವ ಸದಸ್ಯರು ಕಂಡು ಬರುವುದಿಲ್ಲ.[34]

ಮದಕರಿಪುರ ಗ್ರಾಮ ಪಂಚಾಯತಿಯಲ್ಲಿ ಒಟ್ಟು 15 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. ಅವರಲ್ಲಿ 10–25 ಸಾವಿರ ಆದಾಯ ಹೊಂದಿರುವ 8(53.3%) ಸದಸ್ಯರಿದ್ದಾರೆ. ಅವರಲ್ಲಿ 5 (33.3%) ಪುರುಷ ಸದಸ್ಯರು ಹಾಗೂ 3 (20%) ಮಹಿಳಾ ಸದಸ್ಯರಿದ್ದಾರೆ. 26–50 ಸಾವಿರ ಆದಾಯ ಹೊಂದಿದ 7(46.7%) ಸದಸ್ಯರಿದ್ದಾರೆ. ಅವರಲ್ಲಿ 3(20%) ಪುರುಷ ಸದಸ್ಯರು ಹಾಗೂ 4 (26.7%) ಮಹಿಳಾ ಸದಸ್ಯರಿದ್ದಾರೆ. 50 ಸಾವಿರಕ್ಕಿಂತ ಹೆಚ್ಚು ಆದಾಯ ಹೊಂದಿರುವ

ಯಾವ ಸದಸ್ಯರು ಮದಕರಿಪುರ ಗ್ರಾಮ ಪಂಚಾಯತಿಯ ಸ್ಥಾಯಿ ಸಮಿತಿಯಲ್ಲಿ ಇಲ್ಲದಿರುವುದನ್ನು ಕಾಣಬಹುದು. ಒಟ್ಟಾರೆ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ 50 ಸಾವಿರಕ್ಕಿಂತ ಕೆಳಗೆ ಆದಾಯ ಹೊಂದಿರುವ ಸದಸ್ಯರೆ ಇರುವುದನ್ನು ಕಾಣಬಹುದು.[35] 50 ಸಾವಿರಕ್ಕಿಂತ ಮೇಲ್ಪಟ್ಟು ಆದಾಯ ಹೊಂದಿದ ಯಾವ ಸದಸ್ಯರು ಮದಕರಿಪುರ ಗ್ರಾಮ ಪಂಚಾಯತಿಯಲ್ಲಿ ಕಂಡು ಬರುವುದಿಲ್ಲ.

ಎಂ.ಕೆ. ಹಟ್ಟಿ ಗ್ರಾಮ ಪಂಚಾಯತಿಯಲ್ಲಿ ಒಟ್ಟು 20 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. ಅವರಲ್ಲಿ 10–25 ಸಾವಿರ ಆದಾಯ ಹೊಂದಿರುವ 7 (35%) ಸದಸ್ಯರಿದ್ದಾರೆ. ಇವರಲ್ಲಿ 4 (20%) ಪುರುಷ ಸದಸ್ಯರು ಹಾಗೂ 3 (15%) ಮಹಿಳಾ ಸದಸ್ಯರಿದ್ದಾರೆ. 26–50 ಸಾವಿರ ಆದಾಯ ಹೊಂದಿರುವ 12 (60%) ಸದಸ್ಯರಿದ್ದಾರೆ. ಇವರಲ್ಲಿ 6 (30%) ಪುರುಷ ಸದಸ್ಯರು ಹಾಗೂ 6 (30%) ಮಹಿಳಾ ಸದಸ್ಯರಿದ್ದಾರೆ. 50 ಸಾವಿರದಿಂದ 1 ಲಕ್ಷ ಆದಾಯ ಹೊಂದಿರುವ ಯಾವ ಸದಸ್ಯರು ಇಲ್ಲ. 1–2 ಲಕ್ಷ ಆದಾಯ ಹೊಂದಿರುವ 1 (5%) ಮಹಿಳಾ ಸದಸ್ಯರಿದ್ದಾರೆ. 2 ಲಕ್ಷಕ್ಕೂ ಹೆಚ್ಚು ಆದಾಯ ಹೊಂದಿದ ಯಾವ ಸದಸ್ಯರು ಎಂ.ಕೆ ಹಟ್ಟಿ ಗ್ರಾಮ ಪಂಚಾಯತಿಯ ಸ್ಥಾಯಿ ಸಮಿತಿಯ ಸದಸ್ಯರ ಆದಾಯದ ಅಂಕಿ ಅಂಶಗಳನ್ನು ಅವಲೋಕಿಸಿದಾಗ 50 ಸಾವಿರಕ್ಕಿಂತ ಕಡಿಮೆ ಆದಾಯ ಹೊಂದಿರುವ ಸದಸ್ಯರೆ ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು.[36]

ಒಟ್ಟಾರೆಯಾಗಿ ಚಿತ್ರದುರ್ಗ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ ಎಲ್ಲಾ ಗ್ರಾಮ ಪಂಚಾಯತಿವಾರು ಸ್ಥಾಯಿ ಸಮಿತಿ ಸದಸ್ಯರ ಆದಾಯದ ಅಂಕಿ ಅಂಶಗಳನ್ನು ವಿಶ್ಲೇಷಿಸಿದಾಗ ಹೆಚ್ಚಿನ ಸಂಖ್ಯೆಯ ಸದಸ್ಯರ ಆದಾಯ 50 ಸಾವಿರಕ್ಕಿಂತ ಕಡಿಮೆ ಇರುವುದನ್ನು ಗುರುತಿಸಬಹುದು. 50 ಸಾವಿರಕ್ಕಿಂತ ಹೆಚ್ಚು ಆದಾಯ ಹೊಂದಿದ ಕೆಲವೇ ಸದಸ್ಯರನ್ನು ಸಂದರ್ಶನ ಸಮಯದಲ್ಲಿ ಗುರುತಿಸಲಾಗಿದೆ.[37]

ಚಿತ್ರದುರ್ಗ ಜಿಲ್ಲೆಯಲ್ಲಿ ಸಂದರ್ಶಿಸಿದ ತಾಲ್ಲೂಕು ಪಂಚಾಯತಿಯ ಸ್ಥಾಯಿ ಸಮಿತಿ ಸದಸ್ಯರ ಆದಾಯದ ವಿವರಣೆಯನ್ನು ಈ ಮುಂದಿನಂತೆ ವಿಶ್ಲೇಷಿಸಬಹುದಾಗಿದೆ. ಚಿತ್ರದುರ್ಗ ತಾಲ್ಲೂಕು ಪಂಚಾಯತಿಯ ಸ್ಥಾಯಿ ಸಮಿತಿಯಲ್ಲಿ ಒಟ್ಟು 27 ಸದಸ್ಯರಿದ್ದಾರೆ. ಅವರಲ್ಲಿ 10–25 ಸಾವಿರ ಆದಾಯ ಹೊಂದಿರುವ ಯಾವ ಸದಸ್ಯರು ಇಲ್ಲ. 26–50 ಸಾವಿರ ಆದಾಯ ಹೊಂದಿರುವ 5 (18.5%) ಸದಸ್ಯರಿದ್ದಾರೆ. ಅವರಲ್ಲಿ 4 (14.8%) ಪುರುಷ ಸದಸ್ಯರು ಹಾಗೂ 1 (3.7%) ಮಹಿಳಾ ಸದಸ್ಯರು ಇದ್ದಾರೆ. 50–75 ಸಾವಿರ ಆದಾಯ ಹೊಂದಿರುವ 1 (3.7%) ಪುರುಷ ಸದಸ್ಯರು ಮಾತ್ರ ಇದ್ದಾರೆ. 75 ಸಾವಿರದಿಂದ 1 ಲಕ್ಷದ ವರೆಗೂ ಆದಾಯ ಹೊಂದಿರುವ ಯಾವ ಸದಸ್ಯರು ಇಲ್ಲ. ಹಾಗೆಯೇ 1–2 ಲಕ್ಷ ಆದಾಯ ಹೊಂದಿರುವ ಯಾವ ಸದಸ್ಯರು

ಇಲ್ಲ. 2 ಲಕ್ಷಕ್ಕೂ ಹೆಚ್ಚು ಆದಾಯ ಹೊಂದಿರುವ 21 (77.8%) ಸದಸ್ಯರಿದ್ದಾರೆ. ಇವರಲ್ಲಿ 12 (44.4%) ಪುರುಷ ಸದಸ್ಯರು ಹಾಗೂ 9 (33.3%) ಮಹಿಳಾ ಸದಸ್ಯರು 2 ಲಕ್ಷಕ್ಕೂ ಹೆಚ್ಚಿನ ಆದಾಯ ಹೊಂದಿದ್ದಾರೆ.[38] ಒಟ್ಟಾರೆಯಾಗಿ ಚಿತ್ರದುರ್ಗ ತಾಲ್ಲೂಕು ಪಂಚಾಯತಿವಾರು ಸ್ಥಾಯಿ ಸಮಿತಿ ಸದಸ್ಯರ ಆದಾಯದ ವಿವರವನ್ನು ಅವಲೋಕಿಸಿದಾಗ 2 ಲಕ್ಷಕ್ಕೂ ಹೆಚ್ಚು ಆದಾಯ ಹೊಂದಿರುವ ಸದಸ್ಯರು ಅತಿ ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು.

ಹಿರಿಯೂರು ತಾಲ್ಲೂಕು ಪಂಚಾಯತಿಯ ಸ್ಥಾಯಿ ಸಮಿತಿ ಸದಸ್ಯರನ್ನು ಸಂದರ್ಶನ ಮಾಡಿದಾಗ ಒಟ್ಟು 22 ಸದಸ್ಯರಿರುವುದು ಕಂಡುಬಂದಿತು. ಇವರ ಆದಾಯದ ಬಗ್ಗೆ ಮಾಹಿತಿಯನ್ನು ಕೇಳಿದಾಗ ಈ ಮುಂದಿನ ಅಂಶಗಳು ಕಂಡುಬಂದವು. ಹಿರಿಯೂರು ತಾಲ್ಲೂಕು ಪಂಚಾಯತಿಯ 2 (9.1%) ಸದಸ್ಯರು 10–25 ಸಾವಿರ ಆದಾಯವನ್ನು ಹೊಂದಿದ್ದಾರೆ. ಇವರಲ್ಲಿ 2 (9.1%) ಪುರುಷ ಸದಸ್ಯರಾಗಿದ್ದಾರೆ. 10–25 ಸಾವಿರ ಆದಾಯ ಹೊಂದಿರುವ ಯಾವ ಮಹಿಳಾ ಸದಸ್ಯರು ಈ ತಾಲ್ಲೂಕು ಪಂಚಾಯತಿಯಲ್ಲಿ ಕಂಡು ಬರುವುದಿಲ್ಲ. 26–50 ಸಾವಿರ ಆದಾಯ ಹೊಂದಿರುವ 4 (18.9%) ಪುರುಷ ಸದಸ್ಯರು ಮಾತ್ರ ಕಂಡುಬರುತ್ತಾರೆ. 26–50 ಸಾವಿರ ಆದಾಯ ಹೊಂದಿರುವ ಯಾವ ಮಹಿಳಾ ಸದಸ್ಯರು ಕಂಡುಬರುವುದಿಲ್ಲ. 50–75 ಸಾವಿರ ಆದಾಯ ಹೊಂದಿರುವ 4 (18.9%) ಸದಸ್ಯರಿದ್ದಾರೆ. ಅವರಲ್ಲಿ 2 (9.1%) ಪುರುಷ ಸದಸ್ಯರು ಹಾಗೂ 2 (9.1%) ಮಹಿಳಾ ಸದಸ್ಯರು ಇರುವುದನ್ನು ಕಾಣಬಹುದು. 75 ಸಾವಿರದಿಂದ 1 ಲಕ್ಷದವರೆಗೂ ಆದಾಯ ಹೊಂದಿರುವ ಯಾವ ಸದಸ್ಯರು ಈ ಪಂಚಾಯತಿಯಲ್ಲಿ ಕಂಡು ಬರುವುದಿಲ್ಲ. 1–2 ಲಕ್ಷ ಆದಾಯ ಹೊಂದಿರುವ 2 (9.1%) ಪುರುಷ ಸದಸ್ಯರಿದ್ದರೆ. 1–2 ಲಕ್ಷ ಆದಾಯ ಹೊಂದಿರುವ ಯಾವ ಮಹಿಳಾ ಸದಸ್ಯರು ಇಲ್ಲ. 2 ಲಕ್ಷಕ್ಕೂ ಹೆಚ್ಚು ಆದಾಯ ಹೊಂದಿರುವ 10 (45.5%) ಸದಸ್ಯರಿದ್ದಾರೆ. ಇವರಲ್ಲಿ 4 (18.9%) ಪುರುಷ ಸದಸ್ಯರು ಹಾಗೂ 6 (27.3%) ಮಹಿಳಾ ಸದಸ್ಯರು ಇರುವುದನ್ನು ಕಾಣಬಹುದು.[39] ಒಟ್ಟಾರೆಯಾಗಿ ಹಿರಿಯೂರು ತಾಲ್ಲೂಕು ಪಂಚಾಯತಿಯ ಸ್ಥಾಯಿ ಸಮಿತಿ ಸದಸ್ಯರ ಆದಾಯದ ವಿವರವನ್ನು ಅವಲೋಕಿಸಿದಾಗ 2 ಲಕ್ಷಕ್ಕೂ ಹೆಚ್ಚು ಆದಾಯ ಹೊಂದಿರುವ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣಬಹುದು.

ಮೊಳಕಾಲ್ಮೂರು ತಾಲ್ಲೂಕು ಪಂಚಾಯತಿಯ ಸ್ಥಾಯಿ ಸಮಿತಿಯಲ್ಲಿ ಒಟ್ಟು 12 ಸದಸ್ಯರಿರುವುದನ್ನು ಕಾಣಬಹುದು ಇವರಲ್ಲಿ 2 (16.7%) ಸದಸ್ಯರು 10–25 ಸಾವಿರ ಆದಾಯವನ್ನು ಹೊಂದಿದ್ದಾರೆ. ಅವರಲ್ಲಿ 1(8.3%) ಪುರುಷ ಸದಸ್ಯ ಹಾಗೂ 1 (8.3%) ಮಹಿಳಾ ಸದಸ್ಯರು ಇರುವುದನ್ನು ಕಾಣಬಹುದು. ಹಾಗೆಯೇ 26–50 ಸಾವಿರ ಆದಾಯ ಹೊಂದಿರುವ 4 (33.3%) ಸದಸ್ಯರಿದ್ದಾರೆ. ಅವರಲ್ಲಿ 3(25%) ಪುರುಷ ಸದಸ್ಯರಿದ್ದಾರೆ ಹಾಗೂ 1 (8.3%) ಮಹಿಳಾ

ಸದಸ್ಯರಿದ್ದಾರೆ. 50–75 ಸಾವಿರ ಆದಾಯ ಹೊಂದಿರುವ1 (8.3%)ಪುರುಷ ಸದಸ್ಯರು ಮಾತ್ರ ಇರುವುದನ್ನು ಗುರುತಿಸಬಹುದು. 75 ಸಾವಿರದಿಂದ 2 ಲಕ್ಷದವರೆಗೆ ಆದಾಯ ಹೊಂದಿರುವ ಯಾವ ಸದಸ್ಯರು ಇಲ್ಲಿ ಕಂಡು ಬರುವುದಿಲ್ಲ. 2 ಲಕ್ಷಕ್ಕೂ ಹೆಚ್ಚು ಆದಾಯ ಹೊಂದಿರುವ 5 (4.7%) ಸದಸ್ಯರಿದ್ದಾರೆ. ಅವರಲ್ಲಿ 2 (8.3%) ಪುರುಷ ಸದಸ್ಯರು ಹಾಗೂ 4 (33.3%) ಮಹಿಳಾ ಸದಸ್ಯರು ಇರುವುದನ್ನು ಕಾಣಬಹುದು. ಒಟ್ಟಾರೆಯಾಗಿ ಮೊಳಕಾಲ್ಮೂರು ಪಂಚಾಯತಿಯ ಸ್ಥಾಯಿ ಸಮಿತಿ ಸದಸ್ಯರ ಆದಾಯವನ್ನು ಅವಲೋಕಿಸಿದಾಗ ಇಲ್ಲಿ ಕೂಡ 2 ಲಕ್ಷಕ್ಕೂ ಹೆಚ್ಚು ಆದಾಯ ಹೊಂದಿರುವ ಸದಸ್ಯರ ಸಂಖ್ಯೆ ಹೆಚ್ಚಾಗಿರುವುದನ್ನು ಕಾಣಬಹುದು. [40]

ಒಟ್ಟಾರೆಯಾಗಿ ಚಿತ್ರದುರ್ಗ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ ತಾಲ್ಲೂಕು ಪಂಚಾಯತಿಯ ಸ್ಥಾಯಿ ಸಮಿತಿ ಸದಸ್ಯರ ಆದಾಯವನ್ನು ಅವಲೋಕನ ಮಾಡಿದಾಗ ಹೆಚ್ಚಿನ ಸಂಖ್ಯೆಯ ಸದಸ್ಯರು 2 ಲಕ್ಷಕ್ಕೂ ಹೆಚ್ಚು ಆದಾಯವನ್ನು ಹೊಂದಿರುವುದನ್ನು ಗುರುತಿಸಬಹುದಾಗಿದೆ.

ಚಿತ್ರದುರ್ಗ ಜಿಲ್ಲಾ ಪಂಚಾಯತಿವಾರು ಸ್ಥಾಯಿ ಸಮಿತಿ ಸದಸ್ಯರ ಆದಾಯದ ವಿವರವನ್ನು ಈ ಮುಂದಿನಂತೆ ವಿಶ್ಲೇಷಣೆ ಮಾಡಲಾಗಿದೆ. ಚಿತ್ರದುರ್ಗ ಜಿಲ್ಲಾ ಪಂಚಾಯತಿ ಸ್ಥಾಯಿ ಸಮಿತಿಯ ಒಟ್ಟು 34 ಸದಸ್ಯರಲ್ಲಿ 10–25 ಸಾವಿರ ಆದಾಯ ಹೊಂದಿರುವ ಯಾವ ಸದಸ್ಯರು ಇಲ್ಲ. 26–50 ಸಾವಿರ ಆದಾಯ ಹೊಂದಿರುವ ಯಾವ ಸದಸ್ಯರು ಇಲ್ಲ. 50–75 ಸಾವಿರ ಆದಾಯ ಹೊಂದಿರುವ 3 (8.8%) ಪುರುಷ ಸದಸ್ಯರಾಗಿದ್ದಾರೆ. 75 ಸಾವಿರ ದಿಂದ 1 ಲಕ್ಷ ಆದಾಯ ಹೊಂದಿರುವ 1 (2.9%) ಪುರುಷ ಸದಸ್ಯರಿದ್ದಾರೆ. 1–2 ಲಕ್ಷ ತಲಾ ಆದಾಯ ಹೊಂದಿರುವ 6 (17.6%) ಪುರುಷ ಸದಸ್ಯರಿದ್ದಾರೆ. 2 ಲಕ್ಷಕ್ಕೂ ಹೆಚ್ಚು ತಲಾ ಆದಾಯ ಹೊಂದಿರುವ 24 (70.6%) ಸದಸ್ಯರಿದ್ದಾರೆ. ಅವರಲ್ಲಿ 12 (35.3%) ಪುರುಷ ಸದಸ್ಯರು ಹಾಗೂ 12 (35.3%) ಮಹಿಳಾ ಸದಸ್ಯರಿದ್ದಾರೆ.

ಒಟ್ಟಾರೆಯಾಗಿ ಚಿತ್ರದುರ್ಗ ಜಿಲ್ಲಾ ಪಂಚಾಯತಿವಾರು ಸ್ಥಾಯಿ ಸಮಿತಿ ಸದಸ್ಯರ ತಲಾ ಆದಾಯವನ್ನು ಅವಲೋಕಿಸಿದಾಗ ಹೆಚ್ಚಿನ ಸಂಖ್ಯೆಯ ಸದಸ್ಯರು 2 ಲಕ್ಷಕ್ಕೂ ಹೆಚ್ಚು ಆದಾಯ ಹೊಂದಿರುವ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ ಗ್ರಾಮ ಪಂಚಾಯತಿವಾರು ಸ್ಥಾಯಿ ಸಮಿತಿ ಸದಸ್ಯರ ಸ್ಥಾನಮಾನದ ವಿವರವನ್ನು ವಿಶ್ಲೇಷಿಸಿದಾಗ ಬಬ್ಬೂರು ಗ್ರಾಮ ಪಂಚಾಯತಿಯಲ್ಲಿ ಒಟ್ಟು 15 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. ಅವರಲ್ಲಿ ಸಾಮಾಜಿಕ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 12 (80%) ಸದಸ್ಯರು ಹೇಳಿದ್ದಾರೆ. ಇವರಲ್ಲಿ 6 (40%) ಪುರುಷರು ಹಾಗೂ 6 (40%) ಮಹಿಳೆಯರು ಸಾಮಾಜಿಕ ಸುಧಾರಣೆ

ಆಗಬೇಕು ಎಂದು ಹೇಳಿದ್ದಾರೆ. ಸಾಮಾಜಿಕ ಸುಧಾರಣೆ ಆಗುವುದು ಬೇಡ ಈಗಾಗಲೇ ಸಾಮಾಜಿಕ ಸುಧಾರಣೆ ಆಗಿದೆ ಎಂದು 3 (20%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 2 (13.33%) ಪುರುಷರು ಹಾಗೂ 1 (6.66%) ಮಹಿಳೆಯರು ಸಾಮಾಜಿಕ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಹಾಗೆಯೇ ಬಬ್ಬೂರು ಗ್ರಾಮ ಪಂಚಾಯತಿಯಲ್ಲಿರುವ ಒಟ್ಟು 15 ಸ್ಥಾಯಿ ಸಮಿತಿ ಸದಸ್ಯರಿಗೆ ಆರ್ಥಿಕ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 12 (80%) ಸದಸ್ಯರು ಹೇಳಿದ್ದಾರೆ. ಇವರಲ್ಲಿ 6 (40%) ಪುರುಷರು ಹಾಗೂ 6 (40%) ಮಹಿಳೆಯರು ಆರ್ಥಿಕ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ಆರ್ಥಿಕ ಸುಧಾರಣೆ ಆಗುವುದು ಬೇಡ ಈಗಾಗಲೇ ಆರ್ಥಿಕ ಸುಧಾರಣೆ ಆಗಿದೆ ಎಂದು 3 (20%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 2 (13.33%) ಪುರುಷರು ಹಾಗೂ 1 (6.66%) ಮಹಿಳೆಯರು ಆರ್ಥಿಕ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಹಾಗೆಯೇ ಬಬ್ಬೂರು ಗ್ರಾಮ ಪಂಚಾಯತಿಯಲ್ಲಿರುವ ಒಟ್ಟು 15 ಸ್ಥಾಯಿ ಸಮಿತಿ ಸದಸ್ಯರಿಗೆ ರಾಜಕೀಯ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 4 (26.66%) ಸದಸ್ಯರು ಹೇಳಿದ್ದಾರೆ. ಇವರಲ್ಲಿ 3 (20%) ಪುರುಷರು ಹಾಗೂ 1 (6.66%) ಮಹಿಳಾ ಸದಸ್ಯರು ರಾಜಕೀಯ ಸ್ಥಾನಮಾನದಲ್ಲಿ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ರಾಜಕೀಯ ಸುಧಾರಣೆ ಆಗುವುದು ಬೇಡ ಈಗಾಗಲೇ ರಾಜಕೀಯ ಸುಧಾರಣೆ ಆಗಿದೆ ಎಂದು 11 (73.33%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 5 (33.33%) ಪುರುಷರು ಹಾಗೂ 6 (40%) ಮಹಿಳೆಯರು ರಾಜಕೀಯ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಬಬ್ಬೂರು ಗ್ರಾಮ ಪಂಚಾಯತಿಯಲ್ಲಿರುವ ಸ್ಥಾಯಿ ಸಮಿತಿ ಸದಸ್ಯರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪರಿಶಿಷ್ಟರು ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸ್ಥಾನಮಾನದಲ್ಲಿ ಸುಧಾರಣೆ ಆಗಬೇಕು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಉಳಿದಂತೆ ಬೇರೆ ಜಾತಿಯ ಸದಸ್ಯರು ಸುಧಾರಣೆ ಆಗುವುದು ಬೇಡ ಎಂದು ಹೇಳಿದ್ದಾರೆ.

ಗೌಡನಹಳ್ಳಿ ಗ್ರಾಮ ಪಂಚಾಯತಿಯಲ್ಲಿರುವ ಒಟ್ಟು 15 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. ಅವರಲ್ಲಿ ಸಾಮಾಜಿಕ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 13 (86.66%) ಸದಸ್ಯರು ಹೇಳಿದ್ದಾರೆ. ಇವರಲ್ಲಿ 7 (46.66%) ಪುರುಷರು ಹಾಗೂ 6 (40%) ಮಹಿಳೆಯರು ಸಾಮಾಜಿಕ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ಸಾಮಾಜಿಕ

ಸುಧಾರಣೆ ಆಗುವುದು ಬೇಡ ಈಗಾಗಲೇ ಸಾಮಾಜಿಕ ಸುಧಾರಣೆ ಆಗಿದೆ ಎಂದು 2 (13.33%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 1 (6.66%) ಪುರುಷ ಹಾಗೂ 1 (6.66%) ಮಹಿಳಾ ಸದಸ್ಯರು ಸಾಮಾಜಿಕ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಹಾಗೆಯೇ ಗೌಡನಹಳ್ಳಿ ಗ್ರಾಮ ಪಂಚಾಯತಿಯಲ್ಲಿರುವ ಒಟ್ಟು 15 ಸ್ಥಾಯಿ ಸಮಿತಿ ಸದಸ್ಯರಿಗೆ ಆರ್ಥಿಕ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 13 (86.66%) ಸದಸ್ಯರು ಹೇಳಿದ್ದಾರೆ. ಇವರಲ್ಲಿ 7 (46.66%) ಪುರುಷರು ಹಾಗೂ 6 (40%) ಮಹಿಳೆಯರು ಆರ್ಥಿಕ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ಆರ್ಥಿಕ ಸುಧಾರಣೆ ಆಗುವುದು ಬೇಡ ಈಗಾಗಲೇ ಆರ್ಥಿಕ ಸುಧಾರಣೆ ಆಗಿದೆ ಎಂದು 2 (13.33%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 1 (6.66%) ಪುರುಷ ಹಾಗೂ 1 (6.66%) ಮಹಿಳಾ ಸದಸ್ಯರು ಆರ್ಥಿಕ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಅದೇ ರೀತಿಯಲ್ಲಿ ಗೌಡನಹಳ್ಳಿ ಗ್ರಾಮ ಪಂಚಾಯತಿಯಲ್ಲಿರುವ ಒಟ್ಟು 15 ಸ್ಥಾಯಿ ಸಮಿತಿ ಸದಸ್ಯರಿಗೆ ರಾಜಕೀಯ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು2(13.33%)ಸದಸ್ಯರು ಹೇಳಿದ್ದಾರೆ. ಅವರಲ್ಲಿ 1 (6.66%) ಪುರುಷ ಹಾಗೂ 1 (6.66%) ಮಹಿಳಾ ಸದಸ್ಯರು ರಾಜಕೀಯ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ರಾಜಕೀಯ ಸುಧಾರಣೆ ಆಗುವುದು ಬೇಡ ಈಗಾಗಲೇ ರಾಜಕೀಯ ಸುಧಾರಣೆ ಆಗಿದೆ ಎಂದು 13 (86.66%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 7 (46.66%) ಪುರುಷರು ಹಾಗೂ 6 (40%) ಮಹಿಳೆಯರು ರಾಜಕೀಯ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಗೌಡನಹಳ್ಳಿ ಗ್ರಾಮ ಪಂಚಾಯತಿಯಲ್ಲಿರುವ ಸ್ಥಾಯಿ ಸಮಿತಿ ಸದಸ್ಯರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪರಿಶಿಷ್ಟರು ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸ್ಥಾನಮಾನದಲ್ಲಿ ಸುಧಾರಣೆ ಆಗಬೇಕು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಉಳಿದಂತೆ ಬೇರೆ ಜಾತಿಯ ಸದಸ್ಯರು ಸುಧಾರಣೆ ಆಗುವುದು ಬೇಡ ಎಂದು ಹೇಳಿದ್ದಾರೆ.

ಹಾನಗಲ್ ಗ್ರಾಮ ಪಂಚಾಯತಿಯಲ್ಲಿರುವ ಒಟ್ಟು 16 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. ಅವರಲ್ಲಿ ಸಾಮಾಜಿಕ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 13 (81.25%) ಸದಸ್ಯರು ಹೇಳಿದ್ದಾರೆ. ಇವರಲ್ಲಿ 8 (50%) ಪುರುಷರು ಹಾಗೂ 5 (31.25%) ಮಹಿಳಾ ಸದಸ್ಯರು ಸಾಮಾಜಿಕ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ಸಾಮಾಜಿಕ

ಸುಧಾರಣೆ ಆಗುವುದು ಬೇಡ, ಈಗಾಗಲೇ ಸಾಮಾಜಿಕ ಸುಧಾರಣೆ ಆಗಿದೆ ಎಂದು 3 (18.75%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 2 (12.5%) ಪುರುಷರು ಹಾಗೂ 1 (6.25%) ಮಹಿಳಾ ಸದಸ್ಯರು ಸಾಮಾಜಿಕ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಅದೇ ರೀತಿ ಹಾನಗಲ್ ಗ್ರಾಮ ಪಂಚಾಯತಿಯಲ್ಲಿರುವ ಒಟ್ಟು 16 ಸ್ಥಾಯಿ ಸಮಿತಿ ಸದಸ್ಯರಿಗೆ ಆರ್ಥಿಕ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 13 (81.25%) ಸದಸ್ಯರು ಹೇಳಿದ್ದಾರೆ. ಇವರಲ್ಲಿ 8 (50%) ಪುರುಷರು ಹಾಗೂ 5 (31.25%) ಮಹಿಳೆಯರು ಆರ್ಥಿಕ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ಆರ್ಥಿಕ ಸುಧಾರಣೆ ಆಗುವುದು ಬೇಡ ಈಗಾಗಲೇ ಆರ್ಥಿಕ ಸುಧಾರಣೆ ಆಗಿದೆ ಎಂದು 3 (18.75%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 2 (12.5%) ಪುರುಷ ಹಾಗೂ 1 (6.66%) ಮಹಿಳಾ ಸದಸ್ಯರು ಆರ್ಥಿಕ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಹಾಗೆಯೇ ಹಾನಗಲ್ ಗ್ರಾಮ ಪಂಚಾಯತಿಯಲ್ಲಿರುವ ಒಟ್ಟು 16 ಸ್ಥಾಯಿ ಸಮಿತಿ ಸದಸ್ಯರಿಗೆ ರಾಜಕೀಯ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 3 (18.75%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 1 (6.25%) ಪುರುಷ ಹಾಗೂ 2 (12.5%) ಮಹಿಳಾ ಸದಸ್ಯರು ರಾಜಕೀಯ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ರಾಜಕೀಯ ಸುಧಾರಣೆ ಆಗುವುದು ಬೇಡ, ಈಗಾಗಲೇ ರಾಜಕೀಯ ಸುಧಾರಣೆ ಆಗಿದೆ ಎಂದು 13 (81.25%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 9 (56.25%) ಪುರುಷರು ಹಾಗೂ 4 (25%) ಮಹಿಳೆಯರು ರಾಜಕೀಯ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಹಾನಗಲ್ ಗ್ರಾಮ ಪಂಚಾಯತಿಯಲ್ಲಿರುವ ಸ್ಥಾಯಿ ಸಮಿತಿ ಸದಸ್ಯರಲ್ಲಿ ಹೆಚ್ಚಿನ ಸಂಖ್ಯೆಯ ಪರಿಶಿಷ್ಟರು ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸ್ಥಾನಮಾನದಲ್ಲಿ ಸುಧಾರಣೆ ಆಗಬೇಕು ಎಂದು ಅಭಿಪ್ರಾಯಪಟ್ಟಿದ್ದಾರೆ. ಉಳಿದಂತೆ ಬೇರೆ ಜಾತಿಯ ಸದಸ್ಯರು ಸುಧಾರಣೆ ಆಗುವುದು ಬೇಡ ಎಂದು ಹೇಳಿದ್ದಾರೆ.

ರಾಯಪುರ ಗ್ರಾಮ ಪಂಚಾಯತಿಯಲ್ಲಿರುವ ಒಟ್ಟು 16 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. ಅವರಲ್ಲಿ ಸಾಮಾಜಿಕ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 15 (93.75%) ಸದಸ್ಯರು ಹೇಳಿದ್ದಾರೆ. ಇವರಲ್ಲಿ 9 (56.25%) ಪುರುಷ ಹಾಗೂ 6 (37.5%) ಮಹಿಳಾ ಸದಸ್ಯರು ಸಾಮಾಜಿಕ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ಸಾಮಾಜಿಕ ಸುಧಾರಣೆ ಆಗುವುದು ಬೇಡ, ಈಗಾಗಲೇ ಸಾಮಾಜಿಕ ಸುಧಾರಣೆ ಆಗಿದೆ ಎಂದು 1 (6.25%) ಪುರುಷ ಸದಸ್ಯರು ಹೇಳಿದ್ದಾರೆ.

ಹಾಗೆಯೇ ರಾಯಪುರ ಗ್ರಾಮ ಪಂಚಾಯತಿಯಲ್ಲಿರುವ ಒಟ್ಟು 16 ಸ್ಥಾಯಿ ಸಮಿತಿ ಸದಸ್ಯರಿಗೆ ಆರ್ಥಿಕ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 15 (93.75%) ಸದಸ್ಯರು ಹೇಳಿದ್ದಾರೆ. ಇವರಲ್ಲಿ 9 (56.25%) ಪುರುಷ ಹಾಗೂ 9 (56.25%) ಮಹಿಳೆಯರು ಆರ್ಥಿಕ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ಆರ್ಥಿಕ ಸುಧಾರಣೆ ಆಗುವುದು ಬೇಡ, ಈಗಾಗಲೇ ಆರ್ಥಿಕ ಸುಧಾರಣೆ ಆಗಿದೆ ಎಂದು ಒಬ್ಬ (6.25%) ಪುರುಷ ಸದಸ್ಯರು ಹೇಳಿದ್ದಾರೆ.

ಅದೇ ರೀತಿಯಾಗಿ ರಾಯಪುರ ಗ್ರಾಮ ಪಂಚಾಯತಿಯಲ್ಲಿರುವ ಒಟ್ಟು 16 ಸ್ಥಾಯಿ ಸಮಿತಿ ಸದಸ್ಯರಿಗೆ ರಾಜಕೀಯ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು ಯಾವ ಸದಸ್ಯರು ಹೇಳಿಲ್ಲ. ರಾಜಕೀಯ ಸುಧಾರಣೆ ಆಗುವುದು ಬೇಡ, ಈಗಾಗಲೇ ರಾಜಕೀಯ ಸುಧಾರಣೆ ಆಗಿದೆ ಎಂದು 16 (100%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 10 (62.5%) ಪುರುಷರು ಹಾಗೂ 6 (37.5%) ಮಹಿಳೆಯರು ರಾಜಕೀಯ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ರಾಯಪುರ ಗ್ರಾಮ ಪಂಚಾಯತಿಯಲ್ಲಿರುವ ಸ್ಥಾಯಿ ಸಮಿತಿ ಸದಸ್ಯರಲ್ಲಿ ಹೆಚ್ಚಿನ ಸಂಖ್ಯೆಯ ಪರಿಶಿಷ್ಟರು ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸ್ಥಾನಮಾನದಲ್ಲಿ ಸುಧಾರಣೆ ಆಗಬೇಕು ಎಂದು ಅಭಿಪ್ರಾಯಪಟ್ಟಿದ್ದಾರೆ. ಉಳಿದಂತೆ ಬೇರೆ ಜಾತಿಯ ಸದಸ್ಯರು ಸುಧಾರಣೆ ಆಗುವುದು ಬೇಡ ಎಂದು ಹೇಳಿದ್ದಾರೆ.

ಮದಕರಿಪುರ ಗ್ರಾಮ ಪಂಚಾಯತಿಯಲ್ಲಿ ಒಟ್ಟು 15 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. ಅವರಲ್ಲಿ ಸಾಮಾಜಿಕ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 12 (80%) ಸದಸ್ಯರು ಹೇಳಿದ್ದಾರೆ. ಇವರಲ್ಲಿ 7 (46.66%) ಪುರುಷರು ಹಾಗೂ 5 (33.33%) ಮಹಿಳಾ ಸದಸ್ಯರು ಸಾಮಾಜಿಕ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ಸಾಮಾಜಿಕ ಸುಧಾರಣೆ ಆಗುವುದು ಬೇಡ, ಈಗಾಗಲೇ ಸಾಮಾಜಿಕ ಸುಧಾರಣೆ ಆಗಿದೆ ಎಂದು 3 (20%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 1 (6.66%) ಪುರುಷ ಹಾಗೂ 2 (13.33%) ಮಹಿಳಾ ಸದಸ್ಯರು ಸಾಮಾಜಿಕ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಹಾಗೆಯೇ ಮದಕರಿಪುರ ಗ್ರಾಮ ಪಂಚಾಯತಿಯಲ್ಲಿರುವ ಒಟ್ಟು 15 ಸ್ಥಾಯಿ ಸಮಿತಿ ಸದಸ್ಯರಿಗೆ ಆರ್ಥಿಕ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 12 (80%) ಸದಸ್ಯರು ಹೇಳಿದ್ದಾರೆ. ಇವರಲ್ಲಿ 7 (46.66%) ಪುರುಷ ಹಾಗೂ 5 (33.33%) ಮಹಿಳಾ ಸದಸ್ಯರು ಆರ್ಥಿಕ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ಆರ್ಥಿಕ

ಸುಧಾರಣೆ ಆಗುವುದು ಬೇಡ ಈಗಾಗಲೇ ಆರ್ಥಿಕ ಸುಧಾರಣೆ ಆಗಿದೆ ಎಂದು 3 (20%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 1 (6.66%) ಪುರುಷ ಹಾಗೂ 2 (13.33%) ಮಹಿಳಾ ಸದಸ್ಯರು ಆರ್ಥಿಕ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಅದೇ ರೀತಿಯಾಗಿ ಮದಕರಿಪುರ ಗ್ರಾಮ ಪಂಚಾಯತಿಯಲ್ಲಿರುವ ಒಟ್ಟು 15 ಸ್ಥಾಯಿ ಸಮಿತಿ ಸದಸ್ಯರಿಗೆ ರಾಜಕೀಯ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು ಯಾವ ಸದಸ್ಯರು ಹೇಳಿಲ್ಲ. ರಾಜಕೀಯ ಸುಧಾರಣೆ ಆಗುವುದು ಬೇಡ, ಈಗಾಗಲೇ ರಾಜಕೀಯ ಸುಧಾರಣೆ ಆಗಿದೆ ಎಂದು 15 (100%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 8 (53.33%) ಪುರುಷರು ಹಾಗೂ 7 (46.66%) ಮಹಿಳಾ ಸದಸ್ಯರು ರಾಜಕೀಯ ಸ್ಥಾನಮಾನದಲ್ಲಿ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಒಟ್ಟಾರೆಯಾಗಿ ಮದಕರಿಪುರ ಪಂಚಾಯತಿಯ ಸ್ಥಾಯಿ ಸಮಿತಿ ಸದಸ್ಯರ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಹೆಚ್ಚಿನ ಸಂಖ್ಯೆಯ ಪರಿಶಿಷ್ಟರು ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸ್ಥಾನಮಾನದಲ್ಲಿ ಸುಧಾರಣೆ ಆಗಬೇಕು ಎಂದು ಅಭಿಪ್ರಾಯಪಟ್ಟಿದ್ದಾರೆ. ಉಳಿದಂತೆ ಬೇರೆ ಜಾತಿಯ ಸದಸ್ಯರು ಸುಧಾರಣೆ ಆಗುವುದು ಬೇಡ ಎಂದು ಹೇಳಿದ್ದಾರೆ.

ಎಂ.ಕೆ.ಹಟ್ಟಿ ಗ್ರಾಮ ಪಂಚಾಯತಿಯಲ್ಲಿ ಒಟ್ಟು 20 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. ಅವರಲ್ಲಿ ಸಾಮಾಜಿಕ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 16 (80%) ಸದಸ್ಯರು ಹೇಳಿದ್ದಾರೆ. ಇವರಲ್ಲಿ 9 (45%) ಪುರುಷರು ಹಾಗೂ 7 (35%) ಮಹಿಳಾ ಸದಸ್ಯರು ಸಾಮಾಜಿಕ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ಸಾಮಾಜಿಕ ಸುಧಾರಣೆ ಆಗುವುದು ಬೇಡ ಈಗಾಗಲೇ ಸಾಮಾಜಿಕ ಸುಧಾರಣೆ ಆಗಿದೆ ಎಂದು 4 (20%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 2 (10%) ಪುರುಷರು ಹಾಗೂ 1 (5%) ಮಹಿಳಾ ಸದಸ್ಯರು ಸಾಮಾಜಿಕ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಹಾಗೆಯೇ ಎಂ.ಕೆ.ಹಟ್ಟಿ ಗ್ರಾಮ ಪಂಚಾಯತಿಯಲ್ಲಿರುವ ಒಟ್ಟು 20 ಸ್ಥಾಯಿ ಸಮಿತಿ ಸದಸ್ಯರಿಗೆ ಆರ್ಥಿಕ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 16 (80%) ಸದಸ್ಯರು ಹೇಳಿದ್ದಾರೆ. ಇವರಲ್ಲಿ 9 (45%) ಪುರುಷರು ಹಾಗೂ 7 (35%) ಮಹಿಳಾ ಸದಸ್ಯರು ಆರ್ಥಿಕ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ಆರ್ಥಿಕ ಸುಧಾರಣೆ ಆಗುವುದು ಬೇಡ, ಈಗಾಗಲೇ ಆರ್ಥಿಕ ಸುಧಾರಣೆ ಆಗಿದೆ ಎಂದು 4 (20%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 2 (10%) ಪುರುಷ ಹಾಗೂ 2 (10%) ಮಹಿಳಾ ಸದಸ್ಯರು ಆರ್ಥಿಕ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಅದೇ ರೀತಿ ಎಂ.ಕೆ.ಹಟ್ಟಿ ಗ್ರಾಮ ಪಂಚಾಯತಿಯಲ್ಲಿರುವ ಒಟ್ಟು 20 ಸ್ಥಾಯಿ ಸಮಿತಿ ಸದಸ್ಯರಿಗೆ ರಾಜಕೀಯ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 5 (25%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 3 (15%) ಪುರುಷರು ಹಾಗೂ 2 (10%) ಮಹಿಳಾ ಸದಸ್ಯರು ರಾಜಕೀಯ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ರಾಜಕೀಯ ಸುಧಾರಣೆ ಆಗುವುದು ಬೇಡ ಈಗಾಗಲೇ ರಾಜಕೀಯ ಸುಧಾರಣೆ ಆಗಿದೆ ಎಂದು 15 (75%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 8 (40%) ಪುರುಷ ಹಾಗೂ 7 (35%) ಮಹಿಳೆಯರು ರಾಜಕೀಯ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಚಿತ್ರದುರ್ಗ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ ಗ್ರಾಮ ಪಂಚಾಯತಿವಾರು ಸ್ಥಾಯಿ ಸಮಿತಿ ಸದಸ್ಯರ ಸ್ಥಾನಮಾನದ ವಿವರವನ್ನು ವಿಶ್ಲೇಷಣೆ ಮಾಡಿದಾಗ ಹೆಚ್ಚಿನ ಸಂಖ್ಯೆಯಲ್ಲಿ ಪರಿಶಿಷ್ಟರು ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸ್ಥಾನಮಾನದ ಸುಧಾರಣೆ ಆಗಬೇಕು ಎಂದು ಅಭಿಪ್ರಾಯಪಟ್ಟಿದ್ದಾರೆ. ಉಳಿದಂತೆ ಬೇರೆ ಜಾತಿಯ ಸದಸ್ಯರು ಸುಧಾರಣೆ ಆಗುವುದು ಅವಶ್ಯವಿಲ್ಲ ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ ತಾಲ್ಲೂಕು ಪಂಚಾಯತಿವಾರು ಸ್ಥಾಯಿ ಸಮಿತಿ ಸದಸ್ಯರ ಸ್ಥಾನಮಾನದ ವಿವರವನ್ನು ವಿಶ್ಲೇಷಿಸಿದಾಗ ಚಿತ್ರದುರ್ಗ ತಾಲ್ಲೂಕು ಪಂಚಾಯತಿಯಲ್ಲಿ ಒಟ್ಟು 27 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. ಅವರಲ್ಲಿ ಸಾಮಾಜಿಕ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 18 (66.66%) ಸದಸ್ಯರು ಹೇಳಿದ್ದಾರೆ. ಇವರಲ್ಲಿ 11 (40.74%) ಪುರುಷರು ಹಾಗೂ 7 (25.92%) ಮಹಿಳೆಯರು ಸಾಮಾಜಿಕ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ಸಾಮಾಜಿಕ ಸುಧಾರಣೆ ಆಗುವುದು ಬೇಡ ಈಗಾಗಲೇ ಸಾಮಾಜಿಕ ಸುಧಾರಣೆ ಆಗಿದೆ ಎಂದು 9 (33.33%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 5 (18.51%) ಪುರುಷರು ಹಾಗೂ 4 (14.81%) ಮಹಿಳೆಯರು ಸಾಮಾಜಿಕ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಹಾಗೆಯೇ ಚಿತ್ರದುರ್ಗ ತಾಲ್ಲೂಕು ಪಂಚಾಯತಿಯಲ್ಲಿರುವ ಒಟ್ಟು 27 ಸ್ಥಾಯಿ ಸಮಿತಿ ಸದಸ್ಯರಿಗೆ ಆರ್ಥಿಕ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 18 (66.66%) ಸದಸ್ಯರು ಹೇಳಿದ್ದಾರೆ. ಇವರಲ್ಲಿ 11 (40.74%) ಪುರುಷರು ಹಾಗೂ 7 (25.92%) ಮಹಿಳೆಯರು ಆರ್ಥಿಕ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ಆರ್ಥಿಕ ಸುಧಾರಣೆ ಆಗುವುದು ಬೇಡ ಈಗಾಗಲೇ ಆರ್ಥಿಕ ಸುಧಾರಣೆ ಆಗಿದೆ ಎಂದು 9 (33.33%)

ಸದಸ್ಯರು ಹೇಳಿದ್ದಾರೆ. ಅವರಲ್ಲಿ 5 (18.51%) ಪುರುಷರು ಹಾಗೂ 4 (14.81%) ಮಹಿಳೆಯರು ಆರ್ಥಿಕ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಅದೇ ರೀತಿ ಚಿತ್ರದುರ್ಗ ತಾಲ್ಲೂಕು ಪಂಚಾಯತಿಯಲ್ಲಿರುವ ಒಟ್ಟು 27 ಸ್ಥಾಯಿ ಸಮಿತಿ ಸದಸ್ಯರಿಗೆ ರಾಜಕೀಯ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 2 (7.4%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 1 (3.7%) ಪುರುಷ ಹಾಗೂ 1 (3.7%) ಮಹಿಳಾ ಸದಸ್ಯರು ರಾಜಕೀಯ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ರಾಜಕೀಯ ಸುಧಾರಣೆ ಆಗುವುದು ಬೇಡ, ಈಗಾಗಲೇ ರಾಜಕೀಯ ಸುಧಾರಣೆ ಆಗಿದೆ ಎಂದು 25 (92.59%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 15 (53.55%) ಪುರುಷ ಹಾಗೂ 10 (37.03%) ಮಹಿಳೆಯರು ರಾಜಕೀಯ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಹೆಚ್ಚಿನ ಸಂಖ್ಯೆಯಲ್ಲಿ ಪರಿಶಿಷ್ಟರು ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸ್ಥಾನಮಾನದ ಸುಧಾರಣೆ ಆಗಬೇಕು ಎಂದು ಅಭಿಪ್ರಾಯಪಟ್ಟಿದ್ದಾರೆ. ಉಳಿದಂತೆ ಬೇರೆ ಜಾತಿಯ ಸದಸ್ಯರು ಸುಧಾರಣೆ ಆಗುವುದು ಬೇಡ ಎಂದು ಹೇಳಿದ್ದಾರೆ.

ಹಿರಿಯೂರು ತಾಲ್ಲೂಕು ಪಂಚಾಯತಿಯಲ್ಲಿ ಒಟ್ಟು 22 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. ಅವರಲ್ಲಿ ಸಾಮಾಜಿಕ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 17 (77.27%) ಸದಸ್ಯರು ಹೇಳಿದ್ದಾರೆ. ಇವರಲ್ಲಿ 11 (50%) ಪುರುಷರು ಹಾಗೂ 6 (27.27%) ಮಹಿಳೆಯರು ಸಾಮಾಜಿಕ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ಸಾಮಾಜಿಕ ಸುಧಾರಣೆ ಆಗುವುದು ಬೇಡ, ಈಗಾಗಲೇ ಸಾಮಾಜಿಕ ಸುಧಾರಣೆ ಆಗಿದೆ ಎಂದು 5 (22.72%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 2 (9.09%) ಪುರುಷ ಹಾಗೂ 3 (13.63%) ಮಹಿಳೆಯರು ಸಾಮಾಜಿಕ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಹಾಗೆಯೇ ಹಿರಿಯೂರು ತಾಲ್ಲೂಕು ಪಂಚಾಯತಿಯಲ್ಲಿರುವ ಒಟ್ಟು 22 ಸ್ಥಾಯಿ ಸಮಿತಿ ಸದಸ್ಯರಿಗೆ ಆರ್ಥಿಕ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 17 (77.27%) ಸದಸ್ಯರು ಹೇಳಿದ್ದಾರೆ. ಇವರಲ್ಲಿ 11(50%) ಪುರುಷರು ಹಾಗೂ 6 (27.27%) ಮಹಿಳೆಯರು ಆರ್ಥಿಕ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ಆರ್ಥಿಕ ಸುಧಾರಣೆ ಆಗುವುದು ಬೇಡ, ಈಗಾಗಲೇ ಆರ್ಥಿಕ ಸುಧಾರಣೆ ಆಗಿದೆ ಎಂದು 5 (22.72%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 2 (9.09%) ಪುರುಷ ಹಾಗೂ 3 (13.63%) ಮಹಿಳೆಯರು ಆರ್ಥಿಕ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಅದೇ ರೀತಿ ಹಿರಿಯೂರು ತಾಲ್ಲೂಕು ಪಂಚಾಯತಿಯಲ್ಲಿರುವ ಒಟ್ಟು 22 ಸ್ಥಾಯಿ ಸಮಿತಿ ಸದಸ್ಯರಿಗೆ ರಾಜಕೀಯ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 3 (13.63%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 2 (9.09%) ಪುರುಷರು ಹಾಗೂ 1 (4.54%) ಮಹಿಳಾ ಸದಸ್ಯರು ರಾಜಕೀಯ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ರಾಜಕೀಯ ಸುಧಾರಣೆ ಆಗುವುದು ಬೇಡ, ಈಗಾಗಲೇ ರಾಜಕೀಯ ಸುಧಾರಣೆ ಆಗಿದೆ ಎಂದು 19 (86.36%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 11 (50%) ಪುರುಷ ಹಾಗೂ 8 (36.36%) ಮಹಿಳೆಯರು ರಾಜಕೀಯ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಹೆಚ್ಚಿನ ಸಂಖ್ಯೆಯಲ್ಲಿ ಪರಿಶಿಷ್ಟರು ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸ್ಥಾನಮಾನದ ಸುಧಾರಣೆ ಆಗಬೇಕು ಎಂದು ಅಭಿಪ್ರಾಯಪಟ್ಟಿದ್ದಾರೆ. ಉಳಿದಂತೆ ಬೇರೆ ಜಾತಿಯ ಸದಸ್ಯರು ಸುಧಾರಣೆ ಆಗುವುದು ಬೇಡ ಎಂದು ಹೇಳಿದ್ದಾರೆ.

ಮೊಳಕಾಲ್ಮೂರು ತಾಲ್ಲೂಕು ಪಂಚಾಯತಿಯಲ್ಲಿ ಒಟ್ಟು 12 ಸ್ಥಾಯಿ ಸಮಿತಿ ಸದಸ್ಯರಿದ್ದಾರೆ. ಅವರಲ್ಲಿ ಸಾಮಾಜಿಕ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 9 (75%) ಸದಸ್ಯರು ಹೇಳಿದ್ದಾರೆ. ಇವರಲ್ಲಿ 5 (41.66%) ಪುರುಷರು ಹಾಗೂ 4 (33.33%) ಮಹಿಳೆಯರು ಸಾಮಾಜಿಕ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ಸಾಮಾಜಿಕ ಸುಧಾರಣೆ ಆಗುವುದು ಬೇಡ, ಈಗಾಗಲೇ ಸಾಮಾಜಿಕ ಸುಧಾರಣೆ ಆಗಿದೆ ಎಂದು 3 (25%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 1 (8.33%) ಪುರುಷ ಹಾಗೂ 2 (16.66%) ಮಹಿಳೆಯರು ಸಾಮಾಜಿಕ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಅದೇ ರೀತಿ ಮೊಳಕಾಲ್ಮೂರು ತಾಲ್ಲೂಕು ಪಂಚಾಯತಿಯಲ್ಲಿರುವ ಒಟ್ಟು 12 ಸ್ಥಾಯಿ ಸಮಿತಿ ಸದಸ್ಯರಿಗೆ ಆರ್ಥಿಕ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ ಹೌದು ಆಗಬೇಕು ಎಂದು 9 (75%) ಸದಸ್ಯರು ಹೇಳಿದ್ದಾರೆ. ಇವರಲ್ಲಿ 5 (41.66%) ಪುರುಷರು ಹಾಗೂ 4 (33.33%) ಮಹಿಳೆಯರು ಆರ್ಥಿಕ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ಆರ್ಥಿಕ ಸುಧಾರಣೆ ಆಗುವುದು ಬೇಡ, ಈಗಾಗಲೇ ಆರ್ಥಿಕ ಸುಧಾರಣೆ ಆಗಿದೆ ಎಂದು 3 (25%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 1 (8.33%) ಪುರುಷ ಹಾಗೂ 2 (16.66%) ಮಹಿಳೆಯರು ಆರ್ಥಿಕ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಹಾಗೆಯೇ ಮೊಳಕಾಲ್ಮೂರು ತಾಲ್ಲೂಕು ಪಂಚಾಯತಿಯಲ್ಲಿರುವ ಒಟ್ಟು 12 ಸ್ಥಾಯಿ ಸಮಿತಿ ಸದಸ್ಯರಿಗೆ ರಾಜಕೀಯ ಸ್ಥಾನಮಾನದ ಸುಧಾರಣೆ ಆಗಬೇಕಾ ಎಂದು ಕೇಳಿದಾಗ

ಹೌದು ಆಗಬೇಕು ಎಂದು 2 (16.66%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 1 (8.33%) ಪುರುಷ ಹಾಗೂ 1 (8.33%) ಮಹಿಳಾ ಸದಸ್ಯರು ರಾಜಕೀಯ ಸುಧಾರಣೆ ಆಗಬೇಕು ಎಂದು ಹೇಳಿದ್ದಾರೆ. ರಾಜಕೀಯ ಸುಧಾರಣೆ ಆಗುವುದು ಬೇಡ, ಈಗಾಗಲೇ ರಾಜಕೀಯ ಸುಧಾರಣೆ ಆಗಿದೆ ಎಂದು 10 (83.33%) ಸದಸ್ಯರು ಹೇಳಿದ್ದಾರೆ. ಅವರಲ್ಲಿ 5 (41.66%) ಪುರುಷರು ಹಾಗೂ 5 (41.66%) ಮಹಿಳೆಯರು ರಾಜಕೀಯ ಸುಧಾರಣೆ ಬೇಡ ಎಂದು ಹೇಳಿದ್ದಾರೆ.

ಒಟ್ಟಾರೆಯಾಗಿ ಈ ಎಲ್ಲಾ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಚಿತ್ರದುರ್ಗ ಜಿಲ್ಲೆಯಲ್ಲಿ ಸಂದರ್ಶನ ಮಾಡಿದ ತಾಲ್ಲೂಕು ಪಂಚಾಯತಿವಾರು ಸ್ಥಾಯಿ ಸಮಿತಿ ಸದಸ್ಯರ ಸ್ಥಾನಮಾನಗಳ ವಿವರವನ್ನು ವಿಶ್ಲೇಷಣೆ ಮಾಡಿದಾಗ ಹೆಚ್ಚಿನ ಸಂಖ್ಯೆಯಲ್ಲಿ ಪರಿಶಿಷ್ಟರು ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸ್ಥಾನಮಾನದ ಸುಧಾರಣೆ ಆಗಬೇಕು ಎಂದು ಅಭಿಪ್ರಾಯಪಟ್ಟಿದ್ದಾರೆ. ಉಳಿದಂತೆ ಬೇರೆ ಜಾತಿಯ ಸದಸ್ಯರು ಸುಧಾರಣೆ ಆಗುವುದು ಬೇಡ ಎಂದು ಹೇಳಿದ್ದಾರೆ. ಹೀಗೆ ಹಲವಾರು ಸಾಮಾಜಿಕ ಭಿನ್ನಾಭಿಪ್ರಾಯಗಳು ಜಾತಿ ಜಾತಿಗಳ ನಡುವೆ ಗ್ರಾಮಗಳಲ್ಲಿ ಇರುವುದು ಕಂಡುಬಂದಿದೆ.

## ಚಿತ್ರದುರ್ಗ ಜಿಲ್ಲಾ ಪಂಚಾಯತ್ ಸ್ಥಾಯಿ ಸಮಿತಿಗಳ ಕಾರ್ಯಕ್ಷಮತೆ

### 1. ಚಿತ್ರದುರ್ಗ ಜಿಲ್ಲಾ ಪಂಚಾಯತ್ ಶಿಕ್ಷಣ ಮತ್ತು ಆರೋಗ್ಯ ಸ್ಥಾಯಿ ಸಮಿತಿಯ ಅನುದಾನದ ವಿವರ– 2006–07 ರಿಂದ 2010–11

ಚಿತ್ರದುರ್ಗ ಜಿಲ್ಲಾಪಂಚಾಯತಿಯ ಶಿಕ್ಷಣ ಮತ್ತು ಆರೋಗ್ಯ ಸ್ಥಾಯಿಸಮಿತಿ ಕಾರ್ಯಕ್ಷಮತೆಯನ್ನು ನೋಡಿದಾಗ ಸಾಕಾಷ್ಟು ಚರ್ಚೆಗಳು ಮತ್ತು ಅನುದಾನಗಳಿಗೆ ಸಮ್ಮತಿಯ ವಿವರಣೆಗಳನ್ನು ವಿಶ್ಲೇಷಿಸಲಾಗಿದೆ. ಅಲ್ಲದೆ ಒಟ್ಟು ಅನುದಾನದ ವಿವರಣೆಗಳನ್ನು ವಾರ್ಷಿಕವಾರು, ವಲಯವಾರು ಮೊತ್ತವನ್ನು ಕೋಷ್ಟಕಗಳಲ್ಲಿ ನೀಡಲಾಗಿದ್ದು ಸ್ಥಾಯಿಸಮಿತಿವಾರು ಅನುದಾನದ ಅನುಮೋದನೆಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಿದೆ. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ಮಾಳೇನಹಳ್ಳಿ ಆಯುರ್ವೇದಿಕ್ ಆಸ್ಪತ್ರೆ ದುರಸ್ಥಿ ಕಾಮಾಗಾರಿ ಮತ್ತು ಕಾಂಪೌಂಡ್ ಗೋಡೆ ನಿರ್ಮಾಣ 1.00 ಲಕ್ಷ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ಆಸ್ಪತ್ರೆಗಳ ಔಷಧಿ ಖರೀದಿಸುವ ಕುರಿತು ಚರ್ಚೆ 25.00 ಲಕ್ಷ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ಕಲ್ಕೆರೆ ಗ್ರಾಮದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲಾ ಕಟ್ಟಡಕ್ಕೆ ಕಾಂಪೌಂಡ್ ನಿರ್ಮಾಣದ ಬಗ್ಗೆ. 2.00ಲಕ್ಷ, ಸಾರ್ವಜನಿಕ ಶಿಕ್ಷಣ ಇಲಾಖೆ ಶಿಕ್ಷಕರ ಮತ್ತು ಅಂಗವಿಕಲ ಫಲಾನುಭವಿಗಳಿಗೆ ಹಣ ಬಿಡುಗಡೆ ಮಾಡುವ ಬಗ್ಗೆ ಮಾತನಾಡಿ ಅನುಮತಿ ನೀಡಿರುವುದು. ಪ್ರೌಢಶಾಲಾ ಕಟ್ಟಡಗಳ ನಿರ್ಮಾಣಕ್ಕೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ

07–08ನೇ ಸಾಲಿನ ಜಿಲ್ಲಾ ವಲಯ ಯೋಜನೆಯಡಿ ರಂಗಮಂದಿರ ನಿರ್ಮಾಣಕ್ಕೆ ಧನ ಸಹಾಯ ಇತ್ಯಾದಿ ಬಗ್ಗೆ. 2–00ಲಕ್ಷ, ಯುವಜನ ಸೇವಾ ಕ್ರೀಡಾ ಇಲಾಖೆಯಿಂದ ವಿವಿಧ ಕಾರ್ಯಕ್ರಮಗಳ ಅನುದಾನ ಬಿಡುಗಡೆ ಬಗ್ಗೆ. 15–18ಲಕ್ಷ, ಜಿಲ್ಲಾ ಆರೋಗ್ಯ ಕೇಂದ್ರಕ್ಕೆ ಬಿಡುಗಡೆ ಮಾಡಲಾಗಿದೆ.

ಶಿಕ್ಷಣ ಇಲಾಖೆಯಿಂದ ಲಿಂಕ್ ಡಾಕ್ಯುಮೆಂಟ್‌ನಲ್ಲಿ ಕೇಂದ್ರ ಪರಸ್ಕೃತ ಯೋಜನೆ ಅಂಗವಿಕಲ ಮಕ್ಕಳ ಸಮಗ್ರ ಶಿಕ್ಷಣದ ಬಗ್ಗೆ. ಶಾಲಾ ದುರಸ್ಥಿ ಕಾರ್ಯಕ್ರಮಗಳನ್ನು ಕೈಗೊಳ್ಳುವಲ್ಲಿ ಬಹಳ ತಾರತಮ್ಯ ಮಾಡಿರುವ ಬಗ್ಗೆ ನೋಟ್ ಪುಸ್ತಕ, ಪೆನ್, ಇತ್ಯಾದಿಗಳನ್ನು ಶಿಕ್ಷಣ ಇಲಾಖೆಯವರೇ ಖರೀದಿಸಬಹುದಾಗಿದೆ ಎಂದು ಚರ್ಚಿಸಿ ಅನುಮೋದಿಸಲಾಯಿತು. 80–00 ಲಕ್ಷ ಗ್ರಂಥಾಲಯ ಇಲಾಖೆಯಿಂದ ಜಿಲ್ಲೆಯ 185 ಗ್ರಾಮ ಪಂಚಾಯತಿಯವರು ಅಗತ್ಯವಿರುವ ಪುಸ್ತಕಗಳನ್ನು ನಿಯಮಾನುಸಾರ ಖರೀದಿಸುವ ಬಗ್ಗೆ. 33–00 ಶಿಕ್ಷಣ ಇಲಾಖೆಯಿಂದ ಜೆರಾಕ್ಸ್, ಕಂಪ್ಯೂಟರ್, ಇತ್ಯಾದಿ ಇನ್ನು ಮುಂದೆ ಕೊಟೇಷನ್ ಮುಖಾಂತರ ಏನೇ ಖರೀದಿಸಿದರೂ ಸ್ಥಾಯಿಸಮಿತಿ ಗಮನಕ್ಕೆ ತಂದು ಖರೀದಿಸುವ ಬಗ್ಗೆ. ಸರ್ಕಾರಿ ಮದ್ದೇರು ಪ್ರೌಢಶಾಲೆ ಶಾಲೆಗೆ ಸುವರ್ಣ ಜಲ ಯೋಜನೆಯಡಿಯಲ್ಲಿ ನೀರು ಸೌಲಭ್ಯ ಕಲ್ಪಿಸಲು ಅನುದಾನ ಬಿಡುಗಡೆ ಮಾಡು ಬಗ್ಗೆ, ಕಾಮಗಾರಿ ಕೂಡಲೇ ಪ್ರಾರಂಭ ಮಾಡುವ ಬಗ್ಗೆ. ಶಿಕ್ಷಣ ಇಲಾಖೆಯಿಂದ 80–00ಲಕ್ಷ, ಆರೋಗ್ಯ ಇಲಾಖೆಯ ಕಟ್ಟಡ ನಿರ್ವಹಣೆ ಕಾಮಗಾರಿಗಳ(ತಾಲ್ಲೂಕುವಾರು) ತಯಾರಿಸಲಾದ ಗ್ರಾಮಗಳ ಪಟ್ಟಿಯ ಜಿಲ್ಲಾ ಪಂಚಾಯತ್ ಸದಸ್ಯರನ್ನು ಒಳಗೊಂಡು ಮಾಡಿಲ್ಲವೆಂದು ಮತ್ತು ಸದರಿ ಪಟ್ಟಿ ಬದಲಾವಣೆ ಯೋಜನೆಯಡಿಯಲ್ಲಿ ನೀರು ಸೌಲಭ್ಯ ಕಲ್ಪಿಸಲು ಕನ್ನಡ & ಸಂಸ್ಕೃತಿ ಇಲಾಖೆಯಿಂದ ಬಯಲು ರಂಗಮಂದಿರಗಳ ನಿರ್ಮಾಣದ ಬಗ್ಗೆ 2–03 ಪಂಚಾಯತ್‌ರಾಜ್ ಇಂಜಿನಿಯರಿಂಗ್ ವಿಭಾಗ ಚಿತ್ರದುರ್ಗ ಕುಡಿಯುವ ನೀರಿನ ಬಗ್ಗೆ ಕೋಟಿ 12–58 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ಎನ್.ಆರ್.ಹೆಚ್.ಎಂ. ಯೋಜನೆಯಡಿ ಬಿಡುಗಡೆಯಾದ ಅನುದಾನದ ಬಗ್ಗೆ 2008–09ನೇ ಸಾಲಿಗೆ 34.50ಲಕ್ಷ ಶಿಕ್ಷಣ ಇಲಾಖೆಯಿಂದ ಸರ್ವಶಿಕ್ಷಣ ಅಭಿಯಾನದಡಿ 6 ತಾಲ್ಲೂಕುಗಳಲ್ಲಿ ಒಟ್ಟು 2513 ಶಾಲೆಗಳಿಗೆ ಬಣ್ಣ ಬಳಿಯುವ ಕಾಮಗಾರಿಯನ್ನು ಆಯಾ ಶಾಲೆಯ ಎಸ್.ಡಿ.ಎಂ.ಸಿ. ಮುಖಾಂತರ ಅನುಷ್ಠಾನಗೊಳಿಸಿರುವ ಬಗ್ಗೆ. ರೂ.158.40ಲಕ್ಷ ಆಯುಷ ಯೋಜನೆಯಡಿ ಬಿಡುಗಡೆ ಹಾಗೂ ಖರ್ಚಾದ ಅನುದಾನದ ಬಗ್ಗೆ 187.76ಲಕ್ಷ ಯುವಜನ ಸೇವಾ& ಕ್ರೀಡಾ ಇಲಾಖೆಯಿಂದ ಇಲಾಖೆಯ ಕಾರ್ಯಕ್ರಮಗಳಿಗೆ ಹಣ ಖರ್ಚಾಗಿರುವ ಬಗ್ಗೆ ಮತ್ತು ಉಳಿದ ಅನುದಾನದಲ್ಲಿ ಜಿಲ್ಲಾ ಕ್ರೀಡಾಂಗಣಕ್ಕೆ ಕ್ರೀಡಾ ಸಲಕರಣೆಗಳನ್ನು ಖರೀದಿಸಲು ಅನುಮೋದನೆ ನೀಡುವ ಬಗ್ಗೆ. 7.90 ಲಕ್ಷ ಗ್ರಾಮಾಂತರ ಪ್ರದೇಶಗಳ ಶಾಲೆಗಳಿಗೆ ಕ್ರೀಡಾ ಸಲಕರಣೆಗಳನ್ನು ಖರೀದಿಸಿ ಕೊಡಲು ಅನುಮೋದನೆ ನೀಡುವ ಬಗ್ಗೆ. 2 ಜನ ಕುಸ್ತಿಪಟುಗಳಿಗೆ ಜನವರಿ 2009ರಿಂದ 600–00 ರೂ. ಮಾಸಾಶನ ಮಂಜೂರಾತಿ ಬಗ್ಗೆ. ಆಯುಷ್ ಇಲಾಖೆಯಿಂದ

ಆಯುರ್ವೇದ ಚಿಕಿತ್ಸಾಲಯಗಳ ದುರಸ್ಥಿ ಕಾರ್ಯ. ಸೊಂಡೆಕೆರೆ ಆಸ್ಪತ್ರೆಗೆ ಕಾಂಪೌಂಡ್ ನಿರ್ಮಾಣದ ಬಗ್ಗೆ. 10–00 ಲಕ್ಷ 15–00 ರಾಷ್ಟ್ರೀಯ ಗ್ರಾಮೀಣ ಕುಡಿಯುವ ನೀರಿನ ಯೋಜನೆ. 7105–64 ಲಕ್ಷ ಮುಖ್ಯ ಮಂತ್ರಿಗ್ರಾಮೀಣ ರಸ್ತೆ ಅಭಿವೃದ್ದಿ ಯೋಜನೆ 409–12ಲಕ್ಷ ಏಳು ವರ್ಷಗಳಿಂದ ಅಸ್ತಿತ್ವದಲ್ಲಿರುವ ಖಾಸಗಿ ಪ್ರೌಢಾಶಾಲೆಗಳಿಗೆ ಸಹಾಯ ಅನುದಾನ ಯೋಜನೆ, ಖಾಸಗಿ ಪ್ರೌಢಶಾಲೆಗಳಲ್ಲಿ ಅಡುಗೆ ಮನೆ ಮತ್ತು ಶೌಚಾಲಯ ಕೊರತೆ ಬಗ್ಗೆ. 173–23 ಅಂಗವಿಕಲ ಮಕ್ಕಳಿಗೆ ಸಮಗ್ರ ಶಿಕ್ಷಣ ಕೇಂದ್ರ ಪುರಸ್ಕೃತ ಯೋಜನೆಯಡಿ ಕಾರ್ಯಕ್ರಮ ಅನುಮೋದಿಸುವ ಬಗ್ಗೆ. 80–00 ವಯಸ್ಕರ ಶಿಕ್ಷಣ ಇಲಾಖೆಯಿಂದ ಇಲಾಖೆಯ ಕಾರ್ಯಕ್ರಮಗಳ ಸಭೆಯ ಅನುಮೋದನೆ ಬಗ್ಗೆ. ವೃತ್ತಿ ಕೌಶಲ್ಯ ತರಬೇತಿ, ಎಂಬ್ರಾಯಿಡರಿ ಪ್ಯಾಷನ್ ಡಿಸೈನಿಂಗ್ ಇನ್ನಿತರೆ ಸೌಲಭ್ಯ ರಾತ್ರಿ ಶಾಲೆ ನಡೆಯುವ ಬಗ್ಗೆ. 10–00 ಲಕ್ಷ 4–80ಲಕ್ಷ ಜಿಲ್ಲಾ ಯುವಜನ ಸೇವಾ ಹಾಗಯ ಕ್ರೀಡಾ ಇಲಾಖೆಯಿಂದ ಯೋಜನೆಯ 6 ಕಾರ್ಯಕ್ರಮಗಳಿಗೆ ಯೋಜನೇತರ 5 ಕಾರ್ಯಕ್ರಮಗಳಿಗೆ ಜಿ.ಪಂ. ಸದಸ್ಯರನ್ನು ಒಳಗೊಂಡು ಪುನಃ ಪಟ್ಟಿ ಸಿದ್ಧಮಾಡಲು ಚರ್ಚಿಸಿ ತೀರ್ಮಾನಿಸಲಾಯಿತು. 866–88ಲಕ್ಷ ಪ್ರೌಢಶಾಲಾ ಕಟ್ಟಡ ನಿರ್ಮಾಣ ನಬಾರ್ಡ್ ಯೋಜನೆ 202–07ಲಕ್ಷ ಅಕ್ಷರ ದಾಸೋಹ ಕಾರ್ಯಕ್ರಮ ಬಿಸಿಯೂಟಕ್ಕಾಗಿ 2,41,125 ಮಕ್ಕಳಿಗೆ 1576–00 ಸರ್ವ ಶಿಕ್ಷಣ ಅಭಿಯಾನ ಕಾರ್ಯಕ್ರಮ 685 ಶಿಕ್ಷರ ವೇತನ 440–00 ಸೇರ್ಪಡೆ ಮತ್ತು ಮಾರ್ಪಾಡು ಯೋಜನೆ ಪ್ರೌಢಶಾಲೆ ದುರಸ್ಥಿ 18–00 ವಿದ್ಯಾವಿಕಾಸ ಶುಲ್ಕ ಮರುಪಾವತಿ ಯೋಜನೆ ಎಸ್.ಸಿ./ಎಸ್.ಟಿ ಇತರೆ ಹೆಣ್ಣು ಮಕ್ಕಳಿಗೆ ಶುಲ್ಕದ ಮರುಪಾವತಿಗಾಗಿ ಶಿಕ್ಷಣ ಇಲಾಖೆಯಿಂದ ಮೂಲಕ ಖರ್ಚು ಭರಿಸಲಾಗುವುದು.

**2. ಚಿತ್ರದುರ್ಗ ಜಿಲ್ಲಾ ಪಂಚಾಯತಿಯ ಕೃಷಿ ಮತ್ತು ಕೈಗಾರಿಕಾ ಸ್ಥಾಯಿ ಸಮಿತಿಯ ಅನುದಾನದ ವಿವರ– 2006–2007ರಿಂದ 2010–11**

ಚಿತ್ರದುರ್ಗ ಜಿಲ್ಲಾಪಂಚಾಯತಿಯ ಕೃಷಿ ಮತ್ತು ಕೈಗಾರಿಕಾ ಸ್ಥಾಯಿಸಮಿತಿಯ ಕಾರ್ಯಕ್ಷಮತೆ ಯನ್ನು ನೋಡಿದಾಗ ಸಾಕಾಷ್ಟು ಚರ್ಚೆಗಳು ಮತ್ತು ಅನುದಾನಗಳಿಗೆ ಸಮ್ಮತಿಯನ್ನು ಕೊಡಲಾಗಿದೆ. ಅಲ್ಲದೆ ಒಟ್ಟು ಅನುದಾನದ ವಿವರಣೆಗಳನ್ನು ವಾರ್ಷಿಕವಾರು, ವಲಯವಾರು ಮೊತ್ತವನ್ನು ಕೋಷ್ಟಕಗಳಲ್ಲಿ ನೀಡಲಾಗಿದ್ದು ಸ್ಥಾಯಿಸಮಿತಿವಾರು ಅನುದಾನದ ಅನುಮೋದನೆಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಿದೆ. ರೂ. 92.16 ಲಕ್ಷ ಲಿಂಕ್ ಡಾಕ್ಯುಮೆಂಟ್ ಪ್ರಕಾರ ಹನಿ ನೀರಾವರಿ ಯೋಜನೆಗೆ ಮುಖ್ಯ ಲೆಕ್ಕಾಧಿಕಾರಿ, ಜಿಲ್ಲಾ ಪಂಚಾಯತ್, ಚಿತ್ರದುರ್ಗ, ತಿಳಿಸಿದರು. ಸಿಬ್ಬಂದಿ ವಿವರ, ಕಟ್ಟಡ ವಿವರ, ಖರೀದಿಸಿದ ಔಷಧಿ ವಿವರ, ಖರ್ಚು, ಇತರೆ. ರೂ. 55.00ಲಕ್ಷ 2006–07 ಮೀನುಗಾರಿಕೆ ಇಲಾಖೆಯಿಂದ ಮೀನು ಮರಿ ಸಾಕಾಣಿಕೆ ಮತ್ತು ಹಂಚಿಕೆ ಮಾಡುವಾಗಿ ಸಮಿತಿ ಸದಸ್ಯರ ಗಮನಕ್ಕೆ ತಂದು ಕೆರೆಗಳನ್ನು ಗುರುತಿಸಿ ಮೀನು ಮರಿಗಳನ್ನು ಹಂಚಿಕೆ

**2. ಹಿರಿಯೂರು ತಾಲ್ಲೂಕು ಪಂಚಾಯತಿ ಸಾಮಾಜಿಕ ನ್ಯಾಯ ಸಮಿತಿಯ ಚರ್ಚಿತ ವಿಷಯಗಳ ನಡಾವಳಿಗಳ ಕೋಷ್ಟಕ.**

ಹಿರಿಯೂರು ತಾಲ್ಲೂಕು ಪಂಚಾಯತಿಯ ಸಾಮಾಜಿಕ ನ್ಯಾಯ ಸಮಿತಿಯ ಕಾರ್ಯಕ್ಷಮತೆಯನ್ನು ನೋಡಿದಾಗ ಸಾಕಷ್ಟು ಚರ್ಚೆಗಳು ಮತ್ತು ಅನುದಾನಗಳಿಗೆ ಸಮ್ಮತಿಯ ವಿವರಗಳನ್ನು ವಿಶ್ಲೇಷಿಸಲಾಗಿದೆ. ಅಲ್ಲದೆ ಒಟ್ಟು ಅನುದಾನದ ವಿವರಣೆಗಳನ್ನು ವಾರ್ಷಿಕವಾರು, ವಲಯವಾರು ಮೊತ್ತವನ್ನು ಕೋಷ್ಟಗಳಲ್ಲಿ ನೀಡಲಾಗಿದ್ದು ಸ್ಥಾಯಿಸಮಿತಿವಾರು ಅನುದಾನದ ಅನುಮೋದನೆಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಿದೆ.

ಹಿರಿಯೂರು ತಾಲ್ಲೂಕು ಪಂಚಾಯತ್ ಸಾಮಾಜಿಕ ನ್ಯಾಯ ಸಮಿತಿ ಸ್ಥಾಯಿಸಮಿತಿಯ 2007–2011ರ ಅನುದಾನದ ಮತ್ತು ಅದರ ಕಾರ್ಯನಿರ್ವಹಣೆಯ ವಿವರಗಳನ್ನು ನೋಡಿದಾಗ ಸಮಾಜ ಕಲ್ಯಾಣ ಇಲಾಖೆಯ ಹಾಜರಿದ್ದ ಅಧಿಕಾರಿಗಳು ವಿಶೇಷ ಅಭಿವೃದ್ಧಿ ಯೋಜನೆಯಡಿ ಗುಚ್ಚ ಗ್ರಾಮಗಳ ಆಯ್ಕೆ ನಂತರ ಫಲಾನುಭವಿಗಳ ಪಟ್ಟಿ ತಯಾರಿಸಿ ಅನುಮೋದನೆಯನ್ನು ಪಡೆದು ಅನುಷ್ಠಾನಗೊಳಿಸುವುದು ಎಂದು ಸಭೆಗೆ ವಿವರಿಸಿದರು. ರೇಷ್ಮೆ ಇಲಾಖೆಯ ಹಾಜರಿದ್ದ ಅಧಿಕಾರಿಯು ವಿಶೇಷ ಘಟಕ ಯೋಜನೆಯಡಿ ಮತ್ತು ಗಿರಿಜನ ಉಪಯೋಜನೆಯಡಿ ತಾಲ್ಲೂಕನ್ನು ಒಂದು ಘಟಕವನ್ನಾಗಿ ಪರಿಗಣಿಸಿ ಫಲಾನುಭವಿಗಳನ್ನು ಆಯ್ಕೆ ಮಾಡಿ ಅನುಮೋದನೆ ಪಡೆದು ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲಾಗುವುದು ಎಂದು ಸಭೆಗೆ ವಿವರಿಸಿದರು. ಮೀನುಗಾರಿಕೆ ಇಲಾಖೆಯಲ್ಲಿ 2011–12ನೇ ಸಾಲಿಗೆ ವಿಶೇಷ ಘಟಕ ಯೋಜನೆಯಡಿ ಕ್ರಿಯಾ ಯೋಜನೆಯನ್ನು ತಯಾರಿಸಿ ಸಲ್ಲಿಸಿದ್ದು, ಗುಚ್ಚ ಗ್ರಾಮಗಳ ಆಯ್ಕೆ ನಂತರ ಫಲಾನುಭವಿ ಪಟ್ಟಿಯನ್ನು ಅನುಮೋದನೆಗಾಗಿ ಸಲ್ಲಿಸಲಾಗುವುದು ಎಂದು ಸಭೆಗೆ ವಿವರಿಸಿದರು. ಸಹಕಾರ ಇಲಾಖೆಯ ಹಾಜರಿದ್ದ ಅಧಿಕಾರಿಯು ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಬ್ಯಾಂಕ್ ಹಿರಿಯೂರು ಇಲ್ಲಿ ಸಾಲ ಪಡೆದ ಇಬ್ಬರು ಪರಿಶಿಷ್ಟ ಜಾತಿ ಫಲಾನುಭವಿಗಳಿಗೆ ಸಹಾಯಧನ ಮಂಜೂರು ಮಾಡಲು ಅನುಷ್ಠಾನಗೊಳಿಸಲು ಹಾಜರಿದ್ದ ಅಧಿಕಾರಿಗೆ ಸಭೆಯು ಸೂಚಿಸಿತು. ಜಲಾನಯನ ಇಲಾಖೆಯ ಹಾಜರಿದ್ದ ಅಧಿಕಾರಿಯು ವಿಶೇಷ ಘಟಕ ಯೋಜನೆಯಡಿ ಗುಚ್ಚ ಗ್ರಾಮಗಳ ಆಯ್ಕೆಯ ನಂತರ ಕಾರ್ಯಕ್ರಮ ಅನುಷ್ಠಾನಗೊಳಿಸಲು ಅಗತ್ಯ ಕ್ರಮ ಜರುಗಿಸಲಾಗುವುದು ಎಂದು ಸಭೆಗೆ ವಿವರಿಸಿದರು. ಕೃಷಿ ಇಲಾಖೆಯ ಹಾಜರಿದ್ದ ಅಧಿಕಾರಿಗಳು ಮಳೆ ಮತ್ತು ಹವಮಾನ ವರದಿ, ಕೃಷಿ ಚಟುವಟಿಕೆ ಮತ್ತು ಬೆಳೆಗಳ ಪರಿಸ್ಥಿತಿ, ಕೀಟ ಮತ್ತು ರೋಗಭಾದೆ, ರಸಗೊಬ್ಬರ ಲಭ್ಯತೆ ಮುಂತಾದ ಕಾರ್ಯಕ್ರಮಗಳ ಲಭ್ಯತೆ ಪ್ರಗತಿ ವಿವರಗಳನ್ನು ಸಭೆಗೆ ವಿವರಿಸಿದರು. ಆರೋಗ್ಯ ಇಲಾಖೆ ಹಿರಿಯೂರಿನ ಸಾರ್ವಜನಿಕ ಆಸ್ಪತ್ರೆಯಲ್ಲಿ ಸ್ವಚ್ಚತೆ ಇಲ್ಲದಿರುವುದೆಂದು ಸದಸ್ಯರುಗಳು ತೀವ್ರವಾಗಿ

ಆಕ್ಷೇಪಿಸಿದರು ಹಾಗೂ ಇ.ಸಿ.ಜಿ. ಇದ್ದು ಇದಕ್ಕೆ ಸಂಬಂಧಿಸಿದಂತೆ ವೈದ್ಯರು ಇರುವುದಿಲ್ಲ ಎಂದು ಸಭೆಯಲ್ಲಿ ವಿವರಿಸಿದರು. ಬೆಸ್ಕಾಂ ಇಲಾಖೆ ಬುರುಡುಕುಂಟೆಯಲ್ಲಿ ಶಾಲೆಯ ಮೇಲೆ ವಿದ್ಯುತ್ ಲೈನ್ ಇದ್ದು ಇದನ್ನು ಬೇರೆಡೆಗೆ ಹಾಕಲು ಸಭಾಧ್ಯಕ್ಷರು ಸೂಚಿಸಿದರು. ರಂಗಾಪುರ ಮತ್ತು ಗೌಡನಹಳ್ಳಿ ಗ್ರಾಮದ ವಿದ್ಯುತ್ ಬದಲಾವಣೆ ಮಾಡಲು ಹಾಗೂ ಗೌಡನಹಳ್ಳಿ ಗ್ರಾಮದ ಟಿ.ಸಿ. ಛಾರ್ಜ್ ಮಾಡಲು ಕ್ಷೇತ್ರದ ತಾಲ್ಲೂಕು ಪಂಚಾಯತಿ ಸದಸ್ಯರು ಸೂಚಿಸಿದರು. ಅಕ್ಷರ ದಾಸೋಹ ಕಾರ್ಯಕ್ರಮದಡಿ ಶಾಲೆಗಳಿಗೆ ತಕ್ಕಡಿ, ಸ್ಟೌವ್, ಪೈಪ್ ಮುಂತಾದ ಸಾಮಗ್ರಿಗಳು ಗಗನ್‌ದೀಪ್ ಎಂಟರ್‌ಪ್ರೈಸಸ್‌ರಲ್ಲಿ ಖರೀದಿಸಲಾಗಿತ್ತು. ಶಿಕ್ಷಣ ಇಲಾಖೆ ಆರೋಗ್ಯ ಚೈತನ್ಯ ಕಾರ್ಯಕ್ರಮದಡಿ ವಿದ್ಯಾರ್ಥಿಗಳಿಗೆ ಆರೋಗ್ಯ ತಪಾಸಣೆ ಮಾಡುವ ಕಾರ್ಯಕ್ರಮ ಪ್ರಗತಿಯಲ್ಲಿದೆ ಎಂದು ಸಭೆಯಲ್ಲಿ ವಿವರಿಸಿದರು. ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ ತಾಳವಟ್ಟಿ ಗ್ರಾಮದಲ್ಲಿ ಕುಡಿಯುವ ನೀರಿನ ಸಮಸ್ಯೆಯಿದ್ದು ಹೊಸದಾಗಿ ಒಂದು ಬೋರ್‌ವೆಲ್ ಹಾಕಿಸಿ ಕೊಡಲು ಕ್ಷೇತ್ರದ ತಾಲ್ಲೂಕು ಪಂಚಾಯತಿ ಸದಸ್ಯರು ಹಾಜರಿದ್ದ ಅಧಿಕಾರಿಗೆ ಸೂಚಿಸಿದರು. ದಿನಾಂಕ–10–06–2011ರಂದು ನಡೆದ ತಾಲ್ಲೂಕು ಪಂಚಾಯತ್ ಸಮಾನ್ಯ ಸಭೆಯ ನಡಾವಳಿಗಳ ಮೇಲೆ ತೆಗೆದುಕೊಂಡ ಕ್ರಮಗಳ ಪರಿಶೀಲನೆ. ಆರೋಗ್ಯ ಇಲಾಖೆ ಹಾಜರಿದ್ದ ಅಧಿಕಾರಿಯು ತಾಲ್ಲೂಕಿನಲ್ಲಿ 5 ಮಲೇರಿಯಾ ಪ್ರಕರಣಗಳು ದಾಖಲಾಗಿದ್ದು ಸಭೆಯಲ್ಲಿ ವಿವರಿಸಿದರು. ಹಾಜರಿದ್ದ ಅಕ್ಷರ ದಾಸೋಹ ಅಧಿಕಾರಿಯು ಅಡುಗೆ ತಯಾರಿಕಾ ವೆಚ್ಚ, ತರಕಾರಿ ಸಾದಿಲ್ವಾರು ಅಡುಗೆ ಸಂಭಾವನೆ ಅನುದಾನ ಬಿಡುಗಡೆ ಯಾಗಿದ್ದು, ಖರ್ಚಾಗಿದೆ ಎಂದು ಸಭೆಗೆ ವಿವರಿಸಿದರು. ಸಮಾಜ ಕಲ್ಯಾಣ ಇಲಾಖೆ 2011–12ನೇ ಸಾಲಿಗೆ ಕಟ್ಟಡ ನಿರ್ವಹಣೆಯ ಯೋಜನೆಯಡಿಯಲ್ಲಿ ಈ ಕೆಳಕಂಡ ವಿದ್ಯಾರ್ಥಿ ನಿಲಯಗಳ ದುರಸ್ಥಿ ಕಾಮಗಾರಿಗಳನ್ನು ಕೈಗೊಳ್ಳಲು ಸಭೆಯು ಚರ್ಚಿಸಿ ಅನುಮೋದನೆ ನೀಡಿತು. ಸರ್ಕಾರಿ ಬಾಲಕರ ವಿದ್ಯಾರ್ಥಿ ನಿಲಯ ಹಿರಿಯೂರು ಟೌನ್–ಕಟ್ಟಡ ದುರಸ್ಥಿ, ವಿದ್ಯುಚ್ಛಕ್ತಿ ದುರಸ್ಥಿ, ನೀರಿನ ತೊಟ್ಟಿಯ ದುರಸ್ಥಿ, ಮತ್ತು ಕಟ್ಟಡದ ಸುಣ್ಣ ಬಣ್ಣ ಹಾಗೂ 2000 ಲೀಟರ್‌ನ ಒಂದು ಸಿಂಟೆಕ್ಸ್ ಅಳವಡಿಕೆ. ಸ॥ ಬಾಲಕಿಯರ ವಿದ್ಯಾರ್ಥಿ ನಿಲಯ ಖಂಡೇನಹಳ್ಳಿ–ಕಟ್ಟಡಕ್ಕೆ ಸುಣ್ಣ ಬಣ್ಣ ಸ॥ ಬಾಲಕರ ವಿದ್ಯಾರ್ಥಿ ನಿಲಯ ದಿಂಡಾವರ–ಶೌಚಾಲಯ, ಸ್ನಾನಗೃಹಗಳಿಗೆ, ಅಡುಗೆ ಮನೆಗೆ ನೀರಿನ ಪೈಪ್ ಲೈನ್ ಸಂಪರ್ಕ, ವಿದ್ಯುತ್ ದುರಸ್ಥಿ, 5 ಹೆಚ್‌ಪಿ ಸಬ್‌ಮರ್ಸಿಬಲ್ ಪಂಪ್ ಮೋಟಾರ್ ಅಳವಡಿಕೆ. ಸ॥ ಬಾಲಕರ ವಿದ್ಯಾರ್ಥಿ ನಿಲಯ ವಿ.ವಿ.ಪುರ–ಕಟ್ಟಡಕ್ಕೆ ಚುರುಕಿ ಹಾಕಿಸುವುದು, ಗೋಡೆಗೆ ಸೀಲಿಂಗ್ ಹಾಕುವುದು, ವಿದ್ಯುತ್ ದುರಸ್ಥಿ, ಶಿಥಿಲಾವಸ್ಥೆಯಲ್ಲಿರುವ 2 ಶೌಚಾಲಯಗಳ ಗೋಡೆಯನ್ನು ಕೆಡವಿ 2 ಕೊಠಡಿಗಳಾಗಿ ಪರಿವರ್ತಿಸಿರುವುದು. ಬಾಲಕರ ವಿದ್ಯಾರ್ಥಿ ನಿಲಯ ಯಲ್ಲದಕೆರೆ–ಕಟ್ಟಡಕ್ಕೆ ಸುಣ್ಣ ಬಣ್ಣ, ಕಟ್ಟಡದ ಮುಂಭಾಗ ಭೂ ಸಮಪಾತಳಿ ಮಾಡುವುದು, ವಿದ್ಯುತ್ ದುರಸ್ಥಿ. ಬಾಲಕರ ವಿದ್ಯಾರ್ಥಿ ನಿಲಯ ದೇವರಕೊಟ್ಟ– ಬೋರ್‌ವೆಲ್

ಕೊರೆಯಿಸಿ 5 ಹೆಚ್‌ಪಿ ಸಬ್ ಮರ್ಸಿಬಲ್ ಪಂಪ್ ಮೋಟಾರ್ ಅಳವಡಿಕೆ ಹಾಗೂ ಕಟ್ಟಡಕ್ಕೆ ಸುಣ್ಣ ಬಣ್ಣ. ಬಾಲಕರ ವಿದ್ಯಾರ್ಥಿ ನಿಲಯ ಐಮಂಗಲ–ಕಟ್ಟಡ ಹಾಗೂ ಕಾಂಪೌಂಡ್ ಗೋಡೆಗೆ ಸುಣ್ಣ ಬಣ್ಣ ಹಾಕುವುದು. ವಸತಿ ಶಾಲೆ. ಕೆ.ಎಂ.ಕೊಟ್ಟಿಗೆ–ಕಟ್ಟಡಕ್ಕೆ ಸುಣ್ಣ ಬಣ್ಣ ದುರಸ್ಥಿ. ಕಾಲೇಜು ಬಾಲಕರ ವಿದ್ಯಾರ್ಥಿ ನಿಲಯ, ವಿದ್ಯುತ್ ದುರಸ್ಥಿ ಹಾಗೂ ಶೌಚಾಲಯಗಳಿಗೆ ಟೈಲ್ಸ್ ಅಳವಡಿಕೆ ಹಾಗೂ ಪೈಪ್‌ಲೈನ್ ಸಂಪರ್ಕ ಬಾಲಕರ ವಿದ್ಯಾರ್ಥಿ ನಿಲಯ ಹರಿಯಬ್ಬೆ–ಬೋರ್‌ವೆಲ್‌ಗೆ 2 ಹೆಚ್‌ಪಿ ಮೋಟಾರ್ ಅಳವಡಿಕೆ. ಅಂಬೇಡ್ಕರ್ ಅಭಿವೃದ್ದಿ ನಿಗಮ ಸಭೆಯಲ್ಲಿ ಸ್ವಯಂ ಉದ್ಯೋಗ ಯೋಜನೆ, ಐ.ಎಸ್.ಬಿ. ಯೋಜನೆ ಭೂ–ಒಡೆತನ ಯೋಜನೆ ಗಂಗಾ ಕಲ್ಯಾಣ ಯೋಜನೆಗಳ ಪ್ರಗತಿ ವಿವರಗಳನ್ನು ಸಭೆಗೆ ವಿವರಿಸಿದರು. ಬೆಸ್ಕಾಂ ಇಲಾಖೆ ತಾ.ಪಂ. ಸದಸ್ಯರು ಸೂಚಿಸಿರುವ ಸಮಸ್ಯೆಗಳಿಗೆ ಜರೂರು ಕ್ರಮ ಕೈಗೊಳ್ಳಲು ಹಾಗೂ ವಿದ್ಯುತ್ ಪರಿವರ್ತಕಗಳನ್ನು ಹೆಚ್ಚಿಗೆ ದಾಸ್ತಾನು ಇಟ್ಟುಕೊಳ್ಳಲು ಹಾಜರಿದ್ದ ಅಧಿಕಾರಿಗೆ ಸಭೆಯು ಸೂಚಿಸಿತು. ಸಾಮಾಜಿಕ ಅರಣ್ಯ ಇಲಾಖೆ ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪಯೋಜನೆಯಡಿ ಫಲಾನುಭವಿಗಳಿಗೆ ಸಿಮೆಂಟ್ ಷೀಟುಗಳನ್ನು ವಿತರಿಸಲಾಗುವುದೆಂದು ಸಭೆಗೆ ವಿವರಿಸಿದರು. ಪಶುಪಾಲನಾ ಇಲಾಖೆ ತಾಲ್ಲೂಕಿನಲ್ಲಿ ಮಳೆಯು ವಿಫಲವಾಗಿರುವುದರಿಂದ ಜಾನುವಾರುಗಳಿಗೆ ಮೇವು ಒದಗಿಸಲು ಗಾಯಿತ್ರಿ ಜಲಾಶಯದ ಹತ್ತಿರ ಗೋಶಾಲೆಗಳನ್ನು ತೆರೆಯಲು ಉದ್ದೇಶಿಸಲಾಗಿದೆ ಎಂದು ಸಭೆಗೆ ವಿವರಿಸಿದರು. ಶಿಕ್ಷಣ ಇಲಾಖೆ 2010–11ನೇ ಸಾಲಿನ ಉಚಿತ ಸೈಕಲ್ ವಿತರಣಾ ಯೋಜನೆಯಡಿ ವಿದ್ಯಾರ್ಥಿಗಳಿಗೆ ಸೈಕಲ್ ವಿತರಣೆಯಾಗಿದೆ ಎಂದು ಸಭೆಯಲ್ಲಿ ವಿವರಿಸಿದರು. ರೇಷ್ಮೆ ಇಲಾಖೆ ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಯೋಜನೆಯಡಿ ತಾಲ್ಲೂಕನ್ನು ಒಂದು ಘಟಕವನ್ನಾಗಿ ಪರಿಗಣಿಸಿ ಫಲಾನುಭವಿಗಳ ಆಯ್ಕೆ ಮಾಡಬಹುದು ಎಂದು ಸಭೆಗೆ ವಿವರಿಸಿದರು. ಶಿಶು ಅಭಿವೃದ್ಧಿ ಇಲಾಖೆ ಅಂಗನವಾಡಿ ಕಟ್ಟಡ ಕಾರ್ಯಕ್ರಮದಡಿಯಲ್ಲಿ ಅಂಗನವಾಡಿ ಕಟ್ಟಡಗಳ ದುರಸ್ಥಿಗೆ ಬಳಸಿಕೊಳ್ಳಲು ಸಭೆಯನ್ನು ಕೋರಿಕೊಂಡರು. ಸಹಕಾರ ಇಲಾಖೆ ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ಹಿರಿಯೂರು, ಇಲ್ಲಿ ಸಾಲ ಪಡೆದ ಪರಿಶಿಷ್ಟ ಜಾತಿಯ ಇಬ್ಬರು ಫಲಾನುಭವಿಗಳಿಗೆ ಶೇ 60% ಸಬ್ಸಿಡಿ ನೀಡಲಾಗುವುದು ಎಂದು ಸಭೆಯಲ್ಲಿ ವಿವರಿಸಿದರು. ತೋಟಗಾರಿಕೆ ಇಲಾಖೆ ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಯೋಜನೆಯಡಿ ಫಲಾನುಭವಿಗಳಿಗೆ ಉತ್ತಮಗುಣಮಟ್ಟದ ಸ್ಪ್ರಿಂಕ್ಲರ್ ವಿತರಿಸಲು ಸೂಚಿಸಿದರು. ಪಂಚಾಯತ್‌ರಾಜ್ ಇಂಜಿನಿಯರಿಂಗ್ ಉಪವಿಭಾಗ ಸಕಾಲಕ್ಕೆ ಸಾಕಷ್ಟು ಮಳೆ ಬಾರದೆ ತಾಲ್ಲೂಕಿನಾದ್ಯಂತ ಕುಡಿಯುವ ನೀರಿನ ಸಮಸ್ಯೆ ಉಂಟಾಗಿದ್ದು ಅಧಿಕಾರಿಗಳು ಈ ನಿಟ್ಟಿನಲ್ಲಿ ತುರ್ತು ಅಗತ್ಯ ಕ್ರಮ ಕೈಗೊಳ್ಳಬೇಕೆಂದು ಸಭೆಯು ಸೂಚಿಸಿತು. ಕೃಷಿ ಇಲಾಖೆ ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಯೋಜನೆಯಡಿ ಫಲಾನುಭವಿಗಳಿಗೆ ಕೃಷಿ ಪರಿಕರಗಳನ್ನು ಚುನಾಯಿತ ಪ್ರತಿನಿಧಿಗಳ ಗಮನಕ್ಕೆ ತಂದು ಖರೀದಿಸಿ ವಿತರಿಸಲು ಅಧಿಕಾರಿಗಳಿಗೆ ಸಭೆಯು

ಸೂಚಿಸಿತು. ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ 2011-12ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳ ಇಲಾಖಾ ವಿದ್ಯಾರ್ಥಿ ನಿಲಯಗಳ ಸುಧಾರಣೆ ಕಾರ್ಯಕ್ರಮ ಯೋಜನೆಯಲ್ಲಿ ವಿದ್ಯಾರ್ಥಿನಿಲಯಗಳಿಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಹಣ ನಿಗದಿಯಾಗಿರುತ್ತದೆ ಎಂದು ತಿಳಿಸಲಾಯಿತು. ತಾಲ್ಲೂಕು ಪಂಚಾಯತ್ 2011-12ನೇ ಸಾಲಿನ ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ 32 ಗ್ರಾಮ ಪಂಚಾಯತಿಗಳ ಕ್ರಿಯಾ ಯೋಜನೆಗೆ ಸಭೆಯಲ್ಲಿ ಅನುಮೋದನೆ ನೀಡಲಾಯಿತು. ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ 2008-09ನೇ ಸಾಲಿನಲ್ಲಿ ಲಭ್ಯವಿರುವ 2.00 ಲಕ್ಷದ ಆಯ ವ್ಯಯಗಳಲ್ಲಿ ವಿದ್ಯಾರ್ಥಿ ನಿಲಯಗಳಿಗೆ ಎಲ್.ಪಿ.ಜಿ ಅನಿಲ ಒಲೆಗಳನ್ನು ಅಳವಡಿಸುವ ತೀರ್ಮಾನ ಕೈಗೊಳ್ಳುವ ವಿಷಯವನ್ನು ಸಭೆಗೆ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿಸ್ತರಣಾಧಿಕಾರಿಗಳು ಮಂಡಿಸಿದರು. ದಿನಾಂಕ 10-06-08ರಂದು ನಡೆದ ವಿವಿಧ ಸ್ಥಾಯಿ ಸಮಿತಿ ಸಭೆಗಳ ನಡಾವಳಿ ಗಳನ್ನು ಅನುಮೋದಿಸುವ ಕುರಿತು. ಆರೋಗ್ಯ ಇಲಾಖೆಗಳಲ್ಲಿನ ವಿವಿಧ ಕುಟುಂಬ ಕಲ್ಯಾಣ ಕಾರ್ಯಕ್ರಮಗಳಡಿ ಸಾಧಿಸಿದ ಪ್ರಗತಿ ವಿವರಗಳನ್ನು ಹಾಜರಿದ್ದ ಅಧಿಕಾರಿಗಳು ಸಭೆಗೆ ವಿವರಿಸಿದರು. ಕೃಷಿ ಇಲಾಖೆ 2007-08 ನೇ ಸಾಲಿನಲ್ಲಿ ವಿವಿಧ ಯೋಜನೆಗಳಡಿ ಫಲಾನುಭವಿಗಳಿಗೆ ಅಗತ್ಯ ಕೃಷಿ ಸಲಕರಣೆಗಳನ್ನು ತಕ್ಷಣ ಚುನಾಯಿತ ಪ್ರತಿನಿಧಿಗಳನ್ನು ಪರಿಗಣನೆಗೆ ತೆಗೆದುಕೊಂಡು ಅವರ ಸಮ್ಮುಖದಲ್ಲಿ ವಿತರಿಸಲು ಸಭೆಯು ಹಾಜರಿದ್ದ ಅಧಿಕಾರಿಗಳಿಗೆ ಸೂಚಿಸಿತು. ಜಲಾನಯನ ಇಲಾಖೆ 2007-08ನೇ ಸಾಲಿನಲ್ಲಿ ಸಾಧಿಸಿದ ಪ್ರಗತಿ ವಿವರ, ಬಿಡುಗಡೆಯಾದ ಅನುದಾನ, ಖರ್ಚಾದ ಅನುದಾನದ ವಿವರಗಳನ್ನು ಸಭೆಗೆ ಹಾಜರಿದ್ದ ಅಧಿಕಾರಿಗಳು ಸಭೆಯ ಗಮನಕ್ಕೆ ತಂದಿರುತ್ತಾರೆ. ಅಬಕಾರಿ ಇಲಾಖೆ ತಾಲ್ಲೂಕಿನಲ್ಲಿ ಒಟ್ಟು 31 ಬಾರ್‌ಗಳಿದ್ದು, ಏಪ್ರಿಲ್ ಮಾಹಿಯಿಂದ ಸುಮಾರು 51 ರೈಡ್‌ಗಳು ಮಾಡಿ 2270ಲೀಟರ್‌ನಷ್ಟು ಕಳ್ಳಬಟ್ಟಿ ಕೊಳೆ ನಾಶ ಮಾಡಿದೆ, 4 ಜನ ಆರೋಪಿಗಳನ್ನು ಜೈಲಿಗೆ ಕಳುಹಿಸಿದೆ ಎಂಬ ಅಂಶಗಳನ್ನು ಸಭೆಯ ಗಮನಕ್ಕೆ ತಂದಿರುತ್ತಾರೆ. ಶಿಕ್ಷಣ ಇಲಾಖಾವತಿಯಿಂದ ಸಾಧಿಸಿದ ಪ್ರಗತಿ ವಿವರಗಳ, ತಾಲ್ಲೂಕಿನಲ್ಲಿನ ಶಾಲೆಗಳ ವಿವರ ಉಪಾಧ್ಯಾಯರ ವಿವರ ಶಾಲಾ ಕೊಠಡಿಗಳ ದುರಸ್ಥಿ ವಿವರಗಳನ್ನು ಹಾಜರಿದ್ದ ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಭೆಗೆ ವಿವರಿಸಿದರು. ಬಿಸಿಯೂಟ ಯೋಜನೆಯಡಿ ತಾಲ್ಲೂಕಿನ ಖಂಡೇನಹಳ್ಳಿ, ಹಲಗಲದ್ದಿ ಗ್ರಾಮಗಳಲ್ಲಿ ಮಕ್ಕಳಿಗೆ ಆಹಾರ ಸಾಮಗ್ರಿಗಳನ್ನು (ಅಕ್ಕಿ, ಬೇಳೆ) ಪೂರೈಸಿದ್ದು, ಅವು ತುಂಬ ಕಳಪೆ ಪ್ರಮಾಣದಲ್ಲಿವೆ ಎಂದು ಕ್ಷೇತ್ರ ಶಿಕ್ಷಣಾಧಿಕಾರಿಗಳು ಮತ್ತು ಸಹಾಯಕ ನಿರ್ದೇಶಕರು ತನಿಖೆ ನಡೆಸಿದ್ದು, ಮುಖ್ಯೋಪಾಧ್ಯಾಯರು ತೋರಿಸಿ ಸಮಸ್ಯೆಗೆ ಕಾರಣಕರ್ತರಾಗಿರುತ್ತಾರೆ ಎಂದು ತಿಳಿಸಿದರು. ಹಾಜರಿದ್ದ ಪಂಚಾಯತ್‌ರಾಜ್ ಇಂಜಿನಿಯರಿಂಗ್ ವಿಭಾಗದ ಅಧಿಕಾರಿಗಳು ಇಲಾಖಾ ವತಿಯಿಂದ ಸಾಧಿಸಿದ ಪ್ರಗತಿ ವಿವರ ಸಭೆಗೆ ತಿಳಿಸಿದರು. ಪಶುಪಾಲನೆ ಮತ್ತು ಪಶು

ಸಂಗೋಪನೆ ಇಲಾಖೆ 2007–08ನೇ ಸಾಲಿನ ಸುವರ್ಣ ಗ್ರಾಮೋದಯ ಯೋಜನೆಯ ಗ್ರಾಮದಲ್ಲಿ ಆಯ್ದ 9 ಜನ ಫಲಾನುಭವಿಗಳಿಗೆ ಸುಧಾರಿತ ಟಗರು ಮರಿಗಳನ್ನು ಸರ್ಕಾರಿ ಸ್ವಾಮ್ಯದ ಕುರಿ ಘಟಕಗಳಲ್ಲಿ ಖರೀದಿಸಿ ವಿತರಿಸಲಾಯಿತು. ತೋಟಗಾರಿಕೆ ಇಲಾಖೆ 2008–09ನೇ ಸಾಲಿನಿಂದ ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಪ್ರತಿ ಗ್ರಾಮ ಪಂಚಾಯತಿಯಲ್ಲಿ ಪರಿಶಿಷ್ಟ ಜಾತಿ ಮತ್ತು ವರ್ಗ ಫಲಾನುಭವಿಗಳ ಜಮೀನು ಹಾಗೂ ಸರ್ಕಾರಿ ಜಮೀನುಗಳನ್ನು ಗುರುತಿಸಿ ತೋಟಗಾರಿಕೆ ಬೆಳೆ ಅಭಿವೃದ್ದಿಗೆ ಕ್ರಮವಹಿಸಲು ಹಾಜರಿದ್ದ ಅಧಿಕಾರಿಗಳಿಗೆ ಸಭೆ ಸೂಚಿಸಿತು. ಲೋಕೋಪಯೋಗಿ ಇಲಾಖೆ 2007–08ನೇ ಸಾಲಿನಲ್ಲಿ ಇಲಾಖಾವತಿಯಿಂದ ಶಾಲಾ ಕಾಲೇಜುಗಳ ಕಟ್ಟಡ ಕಾಮಗಾರಿಗಳು, ರಸ್ತೆ ಕಾಮಗಾರಿಗಳು ಪೂರ್ಣಗೊಂಡು ನಂತರ, ಕಾಮಗಾರಿಗಳ ವಿವರಗಳನ್ನು ಬಿಡುಗಡೆಯಾದ ಅನುದಾನ, ಖರ್ಚಾದ ಅನುದಾನ ಮತ್ತು ಬಿಡುಗಡೆಯಾಗಬೇಕಾಗಿರುವ ಅನುದಾನದ ವಿವರಗಳನ್ನು ಸಭೆಗೆ ವಿವರಿಸಿದರು. ಶಿಶು ಅಭಿವೃದ್ದಿ ಯೋಜನೆ ಇಲಾಖೆ 2006–07 ಮತ್ತು 2007–08ನೇ ಸಾಲಿನವರೆಗೆ ಅಂಗನವಾಡಿ ಕಟ್ಟಡಗಳ ನಿರ್ಮಾಣ ಮಾಡಲು ಇಲಾಖಾ ವತಿಯಿಂದ ಅನುದಾನ ಬಿಡುಗಡೆ ಮಾಡಿರುವ ವಿವರ ಸಭೆಗೆ ತಿಳಿಸಿದರು. ಸಮಾಜ ಕಲ್ಯಾಣ ಇಲಾಖೆ 2008–09ನೇ ಸಾಲಿಗೆ ವಿವಿಧ ಹಾಸ್ಟೆಲ್‌ಗಳಿಗೆ ಅರ್ಜಿ ಸಲ್ಲಿಸಿರುವ ಬಗ್ಗೆ ವಿದ್ಯಾರ್ಥಿಗಳ ಆಯ್ಕೆ ವಿವರಗಳನ್ನು ಹಾಜರಿದ್ದ ಅಧಿಕಾರಿಗಳು ಸಭೆಗೆ ತಿಳಿಸಿದರು. ಪರಿಶಿಷ್ಟ ಜಾತಿ ಮತ್ತು ವರ್ಗಗಳ ಕಾರ್ಪೋರೇಷನ್ 2007–08ನೇ ಸಾಲಿನಲ್ಲಿ ನಿಗಮದಿಂದ ವಿವಿಧ ಸಾಲ ಯೋಜನೆಗಳಡಿ ಆಯ್ಕೆಯಾದ ಹಲವಾರು ಫಲಾನಭವಿಗಳ ಅರ್ಜಿಗಳನ್ನು ಬ್ಯಾಂಕ್‌ಗಳಿಗೆ ಕಳುಹಿಸಿದೆ ಎಸ್.ಸಿ, ಎಸ್.ಟಿ ಅಭಿವೃದ್ಧಿ ಅಧಿಕಾರಿಗಳು ತಾವುಗಳೇ ನೇರವಾಗಿ ಆಯ್ಕೆ ಪಟ್ಟಿ ಬದಲಾಯಿಸಿ ಆಯ್ಕೆಯಾಗದೇ ಇರುವ ಫಲಾನುಭವಿಗಳಿಂದ ಅರ್ಜಿಗಳನ್ನು ಬ್ಯಾಂಕಿಗೆ ಕಳುಹಿಸಿ ಕರ್ತವ್ಯಲೋಪ ಎಸಗಿರುವ ವಿಚಾರ ಸಭೆಗೆ ತಿಳಿಸಿದರು. ಇಲಾಖೆ ಚರ್ಚೆಯ ವಿಷಯ ತಾಲ್ಲೂಕು ಪಂಚಾಯತಿ ಇಲಾಖೆ 2008–09 ನೇ ಸಾಲಿಗೆ ಸರ್ಕಾರದಿಂದ ವಿವಿಧ ಯೋಜನೆಗಳಡಿ ನಿಗದಿಪಡಿಸಿರುವ ಆರ್ಥಿಕ ಮತ್ತು ಭೌತಿಕ ಗುರಿಗಳಿಗೆ ತಯಾರಿಸಿದ ಕ್ರಿಯಾ ಯೋಜನೆಗಳ ವಿವರಗಳನ್ನು ಸಭೆಯ ಗಮನಕ್ಕೆ ತಂದಿರುತ್ತಾರೆ.

### 3. ಮೊಳಕಾಲ್ಮೂರು ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿಗಳ ಚರ್ಚಿತ ವಿಷಯಗಳು

ಮೊಳಕಾಲ್ಮೂರು ತಾಲ್ಲೂಕು ಪಂಚಾಯತಿಯಲ್ಲಿ ಮೂರು ಸ್ಥಾಯಿ ಸಮಿತಿಗಳು ರಚನೆಗೊಂಡಿದ್ದರೂ ಸಹ, ಇವುಗಳ ಮೂರು ಸ್ಥಾಯಿ ಸಮಿತಿಗಳಲ್ಲಿ ಯಾವುದೇ ರೀತಿಯ ಸಭೆಗಳು ನಡೆದಿರುವುದಿಲ್ಲ. ಮತ್ತು ಎಲ್ಲಾ ಇಲಾಖೆಗಳ ಅನುಮೋದನೆಗಳು ಮತ್ತು ಚರ್ಚೆಗಳು ಸಾಮಾನ್ಯ ಸಭೆಗಳಲ್ಲಿ ಅನುಮೋದನೆಗೊಂಡಿರುತ್ತವೆ.

### 3. ಗ್ರಾಮ ಪಂಚಾಯತಿಯ ಸ್ಥಾಯಿ ಸಮಿತಿಗಳ ಕಾರ್ಯಕ್ಷಮತೆ

ಅಧ್ಯಯನ ನಡಸಿದ 6 ಗ್ರಾಮಪಂಚಾಯತಿಗಳ ಸ್ಥಾಯಿಸಮಿತಿಗಳ ಕಾರ್ಯಕ್ಷಮತೆಯನ್ನು ನೋಡಿದಾಗ ಸ್ಥಾಯಿ ಸಮಿತಿಗಳು ರಚನೆಗೊಂಡಿದ್ದರೂ ಸಹ, ಈ ಮೂರು ಸ್ಥಾಯಿ ಸಮಿತಿಗಳಲ್ಲಿ ಯಾವುದೇ ರೀತಿಯ ಸಭೆಗಳು ನಡೆದಿರುವುದಿಲ್ಲ. ಮತ್ತು ಎಲ್ಲಾ ಇಲಾಖೆಗಳ ಅನುಮೋದನೆಗಳು ಚರ್ಚೆಗಳು ಸಾಮಾನ್ಯ ಸಭೆಗಳಲ್ಲಿ ಅನುಮೋದನೆಗೊಂಡಿರುತ್ತವೆ. ದಾಖಲೆಗಳಲ್ಲಿ ಮಾತ್ರ ಗ್ರಾಮಪಂಚಾಯತಿಗಳ ಸ್ಥಾಯಿಸಮಿತಿಗಳು ರಚನೆಗೊಂಡಿವೆ ಇದರಿಂದ ಯಾವುದೇ ಉಪಯೋಗ ಗ್ರಾಮಗಳಲ್ಲಿ ಆಗಿಲ್ಲ ಎಂಬುದು ಅಧ್ಯಯನ ಸಂದರ್ಭದಲ್ಲಿ ಕಂಡುಬಂದಿದೆ.

ಮೇಲಿನ ವಿವರಣೆಗಳನ್ನು ಗ್ರಾಮ, ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತಿ ಸ್ಥಾಯಿಸಮಿತಿಗಳ ಕಾರ್ಯಕ್ಷಮತೆಯನ್ನು ತೌಲನಿಕವಾಗಿ ನೋಡಿದಾಗ ಅಧ್ಯಯನ ನಡೆಸಿದ ಸಂದರ್ಭದಲ್ಲಿ ಕಂಡುಬಂದಂತಹ ಫಲಿತಗಳೆಂದರೆ, ಜಿಲ್ಲಾ ಪಂಚಾಯತಿಗಳ ಸ್ಥಾಯಿ ಸಮಿತಿಗಳ ನಡವಳಿಗಳನ್ನು ಪರಿಶೀಲನೆಗೆ ಒಳಪಡಿಸಿದ ಸಂದರ್ಭದಲ್ಲಿ ಕಂಡುಬಂದಂತಹ ಬಹುಮುಖ್ಯ ಅಂಶವೆಂದರೆ ಬಹುತೇಕವಾಗಿ ಜಿಲ್ಲಾ ಪಂಚಾಯತಿಯ ಅನುದಾನಗಳು ಇಲಾಖೆಗಳಿಗೆ ಬಿಡುಗಡೆಯಾಗುವ ಮುನ್ನ ಸಂಬಂಧಪಟ್ಟ ಸ್ಥಾಯಿ ಸಮಿತಿಗಳಲ್ಲಿ ಚರ್ಚೆಗೆ ಒಳಪಟ್ಟಿರುವುದಲ್ಲದೆ ಅಂತಹ ಅನುದಾನಕ್ಕೆ ಸಂಬಂಧಿಸಿದಂತೆ ಸ್ಥಾಯಿ ಸಮಿತಿಗಳು ಬಹುಮತದಿಂದ ಅಂಗೀಕರಿಸಿದ ಬಳಿಕವೇ ಸಾಮಾನ್ಯ ಸಭೆಗಳಲ್ಲಿಯು ಸಹ ಸ್ಥಾಯಿ ಸಮಿತಿಗಳ ಅನುಮೋದನೆಗಳನ್ನೆ ಪರಿಗಣಿಸಿ ಪರಿಗಣನೆಗೆ ತೆಗೆದುಕೊಂಡು ಅದೇ ಅನುಮೋದನೆಗಳನ್ನು ಸರ್ವಾನುಮತದಿಂದ ಅನುಮೋದನೆ ನೀಡಿ ಇಲಾಖೆಗಳಿಗೆ ಹಣವನ್ನು ಮಂಜೂರು ಮಾಡಿರುವುದು ಕಂಡುಬಂದಿದೆ. ಆ ಮೂಲಕ ಜಿಲ್ಲಾ ಪಂಚಾಯತಿಯ ಐದು ಸ್ಥಾಯಿಸಮಿತಿಗಳು ಸಕ್ರಿಯವಾಗಿರಲು ಪ್ರಮುಖ ಕಾರಣ ಈ ಸ್ಥಾಯಿ ಸಮಿತಿಗಳ ಮೂಲಕ ಅನುದಾನದ ಹರಿವಿಕೆ ಪ್ರಕ್ರಿಯೆಯು ನಿರಂತರವಾಗಿರುವ ಕಾರಣ ಈ ಸ್ಥಾಯಿ ಸಮಿತಿಗಳು ಹಣಕಾಸಿನ ಅಂಶಗಳನ್ನು ಆಧರಿಸಿಯೇ ಯಶಸ್ವಿಯಾಗಿರುವುದು ಕಂಡುಬಂದಿದೆ.

ಇನ್ನೂ ಮುಂದುವರೆದು ವಿಶ್ಲೇಶಿಸುವುದಾದರೆ, ಗ್ರಾಮ ಪಂಚಾಯತಿ, ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಗಳ ಸಾಮಾಜಿಕ ನ್ಯಾಯ ಸಮಿತಿಗಳು ಯಾವುದೆ ಸಾಮಾಜಿಕ ಅನ್ಯಾಯ ಮತ್ತು ಶೋಷಣೆಗಳಿಂದ ಪರಿಶಿಷ್ಟ ಜಾತಿ, ಪಂಗಡ, ಹಿಂದುಳಿದ ವರ್ಗಗಳಿಗೆ ರಕ್ಷಣೆ ನೀಡುವುದರ ಜೊತೆಗೆ ಮಹಿಳೆ ಮತ್ತು ಮಕ್ಕಳಿಗೆ ಸಾಮಾಜಿಕ ನ್ಯಾಯವನ್ನು ನೀಡುವಂತಹ ಗುರುತರವಾದ ಜವಾಬ್ದಾರಿಯನ್ನು ಈ ಸಮಿತಿಯು ಹೊಂದಿದೆ. ಗ್ರಾಮ ಪಂಚಾಯತಿಗಳ ಎಲ್ಲಾ ಸ್ಥಾಯಿಸಮಿತಿಗಳು ನಾಮಮಾತ್ರ ರಚನೆಗೊಂಡಿರುವುದು ಅಧ್ಯಯನದಲ್ಲಿ ಕಂಡುಬಂದಿದೆ. ಆದರೆ ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಯ ಸಾಮಾಜಿಕ ನ್ಯಾಯ

ಸ್ಥಾಯಿಸಮಿತಿಗಳನ್ನು ವಿಶ್ಲೇಶಿಸಿದ ಸಂದರ್ಭದಲ್ಲಿ ಕಂಡುಬಂದಂತಹ ಪ್ರಮುಖ ಅಂಶವೆಂದರೆ, ಈ ಸಮಿತಿಯು ಕೇವಲ ಹಾಸ್ಟೆಲ್‌ಗಳ ನಿರ್ಮಾಣ, ಸಮಾಜ ಕಲ್ಯಾಣ ಇಲಾಖೆ ಮುಖಾಂತರ ಹಣ ಬಿಡುಗಡೆ ಮಾಡಿರುವುದು ಸಂಬಂಧಪಟ್ಟ ಯೋಜನೆಗಳ ಫಲಾನುಭವಿಗಳನ್ನು ಗುರುತಿಸುವುದು, ಈ ರೀತಿಯ ಹಣಕಾಸಿನ ಕಾರ್ಯಗಳಿಗೆ ಒತ್ತು ನೀಡಿರುವುದು ಕಂಡುಬಂದಿದಿಯೇ ವಿನಃ ದಲಿತರ ಮೇಲಿನ ದೌರ್ಜನ್ಯ ಪ್ರಕರಣ, ಮಹಿಳೆಯರು ಮತ್ತು ಮಕ್ಕಳ ಮೇಲಿನ ದೌರ್ಜನ್ಯ ಪ್ರಕರಣ, ದಲಿತರ ಬಹಿಷ್ಕಾರ, ಅಸ್ಪೃಶ್ಯತೆ ಈ ರೀತಿಯ ಅನೇಕ ಸಾಮಾಜಿಕ ಪಿಡುಗುಗಳ ಬಗ್ಗೆ ಚರ್ಚಿಸಿ ಅವುಗಳಿಗೆ ಪರಿಹಾರ ಕಂಡುಹಿಡಿಯುವಂತಹ ಚರ್ಚೆಗಳು ಅಥವಾ ನಡವಳಿಗಳನ್ನು ಮಾಡಿರುವುದು ಕಂಡುಬಂದಿಲ್ಲ. ಈ ಸಮಿತಿಯು ಸಹ ಹಣಕಾಸು ಮತ್ತು ಅನುಮೋದನೆಗಳಿಗೆ ಮಾತ್ರ ಗಮನ ಹರಿಸಿರುವುದು ಕಂಡುಬಂದಿದೆಯೇ ವಿನಃ ಈ ಸಮಿತಿಯ ಮೂಲ ಉದ್ದೇಶವಾದ ಸಾಮಾಜಿಕ ನ್ಯಾಯವನ್ನು ಕಾಪಾಡುವಂತಹ ಘಟನೆಗಳಿಗೆ ಗಮನ ಹರಿಸಿಲ್ಲದಿರುವುದು ಕಂಡುಬಂದಿದೆ.

ಜಿಲ್ಲಾ ಪಂಚಾಯತಿಯ ಸ್ಥಾಯಿಸಮಿತಿಗಳ ಸದಸ್ಯರ ಕಾರ್ಯನಿರ್ವಹಣೆಯನ್ನು ಗಮನಿಸಿದಾಗ ಸ್ಥಾಯಿಸಮಿತಿಗಳ ಅಧ್ಯಕ್ಷರ ಮತ್ತು ಸದಸ್ಯರ ಆಯ್ಕೆಯಲ್ಲಿ ಪ್ರತಿಭಾರಿಯು ಜಾತಿ ಜಾತಿಗಳ ಮಧ್ಯೆ ಪೈಪೋಟಿ, ಜಾತಿ ರಾಜಕೀಯ, ಅವಧಿಗೆ ಮುನ್ನ ಬದಲಾವಣೆ ಮಾಡಿರುವುದು ಕಂಡುಬಂದಿದೆ. ಚಿತ್ರದುರ್ಗ ಜಿಲ್ಲಾ ಪಂಚಾಯತಿಯ ಸದಸ್ಯರಲ್ಲಿ ಹೆಚ್ಚು ಪರಿಶಿಷ್ಟರು ಮತ್ತು ಹಿಂದುಳಿದ ವರ್ಗಗಳಿಗೆ ಸೇರಿದ್ದರಿಂದ ಇವರಲ್ಲಿ ಹೆಚ್ಚು ಪೈಪೋಟಿ ಕಂಡುಬಂದಿದೆ. ಇವರಿಬ್ಬರ ತಿಕ್ಕಾಟದಲ್ಲಿ ಕೆಲವು ಬಾರಿ ಮೇಲ್ವರ್ಗದವರು ಸ್ಥಾನ ಪಡೆಯುವಲ್ಲಿ ಯಶಸ್ವಿಯಾಗಿರುವುದು ಅಂಕಿ–ಅಂಶಗಳಿಂದ ಕಂಡುಬಂದಿದೆ. ಹಾಗಾಗಿ ಸ್ಥಾಯಿಸಮಿತಿಗಳ ಅಧ್ಯಕ್ಷರ ಮತ್ತು ಸದಸ್ಯರ ಆಯ್ಕೆಯಲ್ಲಿ ಅಧಿಕಾರ, ಅನುದಾನ ಇತರೆ ಅಂಶಗಳು ಹೆಚ್ಚು ಪರಿಣಾಮ ಬೀರಿರುವುದು ಅಧ್ಯಯನದಲ್ಲಿ ಕಂಡುಬಂದಿದೆ.

ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿಗಳು ಸಹ ಜಿಲ್ಲಾ ಪಂಚಾಯತಿಯ ಸ್ಥಾಯಿಸಮಿತಿಗಳಂತೆ ಅನುದಾನ ಮತ್ತು ಹಣಕಾಸಿನ ಆಧಾರದ ಮೇಲೆಯೇ ಕಾರ್ಯ ನಿರ್ವಹಿಸಿರುವುದು ಕಂಡುಬಂದಿದೆ. ಆದರೆ ಜಿಲ್ಲಾ ಪಂಚಾಯತಿಗಳ ಅನುದಾನಗಳು ಸಾಕಷ್ಟು ಇರುವುದರಿಂದ ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿಗಳು ಜಿಲ್ಲಾ ಪಂಚಾಯತಿಯ ಸ್ಥಾಯಿಸಮಿತಿಗಳಷ್ಟು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಿಲ್ಲ ಎಂಬುದು ಅಧ್ಯಯನದ ಸಂಧರ್ಭದಲ್ಲಿ ಸ್ಪಷ್ಟವಾಗಿ ಕಂಡುಬಂದಿದೆ.

ಇವೆಲ್ಲವುಗಳಿಗಿಂತಲೂ ಭಿನ್ನವಾಗಿ ನೋಡುವುದಾದರೆ ಗ್ರಾಮ ಪಂಚಾಯತಿ ಸ್ಥಾಯಿ ಸಮಿತಿಗಳು ದಾಖಲೆಗಳಲ್ಲಿ ಸಹ ಬಹುತೇಕವಾಗಿ ರಚಿತವಾಗಿಲ್ಲದಿರುವುದು ಕಂಡುಬಂದಿದೆ. ಆದರೆ ಇದಕ್ಕೆ ವಿರುದ್ಧವಾಗಿ ಇದೇ ಗ್ರಾಮ ಪಂಚಾಯತಿಗಳ ಉಪ ಸಮಿತಿಗಳಲ್ಲಿ ಎಸ್.ಡಿ.ಎಂ.ಸಿ ಯಂತಹ ಉಪ ಸಮಿತಿಗಳು ರಚಿತಗೊಳ್ಳುವುದರ ಜೊತೆಗೆ ಸಕ್ರಿಯವಾಗಿರುವುದು ಕಂಡು ಬಂದಿದೆ. ಇದಕ್ಕೆ ಕಾರಣ ಈ ಸಮಿತಿಯಲ್ಲಿನ ಹಣಕಾಸು ನಿರ್ವಹಣೆಯೇ ಕಾರಣವಾಗಿದೆ ಎನ್ನಬಹುದು. ಅಂದರೆ ಶಾಲೆಯ ಅಭಿವೃದ್ಧಿಗಾಗಿ ಬಂದ ಹಣವು ಶಾಲಾ ಮುಖ್ಯೋಪಾಧ್ಯಾಯರ ಖಾತೆಗೆ ಜಮಾಗೊಳ್ಳುತ್ತದೆ. ಆಗ ಅಂತಹ ಹಣವನ್ನು ಶಾಲಾ ಮುಖ್ಯೋಪಾಧ್ಯಾಯರು ಖರ್ಚು ಮಾಡಬೇಕಾದರೆ ಎಸ್.ಡಿ.ಎಂ.ಸಿ ಅಧ್ಯಕ್ಷ ಮತ್ತು ಸದಸ್ಯರ ಅನುಮತಿ ಪಡೆಯುವುದು ಅತ್ಯಗತ್ಯವಾಗಿದೆ.[41] ಆದ್ದರಿಂದ ಈ ಉಪ ಸಮಿತಿ ಜಾಗೃತವಾಗಿರಲು ಕಾರಣ ಹಣಕಾಸು ಮತ್ತು ಅನುದಾನ ಇವೇ ಮುಖ್ಯವಾಗಿರುವುದು ಕಂಡುಬಂದಿದೆ. ಇದೇ ರೀತಿಯಾಗಿ ಆಹಾರ ಖಾತರಿ ಸಮಿತಿ ಮತ್ತು ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಖಾತರಿ ಯೋಜನೆಗೆ ಸಂಬಂಧಿಸಿದಂತೆ ಜಾಗೃತಿ ಮತ್ತು ಉಸ್ತುವಾರಿ ಸಮಿತಿಯ (ವಿಜಿಯಲೆನ್ಸ್ ಕಮಿಟಿ) ಚಟುವಟಿಕೆಗಳ ಪರಿಸ್ಥಿತಿಯು ಸಹ ಇದೇ ರೀತಿಯಾಗಿದೆ. ಆದ್ದರಿಂದ ಈಗ ಸಕ್ರಿಯವಾಗಿರುವ ಎಲ್ಲಾ ಸ್ಥಾಯಿ ಸಮಿತಿಗಳು ಮತ್ತು ಉಪ ಸಮಿತಿಗಳು ಹಣದ ಹರಿಯುವಿಕೆ ಮತ್ತು ಅನುದಾನಗಳ ಪ್ರಮಾಣವನ್ನು ಆಧರಿಸಿ ಸಕ್ರಿಯವಾಗಿರುವುದು ಕಂಡುಬಂದಿದೆ.

ಪಂಚಾಯತ್‌ರಾಜ್ ವ್ಯವಸ್ಥೆಯು ಪ್ರಜಾಪ್ರಭುತ್ವದ ತತ್ವಗಳನ್ನು ಜನತೆಗೆ ತಲುಪಿಸುವ ಒಂದು ಪ್ರಮುಖ ಸಾಧನಗಳಾಗಿವೆ. ಇವುಗಳ ಪ್ರಮುಖ ಉದ್ದೇಶ ರಾಜಕೀಯ ವಿಕೇಂದ್ರೀಕರಣ, ಪಾರದರ್ಶಕತೆ, ಸಹಭಾಗಿತ್ವ ಮತ್ತು ಸಾಮಾಜಿಕ ನಿಯಂತ್ರಣ ಹೊಂದುವುದರ ಜೊತೆಗೆ ಉತ್ತಮ ರಾಜಕೀಯ ಜ್ಞಾನವನ್ನು ಪ್ರಜೆಗಳಿಗೆ ತಲುಪಿಸುವ ಉದ್ದೇಶವನ್ನು ಹೊಂದಿದೆ. ಭಾರತ ಸಂವಿಧಾನದ ನಾಲ್ಕನೇ ಭಾಗದಲ್ಲಿನ 36 ರಿಂದ 51ನೇ ವಿಧಿಗಳಲ್ಲಿ ಒಳಗೊಂಡಿರುವ ರಾಜನೀತಿ ನಿರ್ದೇಶಕ ತತ್ವಗಳಲ್ಲಿನ 40ನೇ ವಿಧಿಯು ರಾಷ್ಟ್ರಪಿತ ಮಹಾತ್ಮಗಾಂಧಿಯವರ ಗ್ರಾಮ ಸ್ವರಾಜ್ಯದ ಕಲ್ಪನೆಯ ಆಶೋತ್ತರಗಳಿಗೆ ಅನುಗುಣವಾಗಿ ಕೇಂದ್ರ ಸರ್ಕಾರದ 73 ನೇ ತಿದ್ದುಪಡಿಯ ಆಶಯದಂತೆ 1993 ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆಯಲ್ಲಿ ಜಿಲ್ಲಾ ಪಂಚಾಯತಿ, ತಾಲ್ಲೂಕು ಪಂಚಾಯತಿ ಮತ್ತು ಗ್ರಾಮ ಪಂಚಾಯತಿ ಸ್ಥಾಯಿಸಮಿತಿಗಳ ರಚನೆಗೆ ಅವಕಾಶ ಕಲ್ಪಿಸುವುದರ ಮೂಲಕ ಮೇಲಿನ ಆಶೋತ್ತರಗಳನ್ನು ಈಡೇರಿಸುವುದಕ್ಕಾಗಿ ಸಾಂವಿಧಾನಿಕ ಸಂಸ್ಥೆಗಳಾಗಿ ರೂಪುಗೊಂಡವು. ಆದರೆ ಈ ಸ್ಥಾಯಿಸಮಿತಿಗಳ ಕುರಿತು ಈ ಸಂಶೋಧನಾ ಪ್ರಬಂಧದಲ್ಲಿ ಅಧ್ಯಯನ ಕೈಗೊಂಡಾಗ ಈ ನಮ್ಮ ಸಂಶೋಧನೆಯ ಪರಿಕಲ್ಪನೆಯಂತೆ ತೌಲನಿಕವಾಗಿ ಅಂಕಿಅಂಶಗಳನ್ನು ನೋಡಿದಾಗ ಜಿಲ್ಲಾ ಪಂಚಾಯತಿ ಮತ್ತು ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿಗಳು ನಿರೀಕ್ಷಿತ ಮಟ್ಟದಲ್ಲಿ

ಕಾರ್ಯನಿರ್ವಹಿಸದೇ ಇದ್ದರೂ ಸಹ ಗ್ರಾಮ ಪಂಚಾಯತಿಗಳ ಸ್ಥಾಯಿಸಮಿತಿಗಳಿಗಿಂತ ಉತ್ತಮ ಮಟ್ಟದಲ್ಲಿ ಕಾರ್ಯನಿರ್ವಹಿಸಿರುವುದು ಈ ಅಧ್ಯಯನದಲ್ಲಿ ಕಂಡು ಬಂದಿದೆ. ಇದಕ್ಕೆ ಕಾರಣಗಳು ಈ ರೀತಿಯಲ್ಲಿ ಕಂಡು ಬಂದಿವೆ. ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ ಪ್ರಕರಣ 61, 61ಎ, 148 ಮತ್ತು 186ರಲ್ಲಿ ಜಿಲ್ಲಾ ಪಂಚಾಯತಿ ಮತ್ತು ತಾಲ್ಲೂಕು ಪಂಚಾಯತಿಗಳಲ್ಲಿ ಸ್ಥಾಯಿಸಮಿತಿಗಳ ರಚನೆಗೆ ಅವಕಾಶ ಕಲ್ಪಿಸಿರುವುದರ ಜೊತೆಯಲ್ಲಿ ಈ ಸಮಿತಿಗಳು ಕೆಲವೊಂದು ನಿರ್ಣಯಗಳನ್ನು ತೆಗೆದುಕೊಂಡು ಕಾರ್ಯನಿರ್ವಹಿಸಲು ಅವಕಾಶ ನೀಡಿದ್ದರೂ ಸಹಾ ಇದೇ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 270ರ ಪ್ರಕರಣವು ಮತ್ತೊಂದು ಕಡೆಯಿಂದ ಸ್ಥಾಯಿಸಮಿತಿಗಳ ಕಾರ್ಯಗಳ ಮೇಲೆ ನಿರ್ಬಂಧ ಹೇರಿರುವುದು ಕಂಡುಬಂದಿದೆ. ಅಂದರೆ ಈ 270ರ ಪ್ರಕರಣದ ಅನ್ವಯ ಸ್ಥಾಯಿ ಸಮಿತಿಗಳು ತೆಗೆದುಕೊಂಡ ನಿರ್ಣಯಗಳನ್ನು ಜಿಲ್ಲಾ ಪಂಚಾಯತಿ ಮತ್ತು ತಾಲ್ಲೂಕು ಪಂಚಾಯತಿಗಳ ಸಾಮಾನ್ಯ ಸಭೆಗಳಲ್ಲಿ ಸ್ಥಾಯಿಸಮಿತಿಗಳ ತೀರ್ಮಾನಗಳನ್ನು ಪರಿಗಣಿಸಬಹುದು ಅಥವಾ ತಿರಸ್ಕರಿಸಬಹುದಾಗಿರುವುದರಿಂದ ಈ 270ನೇ ಪ್ರಕರಣಗಳನ್ನು ಆಧಾರವಾಗಿಟ್ಟುಕೊಂಡು ಬಹುತೇಕ ಸ್ಥಾಯಿಸಮಿತಿಗಳ ನಿರ್ಣಯಗಳನ್ನು ಪರಿಗಣಿಸದೇ ಇರುವುದು ತೌಲನಿಕ ಅಧ್ಯಯನದಲ್ಲಿ ಕಂಡುಬಂದಿರುವುದರಿಂದ ಈ ಪಂಚಾಯತ್ ರಾಜ್ ಕಾಯ್ದೆಯಲ್ಲಿಯೇ ಸ್ಥಾಯಿಸಮಿತಿಗಳನ್ನು ದುರ್ಬಲಗೊಳಿಸುವ ಅಂಶಗಳು ಕಂಡುಬಂದಿದೆ. ಗ್ರಾಮ ಪಂಚಾಯತಿ ಮಟ್ಟದಲ್ಲಿ ಕ್ಷೇತ್ರ ಕಾರ್ಯವನ್ನು ಕೈಗೊಂಡ ಸಂದರ್ಭದಲ್ಲಿ ಕಂಡುಬಂದಂತಹ ಮಹತ್ತರ ಅಂಶವೆಂದರೆ ಬಹುತೇಕ ಗ್ರಾಮ ಪಂಚಾಯತಿಗಳಲ್ಲಿ ಸ್ಥಾಯಿ ಸಮಿತಿಗಳ ರಚನೆಯಾಗಿಲ್ಲದೆ ಇರುವುದು ಕಂಡು ಬಂದಿವೆ. ಇದಕ್ಕೆ ಸಂಬಂಧಿಸಿದಂತೆ ಕಾರಣಗಳನ್ನು ನೋಡುತ್ತಾ ಹೋದಲ್ಲಿ ಸಮಿತಿಗಳ ರಚನೆ ಅಧಿಕಾರ ಮತ್ತು ಕಾರ್ಯಗಳ ಬಗ್ಗೆ ಹಾಗೂ ಸ್ಥಾಯಿಸಮಿತಿಗಳು ಮತ್ತು ಗ್ರಾಮ ಪಂಚಾಯತಿಗಳ ನಡುವೆ ಇರುವ ಸಂಬಂಧದ ಬಗ್ಗೆ ಗ್ರಾಮ ಪಂಚಾಯತಿ ಸದಸ್ಯರಲ್ಲಿ ಸೂಕ್ತ ಅರಿವಿನ ಕೊರತೆ ಇರುವುದು ಕಂಡು ಬಂದಿದೆ. ಗ್ರಾಮ ಪಂಚಾಯತಿ ಸ್ಥಾಯಿಸಮಿತಿಗಳು ರಚನೆಯಾಗದೆ ಇರುವುದಕ್ಕೆ ಕಾರಣಗಳನ್ನು ಹುಡುಕುತ್ತಾ ಹೋದಲ್ಲಿ ಗ್ರಾಮ ಪಂಚಾಯತಿಯಲ್ಲಿನ ಅಭಿವೃದ್ಧಿ ಅಧಿಕಾರಿಗಳು ಮತ್ತು ಕಾರ್ಯದರ್ಶಿಗಳ ನೇತೃತ್ವದಲ್ಲಿ ಸಮಿತಿಗಳ ರಚನೆಗೆ ಚಾಲನೆ ನೀಡಬೇಕಾಗಿದೆ. ಆದರೆ ಈ ನೌಕರಶಾಹಿ ವರ್ಗದವರ ನಿರ್ಲಕ್ಷ್ಯ ಮತ್ತು ಬೇಜವಾಬ್ದಾರಿತನದಿಂದ ಈ ಸಮಿತಿಗಳು ರಚಿಸಲ್ಪಟ್ಟಿಲ್ಲದೆ ಇರುವುದು ಕಂಡುಬಂದಿದೆ. ಗ್ರಾಮ ಪಂಚಾಯತಿ, ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಗಳಲ್ಲಿನ ಸ್ಥಾಯಿಸಮಿತಿಗಳ ಅಧಿಕಾರ ಮತ್ತು ಕಾರ್ಯಗಳನ್ನು ಗಮನಿಸುತ್ತ ಹೋದಲ್ಲಿ ಗ್ರಾಮ ಪಂಚಾಯತಿ ಸ್ಥಾಯಿಸಮಿತಿಗಳಲ್ಲಿ ಒಂದಾದ ಸಾಮಾಜಿಕ ನ್ಯಾಯಸಮಿತಿ ಕಾರ್ಯಗಳಲ್ಲಿ ಸಾಮಾಜಿಕ ಅನ್ಯಾಯ ಮತ್ತು ದಲಿತ ಮತ್ತು ಹಿಂದುಳಿದ ವರ್ಗಗಳಿಗೆ ರಕ್ಷಣೆ ನೀಡುವ ಮಹತ್ತರವಾದ ಜವಬ್ದಾರಿಯನ್ನು ಈ ಸಮಿತಿ ಹೊಂದಿದೆ. ಅಂದರೆ ಹಳ್ಳಿಗಳಲ್ಲಿ ದಲಿತರ ಮೇಲಿನ ದೌರ್ಜನ್ಯ ಪ್ರಕರಣಗಳು, ಹೆಣ್ಣು ಮಕ್ಕಳ ಶೋಷಣೆ ಮುಂತಾದ ಘಟನೆಗಳು

ಹಳ್ಳಿಗಳಲ್ಲಿ ಜರುಗಿದಾಗ ಅಂತಹ ಪ್ರಕರರಣಗಳನ್ನು ಮೊದಲು ಗ್ರಾಮ ಪಂಚಾಯತಿಯ ಸಾಮಾಜಿಕ ನ್ಯಾಯಸಮಿತಿಯ ಮುಂದೆ ತರಬೇಕು. ಆ ಮುಖಾಂತರ ಸಾಮಾಜಿಕ ನ್ಯಾಯ ಸಮಿತಿಯು ಮಹಿಳೆಯರು, ಮಕ್ಕಳು, ದಲಿತರು ಮತ್ತು ಹಿಂದುಳಿದ ವರ್ಗಗಳ ಹಿತರಕ್ಷಣೆ ಮಾಡುವ ಕಾರ್ಯಗಳನ್ನು ಮಾಡಬೇಕು. ಆ ಮುಖಾಂತರ ಸಾಮಾಜಿಕ ನ್ಯಾಯವನ್ನು ಸ್ಥಾಪಿಸುವಂತಹ ಕಾರ್ಯವನ್ನು ಈ ಸಾಮಾಜಿಕ ನ್ಯಾಯಸಮಿತಿ ನಿರ್ವಹಿಸಿಲ್ಲ. ಜಿಲ್ಲಾ ಪಂಚಾಯತಿ ಮತ್ತು ತಾಲ್ಲೂಕು ಪಂಚಾಯತಿಗಳ ಸ್ಥಾಯಿಸಮಿತಿಗಳ ರಾಜಕೀಯ ಶಿಕ್ಷಣ ಮಟ್ಟವನ್ನು ಗಮನಿಸಿದಾಗ ಗ್ರಾಮ ಪಂಚಾಯತಿ ಸದಸ್ಯರಲ್ಲಿನ ರಾಜಕೀಯ ಶಿಕ್ಷಣ ಮಟ್ಟ ತುಂಬಾ ಕಡಿಮೆ ಇರುವುದು ಕಂಡು ಬಂದಿದೆ. ಗ್ರಾಮ ಪಂಚಾಯತಿಗಳ ಸ್ಥಾಯಿಸಮಿತಿಗಳು ಸಕ್ರಿಯವಾಗಿಲ್ಲದೆ ಇರುವುದಕ್ಕೆ ಕಾರಣಗಳನ್ನು ಹುಡುಕುತ್ತಾ ಹೋದಲ್ಲಿ ಕಂಡು ಬರುವ ಮತ್ತೊಂದು ಪ್ರಮುಖ ಕಾರಣವೆಂದರೆ ಈ ಗ್ರಾಮ ಪಂಚಾಯತಿ ಸ್ಥಾಯಿಸಮಿತಿಗಳಲ್ಲಿ ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಗಳ ಸ್ಥಾಯಿಸಮಿತಿಗಳಿಗಿರುವಂತೆ ಹಣಕಾಸಿನ ಅಧಿಕಾರಗಳು ಇಲ್ಲದೇ ಇರುವುದು. ಮೂರು ಹಂತದ ಸ್ಥಾಯಿ ಸಮಿತಿಗಳ ರಚನೆ, ಕಾರ್ಯಕ್ಷಮತೆ ಮತ್ತು ಸಾಧನೆ ಕುರಿತಂತೆ ವಿಶ್ಲೇಷಿದಾಗ ಗ್ರಾಮ ಪಂಚಾಯತಿ ವ್ಯವಸ್ಥೆಯಲ್ಲಿ ಸ್ಥಾಯಿಸಮಿತಿಗಳ ಕಾರ್ಯವಾಹಿ ನೈಜವಾಗಿದ್ದು ಹೆಸರಿಗೆ ಮಾತ್ರ ಅಸ್ತಿತ್ವದಲ್ಲಿರುವಂತೆ ದಾಖಲೆಗಳು ತೋರಿಸುತ್ತವೆ. ಇವು ನಿಯಮಾವಳಿಗಳ ಈಡೇರಿಕೆಗೆ ಬೇಕಾದ ಅಧಿಕಾರಿಗಳ ಕಸರತ್ತು ಎಂಬುದನ್ನು ಬೇರೆ ಹೇಳಬೇಕಿಲ್ಲ. ಗ್ರಾಮ ಪಂಚಾಯತಿಗಳು ರಚನೆಗೊಂಡಾಕ್ಷಣ ಸಾಮನ್ಯಸಭೆಯಲ್ಲಿ ಸ್ಥಾಯಿ ಸಮಿತಿಗಳ ರಚನೆ, ಅಧಿಕಾರ, ಪ್ರಕಾರ್ಯಗಳು ಕಾರ್ಯನಿರ್ವಹಣೆ, ಸಾಧನೆ ಮುಂತಾದವುಗಳ ಕುರಿತು ಅಧಿಕಾರಿವರ್ಗದವರು ನಿಯಮಾನುಸಾರ ಮಾಹಿತಿ ನೀಡಬೇಕಿರವುದು ಆಪೇಕ್ಷಣೀಯ, ಆದರೆ ಇವುಗಳು ಯಾವುವು ವಾಸ್ತವವಾಗಿ ಜಾರಿಗೆ ಬರುವುದಿಲ್ಲ. ಈ ಕುರಿತಂತೆ ಸಾಮಾನ್ಯವಾಗಿ ಜನಸಾಮನ್ಯರಿಗಲ್ಲದೆ ಗ್ರಾಮ ಪಂಚಾಯತಿ ಸದಸ್ಯರಿಗೆ ಈ ಕುರಿತ ಜ್ಞಾನ, ಮಾಹಿತಿ ತಿಳಿದಿಲ್ಲದಿರುವುದು ಕಂಡುಬರುತ್ತದೆ. ಇದು ಏನನ್ನು ಸೂಚಿಸುತ್ತದೆ ಎಂದರೆ ಸ್ಥಾಯಿಸಮಿತಿಗಳು ಕೇವಲ ದಾಖಲೆಗಳಲ್ಲಿ ಮಾತ್ರ ಇವೆ ಎಂಬುದು ಗೊತ್ತಾಗುತ್ತದೆ. ಗ್ರಾಮ ಪಂಚಾಯತಿ ಅಧ್ಯಕ್ಷರು ಮತ್ತು ಅಧಿಕಾರಿ ವರ್ಗ ಇವನ್ನು ಯಾವ ಕಾರಣಕ್ಕೆ ಮಾಹಿತಿ ನೀಡದೆ ಮತ್ತು ಕಾರ್ಯರೂಪಕ್ಕೆ ಬರದಂತೆ ನೋಡಿಕೊಳ್ಳುತ್ತಾರೆ ಎಂಬುದರ ಬಗೆಗೆ ಇನ್ನಷ್ಟು ಮಾಹಿತಿ ಕಲೆಹಾಕಬೇಕಿದೆ. ಹಾಗಾಗಿ ಗ್ರಾಮ ಪಂಚಾಯತಿಗಳ ಸ್ಥಾಯಿಸಮಿತಿಗಳು ನಿರೀಕ್ಷಿತ ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿಲ್ಲ ಎಂಬುದು ಅಧ್ಯಯನದಿಂದ ತಿಳಿದುಬಂದಿದೆ. ಗ್ರಾಮ ಪಂಚಾಯತಿಗಳ ಸ್ಥಾಯಿಸಮಿತಿಗಳ ರಚನೆ ಕೇವಲ ಔಪಚಾರಿಕ ಮತ್ತು ದಾಖಲೆಗಳಲ್ಲಿ ಮಾತ್ರ ಇದೆ. ಜಿಲ್ಲಾ ಪಂಚಾಯತ್ ಮತ್ತು ತಾಲೂಕು ಪಂಚಾಯತ್‌ಗಳ ಸ್ಥಾಯಿಸಮಿತಿಗಳು ನಿರೀಕ್ಷಿತ ಮಟ್ಟದಲ್ಲಿ ಕಾರ್ಯನಿರ್ವಹಿಸದೆ ಇದ್ದರು ಸಹ ಗ್ರಾಮ ಪಂಚಾಯತಿಗಳ ಸ್ಥಾಯಿಸಮಿತಿಗಳಿಗಿಂತ ಉತ್ತಮ ಮಟ್ಟದಲ್ಲಿ ಕಾರ್ಯನಿರ್ವವಹಿಸಿವೆ. ಇದಕ್ಕೆ ಮೂಲ ಕಾರಣ

ಗ್ರಾಮ ಪಂಚಾಯತಿಗಳ ಸ್ಥಾಯಿಸಮಿತಿಗಳಿಗಿಂತ ಹೆಚ್ಚು ಅಧಿಕಾರ ಮತ್ತು ಹಣಕಾಸಿನ ಅಧಿಕಾರಗಳನ್ನು ಕೊಡಲಾಗಿದೆ. ಪಂಚಾಯತ್‌ರಾಜ್ ಪ್ರತಿನಿಧಿಗಳಿಗೆ, ಅಧಿಕಾರಿಗಳಿಗೆ ಮತ್ತು ಜನತೆಗೆ ಸ್ಥಾಯಿಸಮಿತಿಗಳ ಮಹತ್ವದ ತಿಳಿವಳಿಕೆ ಇಲ್ಲದೆ ಇರುವುದು. ಗ್ರಾಮ ಪಂಚಾಯತಿ ವ್ಯವಸ್ಥೆಯ ಸ್ಥಾಯಿಸಮಿತಿಗಳಿಗಿಂತ ತಾಲ್ಲೂಕು ಮಟ್ಟದ ಮತ್ತು ಜಿಲ್ಲಾ ಮಟ್ಟದ ಸ್ಥಾಯಿಸಮಿತಿಗಳು ಪರಿಣಾಮಕಾರಿಯಾಗಿ ಸಾಮಾನ್ಯ ಸಭೆಗಳಲ್ಲಿ ಚರ್ಚಿಸಿ ಐದು ವರ್ಷದ ಅವಧಿಯಲ್ಲಿ ಸಾಕಷ್ಟು ಕಾಮಗಾರಿಗಳನ್ನು ನಿರ್ಣಯಿಸಿ ಅನುಷ್ಠಾನಗೊಳಿಸಿರುವುದು ಅಧ್ಯಯನದಿಂದ ಕಂಡುಬಂದಿದೆ. ಗ್ರಾಮ ಪಂಚಾಯತಿಯ ಸ್ಥಾಯಿಸಮಿತಿಗಳು ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿಲ್ಲ ಇದಕ್ಕೆ ಮೂಲ ಕಾರಣ ಯಾವುದೇ ಹಣಕಾಸಿನ ಅಧಿಕಾರಗಳು ಮತ್ತು ಇನ್ನಿತರ ಅಧಿಕಾರಗಳನ್ನು ನೀಡದೇ ಇರುವುದು. ಜನಪ್ರತಿನಿಧಿಗಳಲ್ಲಿ ಸ್ಥಾಯಿಸಮಿತಿಗಳ ಬಗ್ಗೆ ಹೆಚ್ಚು ಜಾಗೃತಿ ಮತ್ತು ತಿಳಿವಳಿಕೆ ಇಲ್ಲದೆ ಇರುವುದು. ಸ್ಥಾಯಿಸಮಿತಿಗಳು ಮೂಲರಚನೆಯ ಅಧಿಕಾರ, ಉದ್ದೇಶ ಮತ್ತು ಕಾರ್ಯಗಳ ಕುರಿತಂತೆ ಸೂಕ್ತ ಅರಿವಿನ ಕೊರತೆ ಇರುವುದು ಕಂಡುಬಂದಿದೆ. ಆಹಾರ ಜಾಗೃತಿ ಸಮಿತಿ ಮತ್ತು ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಸಂಬಂಧಪಟ್ಟಂತೆ "ಜಾಗೃತಿ ಮತ್ತು ಉಸ್ತುವಾರಿ ಸಮಿತಿಗಳ" ಪಾತ್ರ ಸಕ್ರಿಯವಾಗಿವೆ. ಇದಕ್ಕೆ ಕಾರಣ ಈ ಸಮಿತಿಯನ್ನು ಗ್ರಾಮಸಭೆಯಲ್ಲಿ ಕಡ್ಡಾಯವಾಗಿ ರಚಿಸಬೇಕು. ಮತ್ತು ಈ ಸಮಿತಿಯಲ್ಲಿ 9 ಜನ ಸದಸ್ಯರಿದ್ದು 50%ರಷ್ಟು ಸದಸ್ಯರು ಯೋಜನೆಯಡಿ ತೊಡಗಿಸಿಕೊಂಡು ಒಂದು ವರ್ಷದ ಅವಧಿಗೆ ರಚಿತವಾಗಿರುವ ಸಮಿತಿಯಾಗಿದ್ದು, ಇದು ಉದ್ಯೋಗ ಖಾತರಿ ಯೋಜನೆಯ ಸಮಗ್ರ ಲೋಪದೋಷಗಳನ್ನು ಪತ್ತೆ ಹಚ್ಚುವ ಕಾರ್ಯಕ್ರಮಗಳನ್ನು ಕೈಗೊಂಡಿರುವುದರಿಂದ ಪ್ರಸ್ತುತ ದಿನಗಳಲ್ಲಿ ಈ ಸಮಿತಿಗಳ ಕಾರ್ಯ ತಳಮಟ್ಟದಲ್ಲಿ ಹೆಚ್ಚು ಉಪಯುಕ್ತವಾಗಿದೆ. ಈ ಸಮಿತಿಗಳು ಉದ್ಯೋಗ ಖಾತ್ರಿ ಯೋಜನೆಯಡಿ ಕಾರ್ಮಿಕರು ಕೆಲಸ ನಿರ್ವಹಿಸುವಾಗ 40% ರಷ್ಟು ಯಂತ್ರೋಪಕರಣಗಳು 60%ರಷ್ಟು ಮಾನವ ಸಂಪನ್ಮೂಲಗಳು ಕಾಯನಿರ್ವಹಿಸಬೇಕು ಆದರೆ ಕೆಲವು ಕಡೆ 100%ರಷ್ಟು ಯಂತ್ರೋಪಕರಣಗಳನ್ನೇ ಬಳಸಿ ಕೆಲಸ ಮಾಡಿರುವುದನ್ನು ಪತ್ತೆ ಹಚ್ಚಲಾಗಿದೆ. ಅದೇ ರೀತಿ ಕಾಮಗಾರಿ ಸ್ಥಳದಲ್ಲೇ ಮೂಲಭೂತ ಸೌಲಭ್ಯಗಳನ್ನು ಸರಿಯಾಗಿ ಒದಗಿಸಿದೆಯೇ ಇಲ್ಲವೇ ಎಂಬುದನ್ನು ಪರೀಶಿಲಿಸಿದೆ. ಆ ಮೂಲಕ ಗ್ರಾಮ ಪಂಚಾಯತಿಗಳ ಸ್ಥಾಯಿ ಸಮಿತಿಗಳಿಗಿಂತ ಗ್ರಾಮ ಪಂಚಾಯತಿಗಳ ಉಪ ಸಮಿತಿಗಳು ಬಹುಮಟ್ಟಿಗೆ ಕಾರ್ಯನಿರ್ವಹಿ ಸುತ್ತಿರುವುದು ಕಂಡುಬಂದಿದೆ. ಆದರೆ ತಾಲ್ಲೂಕು ಪಂಚಾಯತಿಯ ಸ್ಥಾಯಿಸಮಿತಿಗಳು ನಿರೀಕ್ಷಿತ ಮಟ್ಟದಲ್ಲಿ ಕಾರ್ಯ ನಿರ್ವಹಿಸದಿದ್ದರೂ ಸಹ ಎಲ್ಲಾ ಮೂರು ತಾಲ್ಲೂಕು ಪಂಚಾಯತಿಗಳಲ್ಲಿ ರಚಿತವಾಗಿರುವುದರೊಂದಿಗೆ ಕೆಲವೊಂದು ವಿಷಯಗಳಿಗೆ ಸಂಬಂಧಪಟ್ಟಂತೆ ನಡವಳಿಗಳನ್ನು ಮಾಡಿರುವುದು ಮತ್ತು ಕೆಲವೊಂದು ಅನುದಾನಗಳನ್ನು ಬಿಡುಗಡೆ ಮಾಡಿರುವುದು ಕ್ಷೇತ್ರಾಧ್ಯಯನದಲ್ಲಿ ಕಂಡುಬಂದಿದೆ. ಇನ್ನು ಜಿಲ್ಲಾ ಪಂಚಾಯತಿಯ ಐದು ಸ್ಥಾಯಿಸಮಿತಿಗಳು ಸಕ್ರಿಯವಾಗಿದ್ದು

ಇವುಗಳ ಸಕ್ರಿಯತೆಗೆ ಕಾರಣ ಜಿಲ್ಲಾ ಪಂಚಾಯತ್ ಸದಸ್ಯರಲ್ಲಿನ ಶಿಕ್ಷಣ, ರಾಜಕೀಯ ಅರಿವು, ಅನುದಾನ ಇವುಗಳ ಮೂಲಕ ಇಂದಿಗೂ ಸಹ ಜಿಲ್ಲಾ ಪಂಚಾಯತ್ ಸ್ಥಾಯಿ ಸಮಿತಿಗಳು ಜಿಲ್ಲಾ ಪಂಚಾಯತಿಯ ಸಾಮಾನ್ಯಸಭೆಗೆ ಪೂರಕವಾದಂತೆ ಕಾರ್ಯನಿರ್ವಹಿಸುತ್ತಿರುವುದು ಈ ತೌಲಾನಿಕ ಅಧ್ಯಯನದಿಂದ ಕಂಡುಬಂದಿದೆ.

**ಕೊನೆ ಟಿಪ್ಪಣಿಗಳು**

1. **ಪ್ರಾಥಮಿಕ ಅಂಕಿಅಂಶಗಳು ಹಾಗೂ ಬಬ್ಬೂರು ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಬಬ್ಬೂರು, 2010–11.
2. **ಪ್ರಾಥಮಿಕ ಅಂಕಿಅಂಶಗಳು ಹಾಗೂ ಗೌಡನಹಳ್ಳಿ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಗೌಡನಹಳ್ಳಿ, 2010–11.
3. **ಪ್ರಾಥಮಿಕ ಅಂಕಿಅಂಶಗಳು, ಹಾನಗಲ್ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಹಾನಗಲ್, 2010–11.
4. **ಪ್ರಾಥಮಿಕ ಅಂಕಿಅಂಶಗಳು ರಾಯಪುರ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ರಾಯಪುರ, 2010–11.
5. **ಪ್ರಾಥಮಿಕ ಅಂಕಿಅಂಶಗಳು, ಮದಕರಿಪುರ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಮದಕರಿಪುರ, 2010–11.
6. **ಪ್ರಾಥಮಿಕ ಅಂಕಿಅಂಶಗಳು, ಮಠದ ಕುರುಬರಹಟ್ಟಿ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮಪಂಚಾಯತಿ ಕಾರ್ಯಾಲಯ, ಮಠದಕುರುಬರ ಹಟ್ಟಿ, 2010–11.
7. **ತಾಲ್ಲೂಕು ಪಂಚಾಯತಿಗಳ ದಾಖಲೆಗಳು,** ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಚಿತ್ರದುರ್ಗ, 2010–11.
8. **ತಾಲ್ಲೂಕು ಪಂಚಾಯತಿಗಳ ದಾಖಲೆಗಳು,** ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಹಿರಿಯೂರು, 2010–11.
9. **ತಾಲ್ಲೂಕು ಪಂಚಾಯತಿಗಳ ದಾಖಲೆಗಳು,** ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಮೊಳಕಾಲ್ಮೂರು, 2010–11.
10. **ಜಿಲ್ಲಾ ಪಂಚಾಯತಿಗಳ ದಾಖಲೆಗಳು,** ಜಿಲ್ಲಾ ಪಂಚಾಯತಿ ಕಾರ್ಯಾಲಯ, ಚಿತ್ರದುರ್ಗ, 2010–11.
11. **ಪ್ರಾಥಮಿಕ ಅಂಕಿಅಂಶಗಳು ಹಾಗೂ ಬಬ್ಬೂರು ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಬಬ್ಬೂರು, 2010–11.
12. **ಪ್ರಾಥಮಿಕ ಅಂಕಿಅಂಶಗಳು ಹಾಗೂ ಗೌಡನಹಳ್ಳಿ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಗೌಡನಹಳ್ಳಿ, 2010–11.

13. **ಪ್ರಾಥಮಿಕ ಅಂಕಿಅಂಶಗಳು, ಹಾನಗಲ್ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಹಾನಗಲ್, 2010–11.

14. **ಪ್ರಾಥಮಿಕ ಅಂಕಿಅಂಶಗಳು ರಾಯಪುರ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ರಾಯಪುರ, 2010–11.

15. **ಪ್ರಾಥಮಿಕ ಅಂಕಿಅಂಶಗಳು, ಮದಕರಿಪುರ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಮದಕರಿಪುರ, 2010–11.

16. **ಪ್ರಾಥಮಿಕ ಅಂಕಿಅಂಶಗಳು, ಮಠದಕುರುಬರ ಹಟ್ಟಿ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಮಠದಕುರುಬರ ಹಟ್ಟಿ, 2010–11.

17. **ತಾಲ್ಲೂಕು ಪಂಚಾಯತಿಗಳ ದಾಖಲೆಗಳು,** ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಚಿತ್ರದುರ್ಗ, 2010–11.

18. **ತಾಲ್ಲೂಕು ಪಂಚಾಯತಿಗಳ ದಾಖಲೆಗಳು,** ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಹಿರಿಯೂರು, 2010–11.

19. **ತಾಲ್ಲೂಕು ಪಂಚಾಯತಿಗಳ ದಾಖಲೆಗಳು,** ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಮೊಳಕಾಲ್ಮೂರು, 2010–11.

20. **ಜಿಲ್ಲಾ ಪಂಚಾಯತಿಗಳ ದಾಖಲೆಗಳು,** ಜಿಲ್ಲಾ ಪಂಚಾಯತಿ ಕಾರ್ಯಾಲಯ, ಚಿತ್ರದುರ್ಗ, 2010–11.

21. **ಪ್ರಾಥಮಿಕ ಅಂಕಿಅಂಶಗಳು ಹಾಗೂ ಬಬ್ಬೂರು ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಬಬ್ಬೂರು, 2010–11.

22. **ಪ್ರಾಥಮಿಕ ಅಂಕಿಅಂಶಗಳು ಹಾಗೂ ಗೌಡನಹಳ್ಳಿ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಗೌಡನಹಳ್ಳಿ, 2010–11.

23. **ಪ್ರಾಥಮಿಕ ಅಂಕಿಅಂಶಗಳು, ಹಾನಗಲ್ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಹಾನಗಲ್, 2010–11.

24. **ಪ್ರಾಥಮಿಕ ಅಂಕಿಅಂಶಗಳು ರಾಯಪುರ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ರಾಯಪುರ, 2010–11.

25. **ಪ್ರಾಥಮಿಕ ಅಂಕಿಅಂಶಗಳು, ಮದಕರಿಪುರ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಮದಕರಿಪುರ, 2010–11.

26. **ಪ್ರಾಥಮಿಕ ಅಂಕಿಅಂಶಗಳು, ಮಠದ ಕುರುಬರಹಟ್ಟಿ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಮಠದ ಕುರುಬರಹಟ್ಟಿ, 2010–11.

27. **ತಾಲ್ಲೂಕು ಪಂಚಾಯತಿಗಳ ದಾಖಲೆಗಳು,** ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಚಿತ್ರದುರ್ಗ, 2010–11.

28. **ತಾಲ್ಲೂಕು ಪಂಚಾಯತಿಗಳ ದಾಖಲೆಗಳು,** ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಹಿರಿಯೂರು, 2010–11.

29. **ತಾಲ್ಲೂಕು ಪಂಚಾಯತಿಗಳ ದಾಖಲೆಗಳು,** ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಮೊಳಕಾಲ್ಮೂರು, 2010–11.

30. **ಜಿಲ್ಲಾ ಪಂಚಾಯತಿಗಳ ದಾಖಲೆಗಳು,** ಜಿಲ್ಲಾ ಪಂಚಾಯತಿ ಕಾರ್ಯಾಲಯ, ಚಿತ್ರದುರ್ಗ, 2010.

31. **ಪ್ರಾಥಮಿಕ ಅಂಕಿಅಂಶಗಳು ಹಾಗೂ ಬಬ್ಬೂರು ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಬಬ್ಬೂರು, 2010–11.

32. **ಪ್ರಾಥಮಿಕ ಅಂಕಿಅಂಶಗಳು ಹಾಗೂ ಗೌಡನಹಳ್ಳಿ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಗೌಡನಹಳ್ಳಿ, 2010–11.

33. **ಪ್ರಾಥಮಿಕ ಅಂಕಿಅಂಶಗಳು, ಹಾನಗಲ್ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಹಾನಗಲ್, 2010–11.

34. **ಪ್ರಾಥಮಿಕ ಅಂಕಿಅಂಶಗಳು ರಾಯಪುರ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ರಾಯಪುರ, 2010–11.

35. **ಪ್ರಾಥಮಿಕ ಅಂಕಿಅಂಶಗಳು, ಮದಕರಿಪುರ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಮದಕರಿಪುರ, 2010–11.

36. **ಪ್ರಾಥಮಿಕ ಅಂಕಿಅಂಶಗಳು, ಮಠದಕುರುಬರ ಹಟ್ಟಿ ಗ್ರಾಮ ಪಂಚಾಯತಿಗಳ ದಾಖಲೆಗಳು,** ಗ್ರಾಮ ಪಂಚಾಯತಿ ಕಾರ್ಯಾಲಯ, ಮಠದಕುರುಬರ ಹಟ್ಟಿ, 2010–11.

37. **ತಾಲ್ಲೂಕು ಪಂಚಾಯತಿಗಳ ದಾಖಲೆಗಳು,** ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಚಿತ್ರದುರ್ಗ, 2010–11.

38. **ತಾಲ್ಲೂಕು ಪಂಚಾಯತಿಗಳ ದಾಖಲೆಗಳು,** ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಹಿರಿಯೂರು, 2010–11.

39. **ತಾಲ್ಲೂಕು ಪಂಚಾಯತಿಗಳ ದಾಖಲೆಗಳು,** ತಾಲ್ಲೂಕು ಪಂಚಾಯತಿ ಕಾರ್ಯಾಲಯ, ಮೊಳಕಾಲ್ಮೂರು, 2010–11.

40. **ಜಿಲ್ಲಾ ಪಂಚಾಯತಿಗಳ ದಾಖಲೆಗಳು,** ಜಿಲ್ಲಾ ಪಂಚಾಯತಿ ಕಾರ್ಯಾಲಯ, ಚಿತ್ರದುರ್ಗ, 2010–11.

41. ಸರ್ವಶಿಕ್ಷಣ ಅಭಿಯಾನ–ಕರ್ನಾಟಕ ರಾಜ್ಯ ಯೋಜನಾ ನಿರ್ದೇಶಕರ ಕಛೇರಿ, ಸಂಗಮ (ಎಸ್.ಡಿ.ಎಂ.ಸಿ ಸದಸ್ಯರಿಗೆ ಮತ್ತು ಸಿ.ಎಸಿ.ಸದಸ್ಯರಿಗೆ ತರಬೇತಿ ಕೈಪಿಡಿ) ನೃಪತುಂಗ ರಸ್ತೆ, ಬೆಂಗಳೂರು, 2011.

**ಕೋಷ್ಟಕ 5.1**

**ಗ್ರಾಮಪಂಚಾಯಿತಿವಾರು ಸ್ಥಾಮಿ ಸಮಿತಿ ಸದಸ್ಯರ ಅನುಭವದ ವಿವರ**

| ಕ್ರ.ಸಂ. | ಗ್ರಾಮ ಪಂಚಾಯಿತಿ ಹೆಸರು | 1ಬಾರಿ | | | 2ಬಾರಿ | | | ಒಟ್ಟು |
|---|---|---|---|---|---|---|---|---|
| | | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು | |
| 01 | ಬಬ್ಬೂರು | 8<br>53.3 | 7<br>46.7 | 15<br>100 | – | – | – | 15<br>100 |
| 02 | ಗೌಡನಹಳ್ಳಿ | 8<br>53.3 | 7<br>46.7 | 15<br>100 | – | – | – | 15<br>100 |
| 03 | ಹಾನಗಲ್ | 10<br>62.5 | 6<br>37.5 | 16<br>100 | – | – | – | 16<br>100 |
| 04 | ರಾಯಪುರ | 9<br>56.3 | 6<br>37.5 | 15<br>93.8 | 1<br>6.3 | 0 | 1<br>6.3 | 16<br>100 |
| 05 | ಮದಕರಿಪುರ | 6<br>40.0 | 4<br>26.7 | 10<br>66.7 | 2<br>13.3 | 3<br>20.3 | 5<br>33.0 | 15<br>100 |
| 06 | ಎಂ.ಕೆ.ಹಟ್ಟಿ | 6<br>30.0 | 8<br>40.0 | 14<br>80.0 | 5<br>25.0 | 1<br>5.0 | 6<br>30.0 | 20<br>100 |
| 07 | ಚಿತ್ರದುರ್ಗ | 15<br>55.6 | 11<br>40.7 | 26<br>96.3 | 1<br>3.7 | 01<br>3.7 | 27 | |
| 08 | ಹಿರಿಯೂರು | 13<br>59.1 | 9<br>40.9 | 22<br>100 | – | – | 22 | |
| 08 | ಮೊಳಕಾಲ್ಮೂರು | 6<br>50.0 | 6<br>50.0 | 12<br>100 | – | – | 12 | |
| 09 | ಚಿತ್ರದುರ್ಗ | 14<br>41.2 | 12<br>35.3 | 26<br>76.5 | 8<br>24.5 | 0 | 8<br>24.5 | 34<br>100 |

**ಮೂಲ:** ಪ್ರಾಥಮಿಕ ಅಂಕಿಅಂಶಗಳ ಜಿಲ್ಲಾ, ತಾಲ್ಲೂಕು ಹಾಗೂ ಆಯಾ ಗ್ರಾಮ ಪಂಚಾಯತಿಗಳ ದಾಖಲೆಗಳು: 2010–11

## ಕೋಷ್ಟಕ 5.2

## ಗ್ರಾಮ, ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತಿವಾರು ಸ್ಥಾಯಿ ಸಮಿತಿ ಸದಸ್ಯರ ಆಯ್ಕೆಯ ವಿಧಾನದ ವಿವರ

| ಕ್ರ.ಸಂ. | ಗ್ರಾಮ ಪಂಚಾಯಿತಿ ಹೆಸರು | ಚುನಾವಣೆ | | | ಅವಿರೋಧ ಆಯ್ಕೆ | | | ಒಟ್ಟು |
|---|---|---|---|---|---|---|---|---|
| | | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು | |
| 01 | ಬಬ್ಬೂರು | 7<br>46.7 | 5<br>33.3 | 12<br>80.0 | 1<br>6.7 | 2<br>13.3 | 3<br>20.0 | 15<br>100 |
| 02 | ಗೌಡನಹಳ್ಳಿ | 4<br>26.7 | 3<br>20.0 | 7<br>46.7 | 4<br>26.7 | 4<br>26.7 | 8<br>53.3 | 15<br>100 |
| 03 | ಹಾನಗಲ್ | 9<br>56.3 | 5<br>18.8 | 14<br>75.0 | 1<br>6.3 | 1<br>18.8 | 2<br>25.0 | 16<br>100 |
| 04 | ರಾಯಪುರ | 9<br>56.3 | 3<br>18.8 | 12<br>75.0 | 1<br>6.3 | 3<br>18.8 | 4<br>25.0 | 16<br>100 |
| 05 | ಮದಕರಿಪುರ | 8<br>53.3 | 7<br>46.7 | 15<br>100 | – | – | – | 15<br>100 |
| 06 | ಎಂ.ಕೆ.ಹಟ್ಟಿ | 9<br>45.0 | 8<br>40.0 | 17<br>85.0 | 1<br>5.0 | 2<br>10.0 | 3<br>15.0 | 20<br>100 |
| 07 | ಚಿತ್ರದುರ್ಗ | 16<br>59.3 | 10<br>37.1 | 26<br>96.3 | 1<br>3.7 | 0 | 1<br>3.7 | 27<br>100 |
| 08 | ಹಿರಿಯೂರು | 13<br>59.1 | 9<br>40.9 | 22<br>100 | – | – | 22 | |
| 08 | ಮೊಳಕಾಲ್ಮೂರು | 6<br>50.0 | 6<br>50.0 | 12<br>100 | – | – | – | 12<br>100 |
| 09 | ಚಿತ್ರದುರ್ಗ | 22<br>64.7 | 12<br>35.3 | 34<br>100 | – | – | – | 34<br>100 |

**ಮೂಲ:** ಜಿಲ್ಲಾ, ತಾಲ್ಲೂಕು ಮತ್ತು ಗ್ರಾಮ ಪಂಚಾಯತಿಗಳ ದಾಖಲೆಗಳು:2010–11

## ಕೋಷ್ಟಕ–5.3

## ಗ್ರಾಮಪಂಚಾಯತಿ, ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತಿವಾರು ಸ್ಥಾಯಿ ಸಮಿತಿ ಸದಸ್ಯರ ಸ್ಥಾನಮಾನದ ವಿವರ

| ಕ್ರ.ಸಂ. | ಗ್ರಾಮ, ತಾಲ್ಲೂಕು ಜಿಲ್ಲಾಪಂಚಾಯಿತಿ | ಸಾಮಾಜಿಕ ಸುಧಾರಣೆ | | | | | | ಆರ್ಥಿಕ ಸುಧಾರಣೆ | | | | | | ರಾಜಕೀಯ ಸುಧಾರಣೆ | | | | | |
|---|---|---|---|---|---|---|---|---|---|---|---|---|---|---|---|---|---|---|---|
| | | ಹೌದು | | | ಇಲ್ಲ | | | ಹೌದು | | | ಇಲ್ಲ | | | ಹೌದು | | | ಇಲ್ಲ | | |
| | | ಪು | ಮ | ಒ | ಪು | ಮ | ಒ | ಪು | ಮ | ಒ | ಪು | ಮ | ಒ | ಪು | ಮ | ಒ | ಪು | ಮ | ಒ |
| 01 | ಬಬ್ಬೂರು | 6<br>40.0 | 6<br>40.0 | 12<br>80.0 | 2<br>13.33 | 1<br>6.66 | 3<br>20.0 | 6<br>40.0 | 6<br>40.0 | 12<br>80.0 | 2<br>13.33 | 1<br>6.66 | 3<br>20.0 | 3<br>20.0 | 1<br>6.66 | 4<br>26.66 | 5<br>33.33 | 6<br>40.0 | 11<br>73.33 |
| 02 | ಗೌಡನಹಳ್ಳಿ | 7<br>46.66 | 6<br>40.0 | 13<br>86.66 | 1<br>6.66 | 1<br>6.66 | 2<br>13.33 | 7<br>46.66 | 6<br>40.0 | 13<br>86.00 | 1<br>6.66 | 1<br>6.66 | 2<br>13.33 | 1<br>6.66 | 1<br>6066 | 2<br>13.33 | 7<br>46.66 | 6<br>40.0 | 13<br>86.66 |
| 03 | ಹಾನಗಲ್ | 8<br>50.0 | 5<br>31.25 | 13<br>81.25 | 2<br>12.5 | 1<br>6.25 | 3<br>18.75 | 8<br>50.0 | 5<br>31.25 | 13<br>81.25 | 2<br>12.5 | 1<br>6.25 | 3<br>18.75 | 1<br>6.25 | 2<br>12.5 | 3<br>18.75 | 9<br>56.25 | 4<br>25.0 | 13<br>81.25 |
| 04 | ರಾಯಪುರ | 9<br>56.25 | 6<br>37.5 | 15<br>93.75 | 1<br>6.25 | 0<br>– | 1<br>6.25 | 9<br>56.25 | 6<br>37.5 | 15<br>93.75 | 1<br>6.25 | 0<br>– | 1<br>6.25 | – | – | – | 10<br>62.5 | 6<br>37.5 | 16<br>100 |
| 05 | ಮದಕರಿಪುರ | 7<br>46.66 | 5<br>33.33 | 12<br>80.0 | 1<br>6.66 | 2<br>13.33 | 3<br>20.0 | 7<br>46.66 | 5<br>33.33 | 12<br>80.0 | 1<br>6.66 | 2<br>13.36 | 3<br>20.0 | – | – | – | 8<br>53.33 | 7<br>46.66 | 15<br>100 |
| 06 | ಎಂ.ಕೆ.ಹಟ್ಟಿ | 9<br>45.0 | 7<br>35.0 | 16<br>80.0 | 2<br>10.0 | 2<br>10.0 | 4<br>20.0 | 9<br>45.0 | 7<br>35.0 | 16<br>80.0 | 2<br>10.0 | 2<br>10.0 | 4<br>20.0 | 3<br>15.0 | 2<br>10.0 | 5<br>25.0 | 8<br>40.0 | 7<br>35.0 | 15<br>75.0 |
| 07 | ಚಿತ್ರದುರ್ಗ | 11<br>40.74 | 7<br>25.92 | 18<br>66.66 | 5<br>18.51 | 4<br>14.81 | 9<br>33.33 | 11<br>40.74 | 7<br>25.92 | 18<br>66.66 | 5<br>18.51 | 4<br>14.81 | 9<br>33.33 | 1<br>3.7 | 1<br>3.7 | 2<br>7.4 | 15<br>55.55 | 10<br>37.03 | 25<br>92.59 |

| ಕ್ರ.ಸಂ | ಗ್ರಾಮ, ತಾಲ್ಲೂಕು ಜಿಲ್ಲಾಪಂಚಾಯಿತಿ | ಸಾಮಾಜಿಕ ಸುಧಾರಣೆ | | | | | | ಆರ್ಥಿಕ ಸುಧಾರಣೆ | | | | | | ರಾಜಕೀಯ ಸುಧಾರಣೆ | | | | | |
|---|---|---|---|---|---|---|---|---|---|---|---|---|---|---|---|---|---|---|---|
| | | ಹೌದು | | | ಇಲ್ಲ | | | ಹೌದು | | | ಇಲ್ಲ | | | ಹೌದು | | | ಇಲ್ಲ | | |
| | | ಪು | ಮ | ಒ | ಪು | ಮ | ಒ | ಪು | ಮ | ಒ | ಪು | ಮ | ಒ | ಪು | ಮ | ಒ | ಪು | ಮ | ಒ |
| 08 | ಹಿರಿಯೂರು | 11<br>50.0 | 6<br>27.27 | 17<br>77.27 | 2<br>9.09 | 3<br>13.63 | 5<br>22.72 | 11<br>50.0 | 6<br>27.27 | 17<br>77.27 | 2<br>9.09 | 3<br>13.63 | 5<br>22.72 | 2<br>9.09 | 1<br>4.54 | 3<br>13.63 | 11<br>50.0 | 8<br>36.36 | 19<br>86.36 |
| 09 | ಮೊಳಕಾಲ್ಮೂರು | 5<br>41.66 | 4<br>33.33 | 9<br>75.0 | 1<br>8.33 | 2<br>16.66 | 3<br>25.0 | 5<br>41.66 | 4<br>33.33 | 9<br>75.0 | 1<br>8.33 | 2<br>16.66 | 3<br>25.0 | 1<br>8.33 | 1<br>8.33 | 2<br>16.66 | 5<br>41.66 | 5<br>41.66 | 10<br>83.33 |
| 10. | ಚಿತ್ರದುರ್ಗ ಜಿಲ್ಲೆ | 11<br>40.74 | 7<br>25.92 | 18<br>66.66 | 5<br>18.51 | 4<br>14.81 | 9<br>33.33 | 11<br>40.74 | 7<br>25.92 | 18<br>66.66 | 5<br>18.51 | 4<br>14.81 | 9<br>33.33 | 1<br>3.7 | 1<br>3.7 | 2<br>7.4 | 15<br>55.55 | 10<br>37.03 | 25<br>92.59 |

ಮೂಲ: ಆಯಾ ಗ್ರಾಮಪಂಚಾಯತಿ, ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತಿವಾರು ದಾಖಲೆಗಳು, ಗ್ರಾಮಪಂಚಾಯತಿ ಕಾರ್ಯಾಲಯಗಳು:2010–11

**ಕೋಷ್ಟಕ 5.4**

**ಜಿಲ್ಲಾ ಪಂಚಾಯತ್ ಸ್ಥಾಯಿ ಸಮಿತಿಗಳ ನಡವಳಿಗಳ ಅನ್ವಯ ಅನುದಾನಗಳಿಗೆ ಅನುಮೋದನೆ ನೀಡಿರುವ ವಿವರ: 2006–07ರಿಂದ 2010–11**

| ಕ್ರ.ಸಂ. | ವರ್ಷ | ಸ್ಥಾಯಿ ಸಮಿತಿ ಅಧ್ಯಕ್ಷರ ವಿವರಗಳು | | | | ಇಲಾಖೆ/ ಕಾಮಗಾರಿ | ಅನುದಾನ ವಿವರ(ಲಕ್ಷಗಳಲ್ಲಿ) | ಷರಾ |
|---|---|---|---|---|---|---|---|---|
| | | ಹೆಸರು | ಸ್ಥಾಯಿಸಮಿತಿ | ಜಾತಿ | ಶಿಕ್ಷಣ | | | |
| | | ತಿಮ್ಮಣ್ಣ | ಹಣಕಾಸು | ಪ.ಜಾ | ಇಲ್ಲ | ಶಿಕ್ಷಣ | 40.00 | |
| | | ಗೀತಾ ನಂದನಿಗೌಡ | ಸಾಮಾಜಿಕ ನ್ಯಾಯ | ಬಿ.ಸಿ.ಎಂ. | ಪಿಯುಸಿ | ಆರೋಗ್ಯ | 35.00 | |
| 01 | 2006–07 | ಟಿ.ಶಿವಪ್ಪನಾಯಕ | ಕೃಷಿ, ಕೈಗಾರಿಕೆ | ಪ.ಪಂ | ಪಿಯುಸಿ | ವಸತಿ | 50.00 | |
| | | ಸೋಮಶೇಖರಪ್ಪ | ಶಿಕ್ಷಣ ಮತ್ತು ಆರೋಗ್ಯ | ಪ.ಜಾ | ಬಿ.ಎ. | ವಿದ್ಯುತ್ | 15.00 | |
| | | ಲಲಿತಮ್ಮ | ಸಾಮಾನ್ಯ | ಪ.ಪಂ | ಪಿಯುಸಿ | ಉದ್ಯೋಗ | 90.00 | |
| | | | | | | ಇತರೆ ಕಾಮಗಾರಿ | 75.00 | |
| | | ತಿಮ್ಮಣ್ಣ | ಹಣಕಾಸು | ಪ.ಜಾ | ಇಲ್ಲ | ಶಿಕ್ಷಣ | 50.00 | |
| | | ಗೀತಾ ನಂದನಿಗೌಡ | ಸಾಮಾಜಿಕ ನ್ಯಾಯ | ಬಿ.ಸಿ.ಎಂ. | ಪಿಯುಸಿ | ಆರೋಗ್ಯ | 45.00 | |
| 02 | 2007–08 | ಟಿ.ಶಿವಪ್ಪನಾಯಕ | ಕೃಷಿ, ಕೈಗಾರಿಕೆ | ಪ.ಪಂ. | ಪಿಯುಸಿ | ವಸತಿ | 60.00 | |
| | | ಸೋಮಶೇಖರಪ್ಪ | ಶಿಕ್ಷಣ ಮತ್ತು ಆರೋಗ್ಯ | ಪ.ಜಾ | ಬಿ.ಎ. | ವಿದ್ಯುತ್ | 35,50 | |
| | | ಲಲಿತಮ್ಮ | ಸಾಮಾನ್ಯ | ಪ.ಪಂ. | ಪಿಯುಸಿ | ಉದ್ಯೋಗ | 85.25 | |
| | | | | | | ಇತರೆ ಕಾಮಗಾರಿ | 65.10 | |

| ಕ್ರ.ಸಂ. | ವರ್ಷ | ಸ್ಥಾಯಿ ಸಮಿತಿ ಅಧ್ಯಕ್ಷನ ವಿವರಗಳು | | | | ಇಲಾಖೆ/ | ಅನುದಾನ | |
|---|---|---|---|---|---|---|---|---|
| | | ಹೆಸರು | ಸ್ಥಾಯಿಸಮಿತಿ | ಜಾತಿ | ಶಿಕ್ಷಣ | ಕಾಮಗಾರಿ | ವಿವರ(ಲಕ್ಷಗಳಲ್ಲಿ) | ಷರಾ |
| | | ಗಿರಿಜಮ್ಮ | ಹಣಕಾಸು | ಸಾಮಾನ್ಯ | ಪಿಯುಸಿ | ಶಿಕ್ಷಣ | 63.00 | |
| | | ಜಿ.ತಿಪ್ಪೇಸ್ವಾಮಿ | ಸಾಮಾಜಿಕ ನ್ಯಾಯ | ಪ.ಜಾ | ಬಿ.ಎ. | ಆರೋಗ್ಯ | 57.00 | |
| 03 | 2008–09 | ಸೋಮಶೇಖರಪ್ಪ | ಕೃಷಿ, ಕೈಗಾರಿಕೆ | ಪ.ಜಾ | ಬಿ.ಎ. | ವಸತಿ | 77.55 | |
| | | ಲಲಿತಮ್ಮ | ಶಿಕ್ಷಣ ಮತ್ತು ಆರೋಗ್ಯ | ಪ.ಪಂ | ಪಿಯುಸಿ | ವಿದ್ಯುತ್ | 31.00 | |
| | | ತಿಮ್ಮಣ್ಣ | ಸಾಮಾನ್ಯ ಸಮಿತಿ | ಪ.ಜಾ | ಇಲ್ಲ | ಉದ್ಯೋಗ | 100.00 | |
| | | | | | | ಇತರೆ ಕಾಮಗಾರಿ | 88.00 | |
| | | ರಾಜಶೇಖರಪ್ಪ | ಹಣಕಾಸು | ಒಕ್ಕಲಿಗ | ಬಿ.ಎ. | ಶಿಕ್ಷಣ | 40.00 | |
| | | ಜಿ.ತಿಪ್ಪೇಸ್ವಾಮಿ | ಸಾಮಾಜಿಕ ನ್ಯಾಯ | ಪ.ಜಾ | ಬಿ.ಎ. | ಆರೋಗ್ಯ | 35.00 | |
| 04 | 2009–10 | ರಂಗಸ್ವಾಮಿ | ಕೃಷಿ, ಕೈಗಾರಿಕೆ | ಹಿ.ವರ್ಗ | ಪಿಯುಸಿ | ವಸತಿ | 50.00 | |
| | | ಬಿ.ಕೆಂಚಮ್ಮ | ಶಿಕ್ಷಣ ಮತ್ತು ಆರೋಗ್ಯ | ಸಾಮಾನ್ಯ | ಬಿ.ಎ. | ವಿದ್ಯುತ್ | 15.00 | |
| | | ವಸಂತಕುಮಾರಿ | ಸಾಮಾನ್ಯ ಸಮಿತಿ | ಪ.ಪಂ. | ಪಿಯುಸಿ | ಉದ್ಯೋಗ | 150.00 | |
| | | | | | | ಇತರೆ ಕಾಮಗಾರಿ | 80.00 | |

| ಕ್ರ.ಸಂ. | ವರ್ಷ | ಸ್ಥಾಯಿ ಸಮಿತಿ ಅಧ್ಯಕ್ಷನ ವಿವರಗಳು | | | | ಇಲಾಖೆ/ ಕಾಮಗಾರಿ | ಅನುದಾನ ವಿವರ(ಲಕ್ಷಗಳಲ್ಲಿ) | ಷರಾ |
|---|---|---|---|---|---|---|---|---|
| | | ಹೆಸರು | ಸ್ಥಾಯಿಸಮಿತಿ | ಜಾತಿ | ಶಿಕ್ಷಣ | | | |
| 05 | 2010–11 | ಎಂ.ಜಯಣ್ಣ | ಹಣಕಾಸು | ಸಾಮಾನ್ಯ | ಬಿ.ಎ. | ಶಿಕ್ಷಣ | 57.00 | |
| | | ಜಿ.ತಿಪ್ಪೇಸ್ವಾಮಿ | ಸಾಮಾಜಿಕ ನ್ಯಾಯ | ಪ.ಜಾ | ಬಿ.ಎ. | ಆರೋಗ್ಯ | 77.55 | |
| | | ರಂಗಸ್ವಾಮಿ | ಕೃಷಿ,ಕೈಗಾರಿಕೆ | ಹಿ.ವರ್ಗ | ಪಿಯುಸಿ | ವಸತಿ | 31.55 | |
| | | ಬಿ.ಕೆಂಚಮ್ಮ | ಶಿಕ್ಷಣ ಮತ್ತು ಆರೋಗ್ಯ | ಸಾಮಾನ್ಯ | ಬಿ.ಎ. | ವಿದ್ಯುತ್ | 10.00 | |
| | | ಲಲಿತಮ್ಮ | ಸಾಮಾನ್ಯ ಸಮಿತಿ | ಪ.ಪಂ. | ಪಿಯುಸಿ | ಉದ್ಯೋಗ | 188.00 | |
| | | | | | | ಇತರೆ ಕಾಮಗಾರಿ | 76.00 | |

ಮೂಲ: ಜಿಲ್ಲಾ ಪಂಚಾಯಿತಿವಾರು ದಾಖಲೆಗಳು/ ಗ್ರಾಮಪಂಚಾಯಿತಿ, ಜಿಲ್ಲಾ ಪಂಚಾಯಿತಿ ಕಾರ್ಯಾಲಯ, ಚಿತ್ರದುರ್ಗ: 2010–11

## ಕೋಷ್ಟಕ 5.5

ಚಿತ್ರದುರ್ಗ ತಾಲ್ಲೂಕು ಪಂಚಾಯತ್ ಸ್ಥಾಯಿ ಸಮಿತಿಗಳ ನಡವಳಿಗಳ ಅನ್ವಯ ಅನುದಾನಗಳಿಗೆ ಅನುಮೋದನೆ ನೀಡಿರುವ ವಿವರ: 2006–07 ರಿಂದ 2010–11

| ಕ್ರ.ಸಂ. | ವರ್ಷ | ಸ್ಥಾಯಿ ಸಮಿತಿ ಅಧ್ಯಕ್ಷನ ವಿವರಗಳು | | | | ಇಲಾಖೆ/ | ಅನುದಾನ | |
|---|---|---|---|---|---|---|---|---|
| | | ಹೆಸರು | ಸ್ಥಾಯಿಸಮಿತಿ | ಜಾತಿ | ಶಿಕ್ಷಣ | ಕಾಮಗಾರಿ | ವಿವರ(ಲಕ್ಷಗಳಲ್ಲಿ) | ಷರಾ |
| | | ಏಕಾಂತಪ್ಪ | ಹಣಕಾಸು ಮತ್ತು ಲೆಕ್ಕ ಪರಿಶೋಧನೆ | ಪ.ಜಾತಿ | ಇಲ್ಲ | ಶಿಕ್ಷಣ | 5.00 | |
| 01 | 2006–07 | ಗುಜಗಯ್ಯ | ಸಾಮಾಜಿಕ ನ್ಯಾಯ ಸಮಿತಿ | ಓಬಿಸಿ | ಪಿಯುಸಿ | ಆರೋಗ್ಯ | 3.00 | |
| | | ಕೊಲ್ಲಾಲಕ್ಷ್ಮಿ | ಸಾಮಾನ್ಯ ಸ್ಥಾಯಿ ಸಮಿತಿ | ಪ.ಪಂ. | ಬಿ.ಎ. | ವಸತಿ | 6.00 | |
| | | | | | | ವಿದ್ಯುತ್ | 5.00 | |
| | | | | | | ಉದ್ಯೋಗ | 10.00 | |
| | | | | | | ಇತರೆ ಕಾಮಗಾರಿ | 25.00 | |
| | | ಏಕಾಂತಪ್ಪ | ಹಣಕಾಸು ಮತ್ತು ಲೆಕ್ಕ ಪರಿಶೋಧನೆ | ಪ.ಜಾತಿ | ಇಲ್ಲ | ಶಿಕ್ಷಣ | 8.00 | |
| 02 | 2007–08 | ಗುಜಗಯ್ಯ | ಸಾಮಾಜಿಕ ನ್ಯಾಯ ಸಮಿತಿ | ಓಬಿಸಿ | ಪಿಯುಸಿ | ಆರೋಗ್ಯ | 7.76 | |
| | | ಕೊಲ್ಲಾಲಕ್ಷ್ಮಿ | ಸಾಮಾನ್ಯ ಸ್ಥಾಯಿ ಸಮಿತಿ | ಪ.ಪಂ. | ಬಿ.ಎ. | ವಸತಿ | 6.66 | |
| | | | | | | ವಿದ್ಯುತ್ | 8.54 | |
| | | | | | | ಉದ್ಯೋಗ | 24.00 | |
| | | | | | | ಇತರೆ ಕಾಮಗಾರಿ | 22.00 | |

| ಕ್ರ.ಸಂ. | ವರ್ಷ | ಸ್ಥಾಯಿ ಸಮಿತಿ ಅಧ್ಯಕ್ಷನ ವಿವರಗಳು | | | | ಇಲಾಖೆ/ | ಅನುದಾನ | |
|---|---|---|---|---|---|---|---|---|
| | | ಹೆಸರು | ಸ್ಥಾಯಿಸಮಿತಿ | ಜಾತಿ | ಶಿಕ್ಷಣ | ಕಾಮಗಾರಿ | ವಿವರ(ಲಕ್ಷಗಳಲ್ಲಿ) | ಷರಾ |
| | | ಏಕಾಂತಪ್ಪ | ಹಣಕಾಸು ಮತ್ತು ಲೆಕ್ಕ ಪರಿಶೋಧನೆ | ಪ.ಜಾತಿ | ಇಲ್ಲ | ಶಿಕ್ಷಣ | 15.00 | |
| 03 | 2008–09 | ಗುಜಗಯ್ಯ | ಸಾಮಾಜಿಕ ನ್ಯಾಯ ಸಮಿತಿ | ಓಬಿಸಿ | ಪಿಯುಸಿ | ಆರೋಗ್ಯ | 13.00 | |
| | | ಕೊಲ್ಲಾಲಕ್ಷ್ಮಿ | ಸಾಮಾನ್ಯ ಸ್ಥಾಯಿ ಸಮಿತಿ | ಪ.ಪಂ. | ಬಿ.ಎ. | ವಸತಿ | 25.00 | |
| | | | | | | ವಿದ್ಯುತ್ | 15.33 | |
| | | | | | | ಉದ್ಯೋಗ | 30.00 | |
| | | ಏಕಾಂತಪ್ಪ | ಹಣಕಾಸು ಮತ್ತು ಲೆಕ್ಕ ಪರಿಶೋಧನೆ | ಪ.ಜಾತಿ | ಇಲ್ಲ | ಶಿಕ್ಷಣ | 35.00 | |
| 04 | 2009–10 | ಗುಜಗಯ್ಯ | ಸಾಮಾಜಿಕ ನ್ಯಾಯ ಸಮಿತಿ | ಓಬಿಸಿ | ಪಿಯುಸಿ | ಆರೋಗ್ಯ | 25.00 | |
| | | ಕೊಲ್ಲಾಲಕ್ಷ್ಮಿ | ಸಾಮಾನ್ಯ ಸ್ಥಾಯಿ ಸಮಿತಿ | ಪ.ಪಂ. | ಬಿ.ಎ. | ವಸತಿ | 34.00 | |
| | | | | | | ವಿದ್ಯುತ್ | 10.00 | |
| | | | | | | ಉದ್ಯೋಗ | 55.00 | |
| | | | | | | ಇತರೆ ಕಾಮಗಾರಿ | 32.00 | |
| | | ಏಕಾಂತಪ್ಪ | ಹಣಕಾಸು ಮತ್ತು ಲೆಕ್ಕ ಪರಿಶೋಧನೆ | ಪ.ಜಾತಿ | ಇಲ್ಲ | ಶಿಕ್ಷಣ | 35.00 | |
| 05 | 2010–11 | ಗುಜಗಯ್ಯ | ಸಾಮಾಜಿಕ ನ್ಯಾಯ ಸಮಿತಿ | ಓಬಿಸಿ | ಪಿಯುಸಿ | ಆರೋಗ್ಯ | 26.00 | |

| ಕ್ರ.ಸಂ. | ವರ್ಷ | ಸ್ಥಾಯಿ ಸಮಿತಿ ಅಧ್ಯಕ್ಷನ ವಿವರಗಳು | | | | ಇಲಾಖೆ/ | ಅನುದಾನ | |
|---|---|---|---|---|---|---|---|---|
| | | ಹೆಸರು | ಸ್ಥಾಯಿಸಮಿತಿ | ಜಾತಿ | ಶಿಕ್ಷಣ | ಕಾಮಗಾರಿ | ವಿವರ(ಲಕ್ಷಗಳಲ್ಲಿ) | ಷರಾ |
| | | ಕೊಲ್ಲಾಲಕ್ಷ್ಮಿ | ಸಾಮಾನ್ಯ ಸ್ಥಾಯಿ ಸಮಿತಿ | ಪ.ಪಂ. | ಬಿ.ಎ. | ವಸತಿ | 57.00 | |
| | | | | | | ವಿದ್ಯುತ್ | 08.00 | |
| | | | | | | ಉದ್ಯೋಗ | 69.00 | |
| | | | | | | ಇತರೆ ಕಾಮಗಾರಿ | 27.00 | |

ಮೂಲ: ಅನುಷಂಗಿಕ ಮಾಹಿತಿಗಳು ಚಿತ್ರದುರ್ಗ ತಾಲ್ಲೂಕು ಪಂಚಾಯತ್, ಚಿತ್ರದುರ್ಗ: 2010–11

**ಕೋಷ್ಟಕ 5.6**

**ಹಿರಿಯೂರು ತಾಲ್ಲೂಕು ಪಂಚಾಯತ್ ಸ್ಥಾಯಿ ಸಮಿತಿಗಳ ನಡವಳಿಗಳ ಅನ್ವಯ ಅನುದಾನಗಳಿಗೆ ಅನುಮೋದನೆ ನೀಡಿರುವ ವಿವರ: 2006–07 ರಿಂದ 2010–11**

| ಕ್ರ.ಸಂ. | ವರ್ಷ | ಸ್ಥಾಯಿ ಸಮಿತಿ ಅಧ್ಯಕ್ಷರ ವಿವರಗಳು | | | | ಇಲಾಖೆ/ | ಅನುದಾನ | |
|---|---|---|---|---|---|---|---|---|
| | | ಹೆಸರು | ಸ್ಥಾಯಿಸಮಿತಿ | ಜಾತಿ | ಶಿಕ್ಷಣ | ಕಾಮಗಾರಿ | ವಿವರ(ಲಕ್ಷಗಳಲ್ಲಿ) | ಷರಾ |
| 01 | 2006–07 | ವಿ.ರಂಗಸ್ವಾಮಿ | ಹಣಕಾಸು ಮತ್ತು ಲೆಕ್ಕ ಪರಿಶೋಧನೆ | ಪ.ಜಾತಿ | ಬಿ.ಕಾಂ | ಶಿಕ್ಷಣ | 3.00 | |
| | | ನರಸಿಂಹಮೂರ್ತಿ | ಸಾಮಾಜಿಕ ನ್ಯಾಯ ಸಮಿತಿ | ಪ.ಪಂ | 7ನೇ | ಆರೋಗ್ಯ | 2.00 | |
| | | ಡಾ.ಜಿ.ಆರ್.ಸುಜಾತ | ಸಾಮಾನ್ಯ ಸ್ಥಾಯಿ ಸಮಿತಿ | ಪ.ಜಾತಿ | ಪಿಎಚ್.ಡಿ | ವಸತಿ | 8.00 | |
| | | | | | | ವಿದ್ಯುತ್ | 6.00 | |
| | | | | | | ಉದ್ಯೋಗ | 15.00 | |
| | | | | | | ಇತರೆ ಕಾಮಗಾರಿ | 35.00 | |
| 02 | 2007–08 | ವಿ.ರಂಗಸ್ವಾಮಿ | ಹಣಕಾಸು ಮತ್ತು ಲೆಕ್ಕ ಪರಿಶೋಧನೆ | ಪ.ಜಾತಿ | ಬಿ.ಕಾಂ | ಶಿಕ್ಷಣ | 2.00 | |
| | | ನರಸಿಂಹಮೂರ್ತಿ | ಸಾಮಾಜಿಕ ನ್ಯಾಯ ಸಮಿತಿ | ಪ.ಪಂ | 7ನೇ | ಆರೋಗ್ಯ | 8.00 | |
| | | ಡಾ.ಜಿ.ಆರ್.ಸುಜಾತ | ಸಾಮಾನ್ಯ ಸ್ಥಾಯಿ ಸಮಿತಿ | ಪ.ಜಾತಿ | ಪಿಎಚ್.ಡಿ. | ವಸತಿ | 6.00 | |
| | | | | | | ವಿದ್ಯುತ್ | 15.50 | |
| | | | | | | ಉದ್ಯೋಗ | 39.00 | |
| | | | | | | ಇತರೆ ಕಾಮಗಾರಿ | 40.00 | |

| ಕ್ರ.ಸಂ. | ವರ್ಷ | ಸ್ಥಾಯಿ ಸಮಿತಿ ಅಧ್ಯಕ್ಷನ ವಿವರಗಳು | | | | ಇಲಾಖೆ/ | ಅನುದಾನ | |
|---|---|---|---|---|---|---|---|---|
| | | ಹೆಸರು | ಸ್ಥಾಯಿಸಮಿತಿ | ಜಾತಿ | ಶಿಕ್ಷಣ | ಕಾಮಗಾರಿ | ವಿವರ(ಲಕ್ಷಗಳಲ್ಲಿ) | ಷರಾ |
| | | ಕೆ.ರಾಜು | ಹಣಕಾಸು ಮತ್ತು ಲೆಕ್ಕ ಪರಿಶೋಧನೆ | ಒಕ್ಕಲಿಗ | ಪಿಯುಸಿ | ಶಿಕ್ಷಣ | 5.00 | |
| 03 | 2008–09 | ಕೆ.ಟಿ.ಗಂಗಾಧರ | ಸಾಮಾಜಿಕ ನ್ಯಾಯ ಸಮಿತಿ | ಪ.ಜಾ | ಪಿಯುಸಿ | ಆರೋಗ್ಯ | 11.00 | |
| | | ಡಾ.ಜಿ.ಆರ್.ಸುಜಾತ | ಸಾಮಾನ್ಯ ಸ್ಥಾಯಿ ಸಮಿತಿ | ಪ.ಜಾತಿ | ಪಿಎಚ್.ಡಿ | ವಸತಿ | 65.00 | |
| | | | | | | ವಿದ್ಯುತ್ | 25.33 | |
| | | | | | | ಉದ್ಯೋಗ | 22.00 | |
| | | | | | | ಇತರೆ ಕಾಮಗಾರಿ | 49.30 | |
| | | ಡಾ.ಜಿ.ಆರ್.ಸುಜಾತ | ಸಾಮಾನ್ಯ ಸ್ಥಾಯಿ ಸಮಿತಿ | ಪ.ಜಾತಿ | | ಪಿಎಚ್.ಡಿ. | 36.00 | |
| 04 | 2009–10 | ಕೆ.ಟಿ.ಗಂಗಾಧರ | ಸಾಮಾಜಿಕ ನ್ಯಾಯ ಸಮಿತಿ | ಪ.ಜಾ | ಪಿಯುಸಿ | ಆರೋಗ್ಯ | 25.00 | |
| | | ಕೆ.ರಾಜು | ಹಣಕಾಸು ಮತ್ತು ಲೆಕ್ಕ ಪರಿಶೋಧನೆ | ಒಕ್ಕಲಿಗ | ಪಿಯುಸಿ | ವಸತಿ | 44.00 | |
| | | | | | | ವಿದ್ಯುತ್ | 6.00 | |
| | | | | | | ಉದ್ಯೋಗ | 65.00 | |
| | | | | | | ಇತರೆ ಕಾಮಗಾರಿ | 42.00 | |

| ಕ್ರ.ಸಂ. | ವರ್ಷ | ಸ್ಥಾಯಿ ಸಮಿತಿ ಅಧ್ಯಕ್ಷನ ವಿವರಗಳು | | | | ಇಲಾಖೆ/ | ಅನುದಾನ | |
|---|---|---|---|---|---|---|---|---|
| | | ಹೆಸರು | ಸ್ಥಾಯಿಸಮಿತಿ | ಜಾತಿ | ಶಿಕ್ಷಣ | ಕಾಮಗಾರಿ | ವಿವರ(ಲಕ್ಷಗಳಲ್ಲಿ) | ಷರಾ |
| | | ಕೆ.ರಾಜು | ಹಣಕಾಸು ಮತ್ತು ಲೆಕ್ಕ ಪರಿಶೋಧನೆ | ಒಕ್ಕಲಿಗ | ಪಿಯುಸಿ. | ಶಿಕ್ಷಣ | 5.00 | |
| 05 | 2010–11 | ಕೆ.ಟಿ.ಗಂಗಾಧರ | ಸಾಮಾಜಿಕ ನ್ಯಾಯ ಸಮಿತಿ | ಪ.ಜಾ | ಪಿಯುಸಿ | ಆರೋಗ್ಯ | 6.00 | |
| | | ಡಾ.ಜಿ.ಆರ್.ಸುಜಾತ | ಸಾಮಾನ್ಯ ಸ್ಥಾಯಿ ಸಮಿತಿ | ಪ.ಜಾತಿ | ಪಿಎಚ್.ಡಿ | ವಸತಿ | 7.00 | |
| | | | | | | ವಿದ್ಯುತ್ | 8.00 | |
| | | | | | | ಉದ್ಯೋಗ | 69.00 | |
| | | | | | | ಇತರೆ ಕಾಮಗಾರಿ | 3200 | |

ಮೂಲ: ಅನುಷಂಗಿಕ ಮಾಹಿತಿಗಳು ಚಿತ್ರದುರ್ಗ ತಾಲ್ಲೂಕು ಪಂಚಾಯತ್, ಹಿರಿಯೂರು: 2010–11

**ಕೋಷ್ಟಕ 5.7**

**ಮೊಳಕಾಲ್ಮೂರು ತಾಲ್ಲೂಕು ಪಂಚಾಯತ್ ಸ್ಥಾಯಿ ಸಮಿತಿಗಳ ನಡವಳಿಗಳ ಅನ್ವಯ ಅನುದಾನಗಳಿಗೆ ಅನುಮೋದನೆ ನೀಡಿರುವ ವಿವರ: 2006–07 ರಿಂದ 2010–11**

| ಕ್ರ.ಸಂ. | ವರ್ಷ | ಸ್ಥಾಯಿ ಸಮಿತಿ ಅಧ್ಯಕ್ಷರ ವಿವರಗಳು | | | | ಇಲಾಖೆ/ ಕಾಮಗಾರಿ | ಅನುದಾನ ವಿವರ(ಲಕ್ಷಗಳಲ್ಲಿ) | ಷರಾ |
|---|---|---|---|---|---|---|---|---|
| | | ಹೆಸರು | ಸ್ಥಾಯಿಸಮಿತಿ | ಜಾತಿ | ಶಿಕ್ಷಣ | | | |
| | | ಸುಮಿತ್ರ | ಹಣಕಾಸು ಮತ್ತು ಲೆಕ್ಕ ಪರಿಶೋಧನೆ | ಓಬಿಸಿ | ಪಿಯುಸಿ | ಶಿಕ್ಷಣ | ಸ್ಥಾಯಿ ಸಮಿತಿಗಳು ಯಾವುದೇ ಅನು ದಾನಕ್ಕೆ ಅನುಮೋ ದನೆ ನೀಡಿಲ್ಲ. (ಸಾಮಾನ್ಯ ಸಭೆ ಯಲ್ಲಿ ಅನುಮೋ ದನೆ ನೀಡಲಾಗಿದೆ) | |
| 01 | 2006–07 | ಆರ್.ಜಿ.ರಾಘವೇಂದ್ರ | ಸಾಮಾಜಿಕ ನ್ಯಾಯ ಸಮಿತಿ | ಓಬಿಸಿ | ಬಿ.ಎ. | ಆರೋಗ್ಯ | | |
| | | ಗಂಗಮ್ಮ | ಸಾಮಾನ್ಯ ಸ್ಥಾಯಿ ಸಮಿತಿ | ಪ.ಜಾತಿ | 2ನೇ | ವಸತಿ | | |
| | | ಸುಮಿತ್ರ | ಹಣಕಾಸು ಮತ್ತು ಲೆಕ್ಕ ಪರಿಶೋಧನೆ | ಓಬಿಸಿ | ಪಿಯುಸಿ | ಶಿಕ್ಷಣ | | |
| 02 | 2007–08 | ಆರ್.ಜಿ.ರಾಘವೇಂದ್ರ | ಸಾಮಾಜಿಕ ನ್ಯಾಯ ಸಮಿತಿ | ಓಬಿಸಿ | ಬಿ.ಎ. | ಆರೋಗ್ಯ | | |
| | | ಗಂಗಮ್ಮ | ಸಾಮಾನ್ಯ ಸ್ಥಾಯಿ ಸಮಿತಿ | ಪ.ಜಾತಿ | 2ನೇ | ವಸತಿ | | |
| | | ಸುಮಿತ್ರ | ಹಣಕಾಸು ಮತ್ತು ಲೆಕ್ಕ ಪರಿಶೋಧನೆ | ಓಬಿಸಿ | ಪಿಯುಸಿ | ಶಿಕ್ಷಣ | | |
| 03 | 2008–09 | ದಾನಸೂರಯ್ಯ | ಸಾಮಾಜಿಕ ನ್ಯಾಯ ಸಮಿತಿ | ಪ.ಪಂ | 7ನೇ | ಆರೋಗ್ಯ | | |
| | | ನಿಂಗಮ್ಮ | ಸಾಮಾನ್ಯ ಸ್ಥಾಯಿ ಸಮಿತಿ | ಓಬಿಸಿ | 2ನೇ | ವಸತಿ | | |
| | | ನಿಂಗಮ್ಮ | ಸಾಮಾನ್ಯ ಸ್ಥಾಯಿ ಸಮಿತಿ | ಓಬಿಸಿ | 2ನೇ | ಶಿಕ್ಷಣ | | |
| 04 | 2009–10 | ವೆಂಕಟೇಶ | ಸಾಮಾಜಿಕ ನ್ಯಾಯ ಸಮಿತಿ | ಪ.ಜಾತಿ | 6ನೇ | ಆರೋಗ್ಯ | | |
| | | ನಿಂಗಮ್ಮ | ಸಾಮಾನ್ಯ ಸ್ಥಾಯಿ ಸಮಿತಿ | ಓಬಿಸಿ | 2ನೇ | ವಸತಿ | | |
| 05 | 2010–11 | ವೆಂಕಟೇಶ | ಸಾಮಾಜಿಕ ನ್ಯಾಯ ಸಮಿತಿ | ಪ.ಜಾತಿ | 6ನೇ | ಆರೋಗ್ಯ | | |
| | | ಗಂಗಮ್ಮ | ಸಾಮಾನ್ಯ ಸ್ಥಾಯಿ ಸಮಿತಿ | ಪ.ಜಾತಿ | 2ನೇ | ವಸತಿ | | |

ಮೂಲ:ಆನುಷಂಗಿಕ ಮಾಹಿತಿಗಳು, ಚಿತ್ರದುರ್ಗ ತಾಲ್ಲೂಕು ಪಂಚಾಯಿತಿ, ಮೊಳಕಾಲ್ಮೂರು: 2010–11

## ಕೋಷ್ಟಕ 5.8

### ಮೊಳಕಾಲ್ಮೂರು ತಾಲ್ಲೂಕು ಪಂಚಾಯತ್ ಸ್ಥಾಯಿ ಸಮಿತಿಗಳ ನಡವಳಿಗಳ ಅನ್ವಯ ಅನುದಾನಗಳಿಗೆ ಅನುಮೋದನೆ ನೀಡಿರುವ ವಿವರ: 2006–07 ರಿಂದ 2010–11

| ಕ್ರ.ಸಂ. | ವರ್ಷ/ಗ್ರಾಮ ಪಂಚಾಯತಿ | ಸ್ಥಾಯಿ ಸಮಿತಿ ಅಧ್ಯಕ್ಷರ ವಿವರಗಳು | | | | ಇಲಾಖೆ/ | ಅನುದಾನ | |
|---|---|---|---|---|---|---|---|---|
| | | ಹೆಸರು | ಸ್ಥಾಯಿಸಮಿತಿ | ಜಾತಿ | ಶಿಕ್ಷಣ | ಕಾಮಗಾರಿ | ವಿವರ(ಲಕ್ಷಗಳಲ್ಲಿ) | ಷರಾ |
| | 2006–07 | ಟಿ.ಚಿಕ್ಕಣ್ಣ | ಉತ್ಪಾದನಾ ಸ್ಥಾಯಿ ಸಮಿತಿ | ಓಬಿಸಿ | ಪಿಯುಸಿ | ಶಿಕ್ಷಣ | | |
| 01 | ರಿಂದ 2010–11 | ಜಯಣ್ಣ | ಸಾಮಾಜಿಕ ನ್ಯಾಯ ಸಮಿತಿ | ಓಬಿಸಿ | 10ನೇ | ಆರೋಗ್ಯ | ಮೂರು ಸ್ಥಾಯಿ | |
| | ಬಬ್ಬೂರು | ಶಿವಮ್ಮ | ಸೌಕಾರ್ಯ ಸ್ಥಾಯಿ ಸಮಿತಿ | ಓಬಿಸಿ | 7ನೇ | ವಸತಿ/ಇತರೆ | ಸಮಿತಿಗಳು | |
| | 2006–07 | ಪರ್ವಿನ್ ಬಾನು | ಉತ್ಪಾದನಾ ಸ್ಥಾಯಿ ಸಮಿತಿ | 2ಬಿ | ಪಿಯುಸಿ | ಶಿಕ್ಷಣ | ಯಾವುದೇ ಅನು | |
| 02 | ರಿಂದ 2010–11 | ಬಾಲರಾಜ | ಸಾಮಾಜಿಕ ನ್ಯಾಯ ಸಮಿತಿ | ಪ.ಜಾತಿ | 7ನೇ | ಆರೋಗ್ಯ | ದಾನಕ್ಕೆ ಅನು | |
| | ಗೌಡನಹಳ್ಳಿ | ಅಂಜಿನಪ್ಪ | ಸೌಕಾರ್ಯ ಸ್ಥಾಯಿ ಸಮಿತಿ | ಪ.ಪಂ | 7ನೇ | ವಸತಿ/ಇತರೆ | ಮೋದನೆ ನೀಡಿಲ್ಲ | |
| | 2006–07 | ಸಾಕಮ್ಮ | ಉತ್ಪಾದನಾ ಸ್ಥಾಯಿ ಸಮಿತಿ | ಓಬಿಸಿ | 7ನೇ | ಶಿಕ್ಷಣ | (ಸಾಮಾನ್ಯ ಸಭೆ | |
| 03 | ರಿಂದ 2010–11 | ಸಿದ್ದೇಶ | ಸಾಮಾಜಿಕ ನ್ಯಾಯ ಸಮಿತಿ | ಪ.ಜಾ | ಬಿ.ಎ. | ಆರೋಗ್ಯ | ಯಲ್ಲಿ ಅನು | |
| | ಮದಕರಿಪುರ | ದೇವೇಂದ್ರಪ್ಪ | ಸೌಕಾರ್ಯ ಸ್ಥಾಯಿ ಸಮಿತಿ | ಪ.ಪಂ | ಬಿ.ಎ. | ವಸತಿ/ಇತರೆ | ಮೋದನೆ | |
| | 2006–07 | ಸುಶೀಲಮ್ಮ | ಉತ್ಪಾದನಾ ಸ್ಥಾಯಿ ಸಮಿತಿ | ಓಬಿಸಿ | 5ನೇ | ಶಿಕ್ಷಣ | ನೀಡಲಾಗಿದೆ) | |
| 04 | ರಿಂದ 2010–11 | ಹನುಮಂತಪ್ಪ | ಸಾಮಾಜಿಕ ನ್ಯಾಯ ಸಮಿತಿ | ಪ.ಜಾ | 6ನೇ | ಆರೋಗ್ಯ | | |
| | ಮಠದ ಕುರುಬರಹಟ್ಟಿ | ಶಬ್ಬೀರ್ ಮಹಮ್ಮದ್ | ಸೌಕಾರ್ಯ ಸ್ಥಾಯಿ ಸಮಿತಿ | 2ಬಿ | 5ನೇ | ವಸತಿ/ಇತರೆ | | |

| ಕ್ರ.ಸಂ. | ವರ್ಷ/ಗ್ರಾಮ ಪಂಚಾಯತಿ | ಸ್ಥಾಯಿ ಸಮಿತಿ ಅಧ್ಯಕ್ಷನ ವಿವರಗಳು | | | | ಇಲಾಖೆ/ ಕಾಮಗಾರಿ | ಅನುದಾನ ವಿವರ(ಲಕ್ಷಗಳಲ್ಲಿ) | ಷರಾ |
|---|---|---|---|---|---|---|---|---|
| | | ಹೆಸರು | ಸ್ಥಾಯಿಸಮಿತಿ | ಜಾತಿ | ಶಿಕ್ಷಣ | | | |
| 05 | 2006–07 ರಿಂದ 2010–11 ಹಾನಗಲ್ಲು | ರಾಮಕೃಷ್ಣ | ಉತ್ಪಾದನಾ ಸ್ಥಾಯಿ ಸಮಿತಿ | ಓಬಿಸಿ | 10ನೇ | ಶಿಕ್ಷಣ | | |
| | | ಬೋರನಾಯಕ | ಸಾಮಾಜಿಕ ನ್ಯಾಯ ಸಮಿತಿ | ಪ.ಜಾ | 9ನೇ | ಆರೋಗ್ಯ | | |
| | | ಮೋಹರಾನಬಿ | ಸೌಕಾರ್ಯ ಸ್ಥಾಯಿ ಸಮಿತಿ | 2ಬಿ | 3ನೇ | ವಸತಿ/ಇತರೆ | | |
| 06 | 2006–07 ರಿಂದ 2010–11 ರಾಯಪುರ | ಸುರೇಶ ಬಿ. | ಉತ್ಪಾದನಾ ಸ್ಥಾಯಿ ಸಮಿತಿ | ಓಬಿಸಿ | ಪಿಯುಸಿ | ಶಿಕ್ಷಣ | | |
| | | ಮಲ್ಲಮ್ಮ | ಸಾಮಾಜಿಕ ನ್ಯಾಯ ಸಮಿತಿ | ಪ.ಜಾ | 5ನೇ | ಆರೋಗ್ಯ | | |
| | | ಟಿ.ನಾಗರಾಜ | ಸೌಕಾರ್ಯ ಸ್ಥಾಯಿ ಸಮಿತಿ | ಪ.ಪಂ | 10ನೇ | ವಸತಿ/ಇತರೆ | | |

ಮೂಲ:ಆನುಷಂಗಿಕ ಮಾಹಿತಿಗಳು, ಆಯಾ ಗ್ರಾಮಪಂಚಾಯಿತಿ ಕಾರ್ಯಾಲಯಗಳು: 2010–11

ಅಧ್ಯಾಯ ಆರು

# ಸಮಾರೋಪ

ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಸ್ಥಾಯಿಸಮಿತಿಗಳ ಪಾತ್ರ, ಕಾರ್ಯಕ್ಷಮತೆ ಮತ್ತು ಮಹತ್ವವನ್ನು ಗುರುತಿಸುವುದು ಹಾಗೂ ಈ ಮೂರು ಹಂತದ ಸಂಸ್ಥೆಗಳಲ್ಲಿ ಸ್ಥಾಯಿಸಮಿತಿಗಳ ಕಾರ್ಯಕ್ಷಮತೆಯನ್ನು ತುಲನಾತ್ಮಕವಾಗಿ ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ. ಈ ಮೂಲಕ ತಳಮಟ್ಟದ ಗ್ರಾಮೀಣ ಸ್ವಯಮಾಡಳಿತ ಸಂಸ್ಥೆಗಳಲ್ಲಿ ಸ್ಥಾಯಿಸಮಿತಿಗಳು ಸರಿಯಾಗಿ ಕಾರ್ಯನಿರ್ವಹಿಸಲು ಪೂರಕವಾಗಬಲ್ಲ ಸಲಹೆ ಹಾಗೂ ಪರಿಹಾರಗಳನ್ನು ಸೂಚಿಸುವಲ್ಲಿ ಪ್ರಸ್ತುತ ಅಧ್ಯಯನ ಒತ್ತು ನೀಡಿದೆ. ಭಾರತದ ಒಕ್ಕೂಟ ವ್ಯವಸ್ಥೆಯಲ್ಲಿ ಕೇಂದ್ರ, ರಾಜ್ಯ ಹಾಗೂ ಪಂಚಾಯತ್ ಸಂಸ್ಥೆಗಳ ನಡುವೆ ಆಡಳಿತಕ್ಕೆ ಸಂಬಂಧಿಸಿದಂತೆ ಜನೋಪಯೋಗಿಯಾಗಿರುವುದನ್ನು ಕಾಣುತ್ತೇವೆ. ಕೇಂದ್ರ ಮತ್ತು ರಾಜ್ಯ ಶಾಸಕಾಂಗಗಳು ಇಂದು ಅಪಾರ ಕಾರ್ಯನಿರ್ವಹಣಾ ಜವಾಬ್ದಾರಿಯನ್ನು ಹೊಂದಿರುವ ಕಾರಣ ದಿನೇ ದಿನೇ ಸಂಸತ್ತು ಹಾಗೂ ರಾಜ್ಯ ಶಾಸಕಾಂಗಗಳ ಮೇಲೆ ಕಾರ್ಯಭಾರ ಹೆಚ್ಚುತ್ತಲೇ ಇದೆ. ಹಾಗಾಗಿ ಸರ್ಕಾರದ ಚಟುವಟಿಕೆಗಳನ್ನು ಅಧಿವೇಶನದ ಸಂದರ್ಭಗಳಲ್ಲಿ ಪರಿಶೀಲಿಸಲು ಸಾಕಷ್ಟು ಸಮಯವಿರುವುದಿಲ್ಲ, ಜೊತೆಗೆ ಶಾಸಕಾಂಗದ ಅಧಿವೇಶನ ವರ್ಷದ ಕೆಲವು ತಿಂಗಳುಗಳು ಮಾತ್ರ ನಡೆಯುವ ಕಾರಣ, ಶಾಸಕಾಂಗದ ಕಾರ್ಯಭಾರವನ್ನು ಮತ್ತು ಶಾಸಕಾಂಗದ ದೈನಂದಿನ ಆಡಳಿತವನ್ನು ವ್ಯವಹಾರಗಳನ್ನು ನಿರಂತರವಾಗಿ ನಡೆಸಲು ಹಾಗೂ ಕೆಲವು ಮುಖ್ಯ ವಿಷಯಗಳ ಬಗ್ಗೆ ನೀತಿಗಳನ್ನು ರೂಪಿಸಿ ನಿರ್ಧಾರಗಳನ್ನು ದಕ್ಷತೆಯಿಂದ ಹಾಗೂ ಪರಿಣಾಮಕಾರಿಯಾಗಿ ಕೈಗೊಳ್ಳಲು ಕೇಂದ್ರ, ರಾಜ್ಯ ಸರ್ಕಾರಗಳಲ್ಲಿ ಮತ್ತು ಪಂಚಾಯತ್ ಸಂಸ್ಥೆಗಳಲ್ಲಿ ಸ್ಥಾಯಿಸಮಿತಿಗಳನ್ನು ರಚಿಸಲು ಸಂವಿಧಾನದಲ್ಲಿ ಅವಕಾಶ ಕಲ್ಪಿಸಿ ಕೊಡಲಾಗಿದೆ.

ಅದೇ ರೀತಿ ಪಂಚಾಯತ್ ಸಂಸ್ಥೆಗಳಲ್ಲಿ ತಳಮಟ್ಟದ ಸ್ವಯಮಾಡಳಿತ ಹಾಗೂ ಪ್ರಜಾಪ್ರಭುತ್ವದ ಆಶಯಗಳು ಬೇರೂರಲು ಅವಕಾಶವನ್ನು ಕಲ್ಪಿಸಲಾಗಿದೆ. ವಿಕೇಂದ್ರೀಕರಣದ ಈ ಮಹತ್ತರವಾದ ಆಯಾಮವು 73–74ನೇ ತಿದ್ದುಪಡಿಯ ಅನುಸಾರ ಸಂವಿಧಾನಬದ್ಧವೆನಿಸಿದ್ದು ಇದರ ಸರಿಯಾದ

ಕಾರ್ಯನಿರ್ವಹಣೆಯೂ ಹೆಚ್ಚು ಜನಮುಖಿಯಾಗಿದ್ದು ತಳಮಟ್ಟದ ಭಾಗವಹಿಸುವಿಕೆಗೆ ಉತ್ತೇಜನ ನೀಡಿದೆ ಹಾಗೂ ಸ್ಥಾಯಿಸಮಿತಿಗಳು ಇಂದು ಸಾಂವಿಧಾನಿಕ ಸಂಸ್ಥೆಗಳಾಗಿದ್ದು. ಅದರಲ್ಲೂ ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಮಹತ್ವದ ಸಮಿತಿಗಳಾಗಿ ನಿರಂತರವಾಗಿ ಆಡಳಿತದಲ್ಲಿ ಕ್ರಿಯಾಶೀಲತೆ ಮೂಡಿಸುವ ಸಂಸ್ಥೆಗಳಾಗಿ ಕಾರ್ಯನಿರ್ವಹಿಸುತ್ತವೆ. ಈ ಸಮಿತಿಗಳು ಅವುಗಳದ್ದೇ ಆದ ಮಹತ್ವದ ಅಧಿಕಾರಗಳನ್ನು ಹೊಂದಿವೆ. ದೈನಂದಿನ ಕಾರ್ಯನಿರ್ವಹಿಸಲು ಪ್ರತಿ ಹಂತದಲ್ಲೂ ವಿವಿಧ ಸ್ಥಾಯಿಸಮಿತಿಗಳನ್ನು ರಚಿಸಿದ್ದು ಪ್ರತಿ ಸಮಿತಿಯು ಚುನಾಯಿತ ಸದಸ್ಯರಲ್ಲೆ ಒಬ್ಬರನ್ನು ಅಧ್ಯಕ್ಷ, ಉಪಾಧ್ಯಕ್ಷ, ಮತ್ತಿತರ ಸದಸ್ಯರನ್ನು ಒಳಗೊಂಡಿರುತ್ತದೆ. ಈ ಸಮಿತಿಗಳು ದೈನಂದಿನ ಕಾರ್ಯಗಳನ್ನು ನಿರ್ವಹಿಸುವುದರ ಮೂಲ ಉದ್ದೇಶವೇನೆಂದರೆ, ಜನತೆಯ ಮೂಲಭೂತ ಬೇಡಿಕೆಗಳನ್ನು ಪರಿಣಾಮಕಾರಿಯಾಗಿ ಕಾರ್ಯಗತಗೊಳಿಸುವುದು ಹಾಗೂ ಪಂಚಾಯತ್ ಸಂಸ್ಥೆಗಳ ಕಾರ್ಯಕ್ಷಮತೆಯನ್ನು ಹೆಚ್ಚಿಸುವುದೇ ಆಗಿದೆ. ಸ್ಥಾಯಿ ಸಮಿತಿಯ ಸಲಹೆಗಳು ಕೇವಲ ಸಲಹಾತ್ಮಕವಾಗದೆ ಅವುಗಳನ್ನು ಶಾಸನಾತ್ಮಕವಾಗಿ ಗಟ್ಟಿಗೊಳಿಸುವುದರಿಂದ ಇನ್ನಷ್ಟು ಪರಿಣಾಮಕಾರಿಯಾಗಿಸಲು ಸಾಧ್ಯತೆಗಳಿವೆ ಎಂಬುದನ್ನು ಈ ಅಧ್ಯಯನದಿಂದ ಗಮನಿಸಬಹುದಾಗಿದೆ. 1993ರ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮದ ಪ್ರಕರಣ 270ರ ಪ್ರಕಾರ ಸ್ಥಾಯಿಸಮಿತಿಗಳು ತೆಗೆದುಕೊಂಡ ತೀರ್ಮಾನಗಳನ್ನು ಮೂರು ಹಂತದ ಪಂಚಾಯತಿಗಳ ಸಾಮಾನ್ಯ ಸಭೆಗಳಲ್ಲಿ ಪರಿಗಣಿಸಬಹುದಾಗಿದೆ ಅಥವಾ ಪರಿಗಣಿಸದಿರಬಹುದು ಎಂದಿದೆ. ಇದರಿಂದಾಗಿ ಸಮಿತಿಗಳು ದುರ್ಬಲವಾಗುತ್ತಿವೆ ಎಂಬ ವಾದವೂ ಇದೆ. ಈ ಸಮಿತಿಗಳು ಪ್ರಜಾಸತ್ತಾತ್ಮಕ ಸಂಸ್ಥೆಗಳಾಗಿದ್ದು ಪಂಚಾಯತಿ ವ್ಯವಸ್ಥೆಯ ಧ್ಯೇಯೋದ್ದೇಶಗಳನ್ನು ಜನತೆಗೆ ತಲುಪಿಸುವ ಸಾಧನಗಳಾಗಿವೆಯೇ ಎಂಬುದನ್ನು ಪರೀಕ್ಷಿಸಲಾಗಿದೆ.

ಸ್ಥಾಯಿಸಮಿತಿಗಳ ನಿರ್ಣಯಗಳನ್ನು ಸಾಮಾನ್ಯ ಸಭೆಗಳಲ್ಲಿ ಎಷ್ಟು ಬಾರಿ ಅನುಮೋದಿಸ ಲಾಗಿದೆ, ಎಷ್ಟು ಬಾರಿ ತಿರಸ್ಕರಿಸಲಾಗಿದೆ ಎಂಬುದನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದಾಗ ಬಹುತೇಕ ಸಮಿತಿಗಳ ನಿರ್ಣಯಗಳನ್ನು ಅಷ್ಟಾಗಿ ಪರಿಗಣಿಸದೆ ಇರುವುದು ಕಂಡುಬರುತ್ತದೆ. ಕೆಲವೊಮ್ಮೆ ಸ್ಥಾಯಿ ಸಮಿತಿಗಳ ನಿರ್ಣಯಗಳು ಆಯಾ ಪಂಚಾಯತಿ ವ್ಯಾಪ್ತಿಯಲ್ಲಿನ ಜಾತಿ ಮತ್ತು ಹಣದ ಪ್ರಭಾವದ ಮೂಲಕ ಚಾಲ್ತಿಯಾಗಿರುವುದು ಕಾಣಸಿಗಬಹುದು. ವಿಕೇಂದ್ರಿಕರಣ ತತ್ವಕ್ಕೆ ಅನುಗುಣವಾಗಿ ಸಮಿತಿಗಳನ್ನು ಪಂಚಾಯತ್ ಸಂಸ್ಥೆಗಳಲ್ಲಿ ರಚಿಸಿ ಕಾರ್ಯರೂಪಕ್ಕೆ ತರಬೇಕೆಂಬ ನಿಯಮ ಕಾಯಿದೆಯಲ್ಲಿ ಇದ್ದರೂ ಸಹ ಕೆಲವು ಗ್ರಾಮ ಪಂಚಾಯಿತಿಗಳಲ್ಲಿ ಸಮಿತಿಗಳನ್ನು ರಚಿಸದೆ ಇರುವ ಅಂಶಗಳು ಕ್ಷೇತ್ರಾಧ್ಯಯನದ ಸಂಧರ್ಭದಲ್ಲಿ ಗಮನಕ್ಕೆ ಬಂದಿದ್ದು ಈ ರೀತಿ ಸಮಿತಿಗಳನ್ನು ರಚಿಸದೇ ಕಾರ್ಯ ನಿರ್ವಹಿಸುತ್ತಿರುವುದು ಪಂಚಾಯತ್ ವ್ಯವಸ್ಥೆಯ ದೌರ್ಬಲ್ಯವನ್ನು ತೋರಿಸುತ್ತದೆ ಮತ್ತು ನಿಯಮಬಾಹಿರವಾಗಿದೆ ಎಂಬುದನ್ನು ಮನಗಾಣಬೇಕಾಗಿದೆ.

ನಿಗದಿತ ಕಾಲಕ್ಕೆ ಸರಿಯಾಗಿ ಸಮಿತಿಗಳನ್ನು ರಚಿಸಿದರೆ ಸಮಿತಿಗಳನ್ನು ಸದೃಢಗೊಳಿಸಬಹುದು. ಪಂಚಾಯತ್ ವ್ಯವಸ್ಥೆಯ ಇತ್ತೀಚಿನ ಬೆಳವಣಿಗೆಗಳನ್ನು ಗಮನಿಸುತ್ತಾ ಹೋದಲ್ಲಿ ಸಮಿತಿಗಳ ಜಾಗವನ್ನು ಉಪಸಮಿತಿಗಳು ಆಕ್ರಮಿಸಿರುವುದು ಹಾಗೂ ಇವುಗಳ ಕಾರ್ಯಕ್ಷಮತೆಯನ್ನು ಪರಿಗಣಿಸಿದ್ದಲ್ಲಿ ಸ್ವಲ್ಪ ಮಟ್ಟಿಗೆ ಸಕ್ರಿಯವಾಗಿರುವುದನ್ನು ಕಾಣಬಹುದಾಗಿದೆ.

## 6.1. ಅಧ್ಯಯನದ ಫಲಿತಗಳು

1. ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ ಪ್ರಕರಣ 61, 61ಎ, 148 ಮತ್ತು 186ರಲ್ಲಿ ಗ್ರಾಮ ಪಂಚಾಯತಿ, ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಗಳಲ್ಲಿ ಸ್ಥಾಯಿಸಮಿತಿಗಳ ರಚನೆಗೆ ಅವಕಾಶ ಕಲ್ಪಿಸಲಾಗಿರುವ ಜೊತೆಗೆ ಈ ಸಮಿತಿಗಳು ಕೆಲವೊಂದು ನಿರ್ಣಯಗಳನ್ನು ತೆಗೆದುಕೊಂಡು ಕಾರ್ಯನಿರ್ವಹಿಸಲು ಅವಕಾಶ ಕಲ್ಪಿಸಲಾಗಿದೆ. ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 270ರ ಪ್ರಕರಣವು ಮತ್ತೊಂದು ಕಡೆಯಿಂದ ಸ್ಥಾಯಿಸಮಿತಿಗಳ ಕಾರ್ಯಗಳ ಮೇಲೆ ನಿರ್ಬಂಧ ಹೇರಿರುವುದು ಕಂಡು ಬಂದಿದೆ. ಅಂದರೆ ಈ 270ರ ಪ್ರಕರಣದ ಅನ್ವಯ ತೆಗೆದುಕೊಂಡ ನಿರ್ಣಯಗಳನ್ನು ಜಿಲ್ಲಾ ಪಂಚಾಯತಿ ಮತ್ತು ತಾಲ್ಲೂಕು ಪಂಚಾಯತಿಗಳ ಸಾಮಾನ್ಯ ಸಭೆಗಳಲ್ಲಿ ಸ್ಥಾಯಿಸಮಿತಿಗಳ ತೀರ್ಮಾನಗಳನ್ನು ಪರಿಗಣಿಸಬಹುದು ಅಥವಾ ತಿರಸ್ಕರಿಸಬಹುದು. ಈ 270ನೇ ಪ್ರಕರಣವನ್ನು ಆಧಾರವಾಗಿಟ್ಟುಕೊಂಡು ಬಹುತೇಕ ಸ್ಥಾಯಿಸಮಿತಿಗಳ ನಿರ್ಣಯಗಳನ್ನು ಪರಿಗಣಿಸದೇ ಇರುವುದು ಕಂಡುಬರುತ್ತದೆ. ಆದ್ದರಿಂದ ಪ್ರಚಲಿತದಲ್ಲಿರುವ ಈ ಪಂಚಾಯತ್‌ರಾಜ್ ಕಾಯ್ದೆಯಲ್ಲಿಯೇ ಸ್ಥಾಯಿಸಮಿತಿಗಳನ್ನು ದುರ್ಬಲಗೊಳಿಸುವ ಅಂಶಗಳು ಕಂಡುಬಂದಿದೆ. ಹಾಗಾಗಿ ಇಂತಹ ಅಂಶಗಳನ್ನು ಕಾಯ್ದೆಯಲ್ಲಿ ತಿದ್ದುಪಡಿ ಮಾಡಬೇಕಾಗಿದೆ.

2. ಗ್ರಾಮ ಪಂಚಾಯತಿ ಮಟ್ಟದಲ್ಲಿ ಕ್ಷೇತ್ರ ಕಾರ್ಯವನ್ನು ಕೈಗೊಳ್ಳುವ ಸಂದರ್ಭದಲ್ಲಿ ಕಂಡುಬಂದಂತಹ ಪ್ರಮುಖ ಅಂಶವೆಂದರೆ ಬಹುತೇಕ ಗ್ರಾಮ ಪಂಚಾಯತಿಗಳಲ್ಲಿ ಸ್ಥಾಯಿಸಮಿತಿಗಳು ರಚನೆಯಾಗಿಲ್ಲದಿರುವುದು ಕಂಡು ಬಂದಿದೆ. ಕೆಲವು ಗ್ರಾಮಪಂಚಾಯಿತಿಗಳಲ್ಲಿ ದಾಖಲೆಗಳಲ್ಲಿ ಮಾತ್ರ ರಚಿತಗೊಂಡಿವೆ. ಇದಕ್ಕೆ ಸಂಬಂಧಿಸಿದಂತೆ ಕಾರಣಗಳನ್ನು ಹುಡುಕುತ್ತಾ ಹೋದಲ್ಲಿ ಸಮಿತಿಗಳ ರಚನೆ, ಅಧಿಕಾರ ಮತ್ತು ಕಾರ್ಯಗಳ ಬಗ್ಗೆ ಹಾಗೂ ಸ್ಥಾಯಿಸಮಿತಿಗಳು ಮತ್ತು ಗ್ರಾಮ ಪಂಚಾಯತಿಗಳ ನಡುವೆ ಇರುವ ಸಂಬಂಧದ ಬಗ್ಗೆ ಗ್ರಾಮ ಪಂಚಾಯತಿ ಸದಸ್ಯರಲ್ಲಿ ಸೂಕ್ತ ಅರಿವಿನ ಕೊರತೆ ಇರುವುದು ಕಂಡು ಬಂದಿದೆ.ಸಂದರ್ಶನ ಮಾಡಿದ ಸ್ಥಾಯಿಸಮಿತಿಗಳ ಶೇ80ರಷ್ಟು ಸದಸ್ಯರಲ್ಲಿ ಅರಿವಿನ ಕೊರತೆ ಇದೆ. ಹಾಗೆಯೇ ಗ್ರಾಮಸ್ಥರಲ್ಲಿ ಶೇ92ರಷ್ಟು ಜನರಿಗೆ ಅರಿವಿನ ಕೊರತೆ ಇರುವುದು ಕಂಡು ಬಂದಿದೆ, ಭಾಗವಹಿಸುವಿಕೆಯಲ್ಲಿ

ಉತ್ತಮ ಪ್ರತಿಕ್ರೀಯೆ ವ್ಯಕ್ತವಾಗಿಲ್ಲ ಆದರೆ ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಗಳ ಸದಸ್ಯರಲ್ಲಿ ಶೇ80ಕ್ಕು ಹೆಚ್ಚು ಸದಸ್ಯರಲ್ಲಿ ಅರಿವು ಮತ್ತು ಭಾಗವಹಿಸುವಿಕೆ ಅಧ್ಯಯನದಿಂದ ಗುರುತಿಸಲಾಗಿದೆ

3. ಗ್ರಾಮ ಪಂಚಾಯತಿ ಸ್ಥಾಯಿಸಮಿತಿಗಳು ರಚನೆಯಾಗದೆ ಇರುವುದಕ್ಕೆ ಕಾರಣಗಳನ್ನು ಹುಡುಕುತ್ತಾ ಹೋದಲ್ಲಿ ಗ್ರಾಮ ಪಂಚಾಯತಿಯಲ್ಲಿನ ಅಭಿವೃದ್ಧಿ ಅಧಿಕಾರಿಗಳು ಮತ್ತು ಕಾರ್ಯದರ್ಶಿಗಳ ನೆತೃತ್ವದಲ್ಲಿ ಸಮಿತಿಗಳ ರಚನೆಗೆ ಚಾಲನೆ ನೀಡಬೇಕಾಗಿದೆ. ಆದರೆ ಶೇ90ರಷ್ಟು ನೌಕರಶಾಹಿ ವರ್ಗದವರ  ನಿರ್ಲಕ್ಷ್ಯ ಮತ್ತು ಬೇಜವಾಬ್ದಾರಿತನದಿಂದ ಈ ಸಮಿತಿಗಳು ರಚಿಸಲ್ಪಟ್ಟಿಲ್ಲದೆ ಇರುವುದು ಕಂಡುಬಂದಿದೆ. ಈ ನೌಕರಶಾಹಿ ವರ್ಗದವರ ನಿರ್ಲಕ್ಷ್ಯ ಮತ್ತು ಬೇಜವಾಬ್ದಾರಿತನಕ್ಕೆ ಮೂಲ ಕಾರಣ ಹಣಕಾಸಿನ ಅಧಿಕಾರಗಳಿಲ್ಲ ಮತ್ತು ಜನರ ಸಹಭಾಗಿತ್ವ ಇಲ್ಲಾ.

4. ಗ್ರಾಮ ಪಂಚಾಯತಿ, ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಗಳ ಸಾಮಾಜಿಕ ನ್ಯಾಯ ಸಮಿತಿಗಳು ಯಾವುದೆ ಸಾಮಾಜಿಕ ಅನ್ಯಾಯ ಮತ್ತು ಶೋಷಣೆಗಳಿಂದ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ವರ್ಗಗಳಿಗೆ ರಕ್ಷಣೆ ನೀಡುವುದರ ಜೊತೆಗೆ ಮಹಿಳೆ ಮತ್ತು ಮಕ್ಕಳಿಗೆ ಸಾಮಾಜಿಕ ನ್ಯಾಯವನ್ನು ನೀಡುವಂತಹ ಗುರುತರವಾದ ಜವಾಬ್ದಾರಿಯನ್ನು ಈ ಸಮಿತಿಯು ಹೊಂದಿದೆ. ಗ್ರಾಮ ಪಂಚಾಯತಿಗಳ ಎಲ್ಲಾ ಸ್ಥಾಯಿಸಮಿತಿಗಳು ನಾಮಮಾತ್ರ ರಚನೆಗೊಂಡಿರುವುದು ಅಧ್ಯಯನದಲ್ಲಿ ಕಂಡುಬಂದಿದೆ. ಆದರೆ ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಯ ಸಾಮಾಜಿಕ ನ್ಯಾಯ ಸ್ಥಾಯಿಸಮಿತಿಗಳ  ವಿಶ್ಲೇಶಿಸಿದ ಸಂದರ್ಭದಲ್ಲಿ ಕಂಡುಬಂದತಹ ಪ್ರಮುಖ ಅಂಶವೆಂದರೆ ಈ ಸಮಿತಿಯು ಕೇವಲ ಹಾಸ್ಟೆಲ್‌ಗಳ ನಿರ್ಮಾಣ, ಸಮಾಜ ಕಲ್ಯಾಣ ಇಲಾಖೆ ಮುಖಾಂತರ ಅನುದಾನ ಬಿಡುಗಡೆ ಮಾಡಿಸಿರುವುದು, ಸಂಬಂಧಪಟ್ಟ ಯೋಜನೆಗಳ ಫಲಾನುಭವಿಗಳನ್ನು ಗುರುತಿಸುವುದು, ಈ ರೀತಿಯ ಹಣಕಾಸಿನ ಕಾರ್ಯಗಳಿಗೆ ಒತ್ತು ನೀಡಿರುವುದು ಕಂಡುಬಂದಿದೆಯೇ ವಿನಃ ದಲಿತರ ಮೇಲಿನ ದೌರ್ಜನ್ಯ ಪ್ರಕರಣ, ಮಹಿಳೆಯರು ಮತ್ತು ಮಕ್ಕಳ ಮೇಲಿನ ದೌರ್ಜನ್ಯ ಪ್ರಕರಣ, ದಲಿತರ ಬಹಿಷ್ಕಾರ, ಅಸ್ಪೃಶತೆ ಈ ರೀತಿಯ ಅನೇಕ ಸಾಮಾಜಿಕ ಪಿಡುಗುಗಳ ಬಗ್ಗೆ ಚರ್ಚಿಸಿ ಅವುಗಳಿಗೆ ಪರಿಹಾರ ಕಂಡುಹಿಡಿಯುವಂತಹ ಚರ್ಚೆಗಳು ಅಥವಾ ನಡವಳಿಗಳನ್ನು ಮಾಡಿರುವುದು ಕಂಡುಬಂದಿರುವುದಿಲ್ಲ. ಇದರ ಅರ್ಥ ಈ ಸಮಿತಿಗಳು  ಶೇ100ರಷ್ಟು ಸದಸ್ಯರು  ಹಣಕಾಸು ಮತ್ತು ಅನುಮೋದನೆಗಳಿಗೆ ಮಾತ್ರ ಗಮನ ಹರಿಸಿರುವುದು ಕಂಡುಬಂದಿದೆಯೇ ವಿನಃ; ಸಮಿತಿಯ ಮೂಲ ಉದ್ದೇಶವಾದ

